# ಅರ್ಪಣೆ

ಭಾರಿ ಮಳೆಯ ಕಾರಣದಿಂದ ಬದರಿನಾಥ ಕ್ಷೇತ್ರದಲ್ಲಿ ಸಿಲುಕಿ, ನಾವು ಅಲ್ಲಿ ಕಳೆದ ಆ ೧೨ ದಿನಗಳು ನಿಜಕ್ಕೂ ಮರೆಯಲಾಗದ ದಿನಗಳು. ಅಷ್ಟು ದಿನಗಳ ಕಾಲ ನಮ್ಮನ್ನು ಅಕ್ಷರಶಃ ಸಾಕಿ ಸಲಹಿ ನಮ್ಮ ಪಾಲಿನ ದೇವರುಗಳಾಗಿದ್ದರು ಈ ಇಬ್ಬರು – ಪವನ್ ಮತ್ತು ದಿನೇಶ್. ಆ ಕಷ್ಟಕಾಲದಲ್ಲಿ ನಮಗೆ ರಾಜಾತಿಥ್ಯ ನೀಡಿದ, ನಾವು ಮನೆಗೆ ಕ್ಷೇಮವಾಗಿ ಮರಳುವುದನ್ನೇ ಕಾಯುತ್ತಿದ್ದ ಈ ಮಾನವರೂಪದ ದೇವರುಗಳಿಗೆ....

ಹಾಗೂ ೨೧ ದಿನಗಳ ಕಾಲ ನಮ್ಮನ್ನು ತನ್ನೊಡಲಲ್ಲಿರಿಸಿಕೊಂಡು, ಅನುಭವದ ಸರಮಾಲೆಯನ್ನೇ ತೊಡಿಸಿದ ಆ ಹಿಮಾಲಯ ಪರ್ವತಸಾಲುಗಳಿಗೆ...

# ಒಂದು ಮಾತು...

ಉತ್ತರಾಖಂಡದಲ್ಲಿ ೮ ಜೂನ್ ರಿಂದ ೨೮ ಜೂನ್ ೨೦೧೩ ರವರೆಗೆ ನಾನು ಕಳೆದ ಮೂರು ವಾರಗಳ ಕಥನವಿದು. ಮೊದಲು ಸ್ವರ್ಗಸದೃಶ ಅನುಭವಗಳನ್ನೂ, ಮಹಾಪ್ರವಾಹದ ನಂತರದ ನರಕಮಯ ಬದುಕಿನ ಕಥೆಯನ್ನೂ ಇಲ್ಲಿ ಬರೆದಿದ್ದೇನೆ.

ಇದರಲ್ಲಿ ಸುಖವುಂಟು, ಸಂತಸವುಂಟು, ಸೌಂದರ್ಯದ ವರ್ಣನೆಯುಂಟು. ಹಾಗೆಯೇ ಪ್ರವಾಹದ ಭೀಕರತೆಯ ವಿವರವೂ, ಸಂತ್ರಸ್ತರ ಕಥೆಯೂ, ಮನೆ ತಲುಪಲು ಕೈಗೊಂಡ ಹೋರಾಟದ ವಿವರಗಳೂ ಉಂಟು.

ಈ ಪುಸ್ತಕ ಖಂಡಿತವಾಗಿಯೂ ೨೦೧೩ರ ಉತ್ತರಾಖಂಡ ಮಹಾಪ್ರವಾಹದ ವರದಿಯಂತೂ ಅಲ್ಲ. ಅದರ ಸಮಗ್ರ ಚಿತ್ರಣವನ್ನು ಅನೇಕ ಪತ್ರಿಕೆಗಳಲ್ಲೂ, ಸುದ್ದಿವಾಹಿನಿಯಲ್ಲೂ ಕಂಡಿರುತ್ತೀರಿ. "ಕನ್ನಡಪ್ರಭ" ವರದಿಗಾರರಾದ ಶ್ರೀ ರಾಧಾಕೃಷ್ಣ ಭಡ್ತಿಯವರಂತೂ  ಪ್ರವಾಹಾನಂತರ ಉತ್ತರಾಖಂಡದಾದ್ಯಂತ ತಿರುಗಾಡಿ ಸಂಗ್ರಹಿಸಿದ ವಿಷಯಗಳನ್ನು ಒಂದೆಡೆ ಸೇರಿಸಿ "ದೇವ ನೆಲದಲ್ಲಿ ರುದ್ರಭೂಮಿ" ಎಂಬ ಪುಸ್ತಕವನ್ನೇ ಬರೆದು ಬಿಡುಗಡೆಗೊಳಿಸಿದ್ದಾರೆ.

ನನ್ನ ಈ ಪುಸ್ತಕ ನಾ ಕಂಡ ಸಂಗತಿಗಳನ್ನಷ್ಟೇ ಒಳಗೊಂಡಿದೆ. ಇದು ನಮ್ಮದಷ್ಟೇ ಕಥೆ – ನಮ್ಮದೆಂದರೆ, ನಾನು ಮತ್ತು ನನ್ನಿಬ್ಬರು ಮಿತ್ರರದು. ಇಲ್ಲಿ ಏನೇನು ಬರೆದಿರುವೆನೋ, ಅವು ಯಾವುದೂ ಕಟ್ಟುಕಥೆಯಲ್ಲ. ಪ್ರಾಮಾಣಿಕವಾಗಿ ನಾನೇನು ಕಂಡು ಅನುಭವಿಸಿರುವೆನೋ, ಅದನ್ನೇ ಬರೆದಿರುವೆ. ಒಂದಷ್ಟು ವಿಷಯಗಳನ್ನು ಉದ್ದೇಶಪೂರ್ವಕವಾಗಿ ಬರೆದಿಲ್ಲವಾದರೂ ಅವು ಯಾವುವೂ ಯಾವುದೇ ರೀತಿಯಿಂದಲೂ ಇಲ್ಲಿ ಪ್ರಸ್ತುತವಲ್ಲ.

ಸಂತ್ರಸ್ತರ ನೆರವಿಗೆ ಬಂದ ಅಧಿಕಾರಿಗಳು ಹಲವರು. ಕರ್ನಾಟಕ ರಾಜ್ಯದ ಹಿರಿಯ ಅಧಿಕಾರಿಗಳಾದ ನವೀನ್‌ರಾಜ್ ಸಿಂಗ್, ಹೇಮಂತ್ ನಿಂಬಾಳ್ಕರ್, ಕರಿಗೌಡ, ಸುಪ್ರಸನ್ನ – ಇವರಷ್ಟೇ ಅಲ್ಲದೆ ಮಾಜಿ ಸಚಿವ ಸಂತೋಷ್ ಲಾಡ್ – ಇವರೆಲ್ಲರೂ ಕನ್ನಡದ ಜನರಿಗೆ ಒದಗಿಸಿದ ಸಹಾಯ ಅಪಾರ. ಅವರ ಕಾರ್ಯ ಮೆಚ್ಚುವಂತದ್ದೇ. ಆದರೆ ನಾವು ಯಾರ ಸಹಾಯ ಪಡೆದೆವೋ, ಅದನ್ನಷ್ಟೇ ಇಲ್ಲಿ ಬರೆದಿದ್ದೇನೆ. ವಾಸ್ತವವಾಗಿ ಅವರೆಲ್ಲರ ಸಹಾಯ ನಮಗಿಂತಲೂ ಹೆಚ್ಚಾಗಿ ಅಲ್ಲಿದ್ದ ಯುವಕರಲ್ಲದ ಕನ್ನಡಿಗರಿಗೆ ವರದಾನವಾಯಿತು.

"ನೂರು ಪುಟಕ್ಕೂ ಹೆಚ್ಚಿದೆಯಾ? ನಾನು ಓದಲ್ಲಪ್ಪ!" ಮಿತ್ರರೊಬ್ಬರು ನನ್ನ ಪುಸ್ತಕರಚನೆಯ ವಿಷಯವನ್ನು ಅರಿತ ನಂತರ ಹೊರಡಿಸಿದ ಉದ್ಗಾರವಿದು. ನನ್ನೆಲ್ಲ ಅನುಭವಗಳನ್ನು ಕಿರುಹೊತ್ತಿಗೆಯಾಗಿ ಬರೆಯಲು ಪ್ರಾರಂಭಿಸಿದ್ದರೂ ಹೇಳುವ ಸಂಗತಿಗಳು ಅನೇಕವಿದ್ದಿತಾದ್ದರಿಂದ ಪುಸ್ತಕ ಬೃಹತ್ ರೂಪ ತಾಳಿದೆ. ಅದಕ್ಕಾಗಿ ಕ್ಷಮೆಯಿರಲಿ. ಪುಸ್ತಕವನ್ನು ಎರಡು ಭಾಗಗಳನ್ನಾಗಿ ವಿಂಗಡಿಸಿದ್ದೇನೆ. ರಮಣೀಯ ಹಿಮಾಲಯವು ೮–೧೫ ಜೂನ್‌ರವರೆಗಿನ ನಮ್ಮ ಪ್ರವಾಸಕಥನವನ್ನು ಒಳಗೊಂಡಿದೆ. ರುದ್ರ ಹಿಮಾಲಯವು ಪ್ರವಾಹದ ವಿಚಾರವನ್ನೂ, ೧೬–೨೮ ಜೂನ್‌ವರೆಗಿನ ನಮ್ಮ ಅನುಭವಗಳನ್ನು ಹೊಂದಿದೆ. ಇವೆರಡೂ ಮುಖಗಳ ದರ್ಶನವನ್ನು ಸೂಚಿಸುವ ಸಲುವಾಗಿ "ರುದ್ರರಮಣೀಯ ಹಿಮಾಲಯ" ಎಂಬ ಶೀರ್ಷಿಕೆಯನ್ನು ಪುಸ್ತಕ ಹೊಂದಿದೆ.

ಅಷ್ಟಾಗಿ ಗೊತ್ತಿಲ್ಲದ ಸ್ಥಳಗಳ ಬಗ್ಗೆ ಸ್ವಲ್ಪ ಹೆಚ್ಚೇ ವಿವರ ಕೊಟ್ಟಿದ್ದೇನೆ. ನನ್ನ ಅನುಭವಗಳು, ಯಾರಾದರೂ ಆ ಜಾಗಗಳಿಗೆ ಹೋದಾಗ ಉಪಯೋಗಕ್ಕೆ ಬರಲಿ ಎಂಬ ಉದ್ದೇಶದಿಂದಷ್ಟೇ. ಕೆಲವೆಡೆ ಬೇಜಾರು ಬರಿಸುವಷ್ಟು ಕೊರೆದಿದ್ದೇನೆ ಕೂಡ! ಹವ್ಯಾಸಿ ಬರಹಗಾರನಾದ ನನ್ನ ತಪ್ಪನ್ನು ಮನ್ನಿಸಿ ಪುಸ್ತಕವನ್ನು ಓದಿ ಆಶೀರ್ವದಿಸಬೇಕಾಗಿ ವಿನಮ್ರತೆಯಿಂದ ನಿಮ್ಮಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ. ತಪ್ಪು ಕಂಡುಬಂದಲ್ಲಿ ನನಗೆ ತಿಳಿಸಿದರೆ, ಅದನ್ನು ತಿದ್ದಿಕೊಳ್ಳುವೆನೆಂದು ಈ ಮೂಲಕ ನಿವೇದಿಸಿಕೊಳ್ಳುತ್ತೇನೆ.

ನನ್ನ ಮಾತನ್ನು ಇಲ್ಲಿಗೇ ಮುಗಿಸುತ್ತೇನೆ. ನಿಮ್ಮ ತಾಳ್ಮೆಗೊಂದು ಹೃತ್ಪೂರ್ವಕ ನಮನ. ಇಲ್ಲಿಂದ ಮುಂದೆ ಹಿಮಾಲಯ ನಿಮಗಾಗಿ ಕಾಯುತ್ತಿದೆ...

ನಿಮ್ಮವ,

ಸೂರಜ್ ಕೃಷ್ಣಮೂರ್ತಿ

mailto.surajk@gmail.com

# ಕೃತಜ್ಞತೆಗಳು

ಮೊಟ್ಟಮೊದಲು, ಈ ಪ್ರವಾಸದಲ್ಲಿ ನನ್ನ ಜೊತೆಗಾರರಾಗಿದ್ದ, ಎಲ್ಲ ಹುಚ್ಚು ಸಾಹಸಗಳಲ್ಲೂ ನನ್ನೊಟ್ಟಿಗಿದ್ದ ಅಣ್ಣ ಜಯರಾಮ್ ಮತ್ತು ಮಿತ್ರರಾದ ಶ್ರೀಧರ್ ಅವರುಗಳಿಗೆ...

ತಮ್ಮ ಪ್ರಾಣ ಪಣವಾಗಿಟ್ಟು ಉತ್ತರಾಖಂಡದಲ್ಲಿ ಜನರಕ್ಷಣೆಗೆ ಮುಂದಾದ, ನಮ್ಮ ಉಳಿವಿಗೆ ಕಾರಣರಾದ ಭಾರತೀಯ ಸೇನೆ, ಭಾರತೀಯ ವಾಯುಸೇನೆ ಹಾಗೂ ಭಾರತ–ಟಿಬೆಟ್ ಸರಹದ್ದು ಪೊಲೀಸ್ ದಳಗಳ (ITBP) ಎಲ್ಲ ಸೈನಿಕರಿಗೆ...

ದೂರದೂರಿಗೆ ಹೋಗುತ್ತೇನೆಂದರೂ ತಲೆಕೆಡಿಸಿಕೊಳ್ಳದೆ ಸಂಪೂರ್ಣವಾಗಿ ಸಹಕರಿಸಿ, ಕಷ್ಟದಲ್ಲಿ ಸಿಲುಕಿದಾಗ ತಮ್ಮಿಂದಾದ ಎಲ್ಲ ಸಹಾಯ ಮಾಡಿದ ನನ್ನ ಪ್ರೀತಿಯ ಅಪ್ಪ–ಅಮ್ಮ ಮತ್ತು ಅಕ್ಕ–ಭಾವ ಅವರುಗಳಿಗೆ...

ಸದಾ ಯೋಗಕ್ಷೇಮ ವಿಚಾರಿಸುತ್ತಿದ್ದ ಅಣ್ಣಂದಿರು – ಅಕ್ಕಂದಿರಿಗೆ...

ನಾವು ಸಾಧ್ಯವಾದಷ್ಟು ಬೇಗ ಮರಳಿ ಬರುವ ಸಲುವಾಗಿ ನಿರಂತರವಾಗಿ ಪ್ರಯತ್ನ ಮಾಡುತ್ತಲೇ ಇದ್ದ ಶ್ರೀಮತಿ ವಾಣಿ ಶ್ರೀಧರ್ ಮತ್ತು ಶ್ರೀ ದೊಡ್ಡ ಗಣೇಶ್ ಅವರಿಗೆ...

ಪ್ರವಾಸದ ಯೋಜನೆ ರೂಪಿಸುವಲ್ಲಿ ಸಹಕರಿಸಿ, ನನ್ನೆಲ್ಲ ಪ್ರಶ್ನೆಗಳಿಗೂ ತಾಳ್ಮೆಯಿಂದ ಉತ್ತರಿಸಿ ಸಹಾಯ ನೀಡಿದ ಸ್ನೇಹಿತೆ, ಮಾಜಿ ಸಹಪಾಠಿ–ಸಹೋದ್ಯೋಗಿ ದೀಪಿಕಾ ಪ್ರಸಾದ್ ಅವರಿಗೆ...

"ಕಮ್ಮಿ ಬಟ್ಟೆ ತೊಗೊಂಡು ಹೋಗು" ಎಂಬ ಅತ್ಯಮೂಲ್ಯವಾದ ಸಲಹೆ ಕೊಟ್ಟು, ಪರೋಕ್ಷವಾಗಿ ಬೆನ್ನು ಉಳಿಸಿದ ಗೆಳೆಯ, ಸಹಪಾಠಿ, ಭಾರತೀಯ ವಿಜ್ಞಾನ ಸಂಸ್ಥೆಯ ಭರತಕುಮಾರ ಹೆಗಡೆ ಅವರಿಗೆ...

ನಾನು ಹಿಮಾಲಯಕ್ಕೆ ಪ್ರವಾಸ ಹೋಗುತ್ತಿರುವೆ ಎಂದು ತಿಳಿದಾಕ್ಷಣ ಅಲ್ಲಿನ ಬದುಕಿನ ಬಗ್ಗೆ ತನ್ನೆಲ್ಲ ಅನುಭವಗಳನ್ನು ಹಂಚಿಕೊಂಡ ಮಿತ್ರ, ಸಹಪಾಠಿ ಬಿಪಿನ್ ಕುಮಾರ್ ಅವರಿಗೆ...

ಹಿಮಾಲಯದಲ್ಲಿ ತಮಗಾದ ಅನುಭವಗಳನ್ನು ನನ್ನೊಂದಿಗೆ ಹಂಚಿಕೊಂಡು, ಅನೇಕ ಉಪಯುಕ್ತ ಮಾಹಿತಿಗಳನ್ನೊದಗಿಸಿದ ಹಿತೈಷಿ, ಅಮೆರಿಕದಲ್ಲಿ ನೆಲೆಸಿರುವ ಸ್ನೇಹಿತರಾದ ಲಾವಣ್ಯ ಅವರಿಗೆ...

ಬದರಿನಾಥ ಕ್ಷೇತ್ರದಲ್ಲಿ ನಾವು ೧೨ ದಿನ ತೊಂದರೆಯಿಲ್ಲದೆ ಕಳೆಯುವಂತೆ ಮಾಡಿದ ನಮ್ಮ ಪಾಲಿನ ದೇವರುಗಳಾದ ಪವನ್, ದಿನೇಶ್ ಮತ್ತು ರಮೇಶ್ ಅವರುಗಳಿಗೆ...

ಮೊದಲು ನಮ್ಮೊಂದಿಗೆ ಬರಲಾಗದೆ ಬೇಸರಿಸಿಕೊಂಡು, ನಂತರ ಅವಶ್ಯಕತೆ ಬಿದ್ದಾಗ ಶಕ್ತಿಮೀರಿ ಸಹಾಯ ಮಾಡಿ, ಸದಾ ಧೈರ್ಯ ಹೇಳುತ್ತಿದ್ದ ಮಿತ್ರ ಪರಮೇಶ್ ಅವರಿಗೆ...

ಸಂಪರ್ಕಕ್ಕೆ ಸಿಕ್ಕಿ "ಎಲ್ಲ ಸರಿಹೋಗುವುದು" ಎಂಬ ಭರವಸೆ ಮೂಡಿಸುತ್ತಿದ್ದ ಮಿತ್ರರಾದ ಅಭಿಲಾಷ್, ಹರ್ಷ, ಚೆನ್ನಕೇಶವ ಅವರಿಗೆ...

ಬೇರೆ ಪ್ರದೇಶದಲ್ಲಲ್ಲದೆ ಬದರಿನಾಥ ಕ್ಷೇತ್ರದಲ್ಲಿ ಸುರಕ್ಷಿತವಾಗಿ ಸಿಲುಕಿಕೊಳ್ಳುವಂತೆ ಮಾಡಿದ ಆ ಭಗವಂತನಿಗೆ...

ಪ್ರವಾಸದ ಯೋಜನೆಯಲ್ಲಿ ಹಲವು ಸಣ್ಣ ಬದಲಾವಣೆಗಳನ್ನು ಮಾಡಿ, ಅದರಿಂದ ನಮ್ಮ ಪ್ರಾಣ ಉಳಿಯುವಂತೆ ಮಾಡಿದ ಹರಿದ್ವಾರದ ಸುನಿಲ್ ಸೈನಿ ಅವರಿಗೆ...

ಪ್ರವಾಸ ಯಶಸ್ವಿಯಾಗುವಲ್ಲಿ ಮಹತ್ವದ ಪಾತ್ರ ವಹಿಸಿದ ಚಾಲಕ ಸುಮೇರ್ ಸಿಂಗ್ ಅವರಿಗೆ...

ಕಡೇ ಪಕ್ಷ ನೂರು ಬಾರಿಯಾದರೂ ನನ್ನೆಲ್ಲಾ ಕಥೆಗಳನ್ನು ಬೇಸರವಿಲ್ಲದೆ ಕುತೂಹಲದಿಂದ ಕೇಳಿದಂತಹ ಮಿತ್ರರಾದ ಭಾರ್ಗವ, ವಿಶ್ವಾಸ್, ಅಭಿರಾಮ್, ಅಜಯ್ ಶೆಣೈ ಅವರುಗಳಿಗೆ...

ನಿಧಾನವಾಗಿಯಾದರೂ ಈ ಅನುಭವವನ್ನು ಬರೆಯುವಂತೆ ಒತ್ತಾಯಪಡಿಸಿದ ಮಿತ್ರರಾದ ರಜತ್, ಪ್ರಮೋದ್, ಕಿರಣ್, ಪ್ರಸನ್ನ ಹೆಗಡೆ ಮತ್ತು ನಿಶಾಂತ್ ಅವರುಗಳಿಗೆ...

ಚಾರಣ ಮಾಡಿ ಮರಳಿ ಬರುವಷ್ಟು ಸಾಮರ್ಥ್ಯ ನೀಡಿದ ಅದೊಂದು ಅಗೋಚರ ಶಕ್ತಿಗೆ...

# ಆರಂಭಕ್ಕೂ ಮುನ್ನ...

ಸಾಗರ ಮತ್ತು ಬೆಟ್ಟಗುಡ್ಡಗಳು – ಇವೆರಡೂ ನನ್ನ ಪ್ರಕಾರ ಪ್ರಪಂಚದಲ್ಲಿ ಅತ್ಯಂತ ಸುಂದರವಾದ ಪ್ರದೇಶಗಳು. ಕೇರಳದ ಕಾಸರಗೋಡು ಸಮೀಪದ ಬೇಕಲಕೋಟೆಯಲ್ಲಿ ಕುಳಿತು ಸಮುದ್ರವನ್ನು ನೋಡಿದಾಗಲೂ, ಕೊಡಗು–ಚಿಕ್ಕಮಗಳೂರು ಜಿಲ್ಲೆಗಳಲ್ಲಿನ ಎತ್ತರವಾದ ಗಿರಿಶಿಖರಗಳಿಗೆ ಭೇಟಿ ನೀಡಿದಾಗಲೂ, ನನ್ನ ಮನದಲ್ಲುಂಟಾಗಿದ್ದ ಭಾವನೆಗಳನ್ನು ಪದಗಳಲ್ಲಿ ವಿವರಿಸಲು ಬಹು ಕಷ್ಟವಾಗಿತ್ತು. ಹಿಂದಿನ ವಾರವಷ್ಟೇ ಸಾಗರತಟದ ಸುಂದರ ನಗರವಾದ ಮಂಗಳೂರಿಗೆ ಸುತ್ತಾಡಲು ಹೋಗಿದ್ದ ನಾನು, ಮುಂದಿನ ಮೂರು ವಾರಗಳ ಕಾಲ ಭೂಲೋಕದ ಮೇಲಿನ ಅತ್ಯದ್ಭುತ ಪ್ರದೇಶಗಳಲ್ಲೊಂದಾದ ಹಿಮಾಲಯದಲ್ಲಿ ಕಳೆಯುವೆನೆಂದು ಖಂಡಿತವಾಗಿಯೂ ಊಹಿಸಿರಲಿಲ್ಲ.

ಹಾಗೆಂದು, ಮಹಾರಾಷ್ಟ್ರದ ಪುಣೆಯಿಂದ ಉತ್ತರಕ್ಕೆ ಎಂದೂ ಹೋಗದ ನನ್ನನ್ನು, ಹಿಮಾಲಯದ ಮಹಾಪರ್ವತಗಳು ಆಕರ್ಷಿಸಿದ್ದು ನಿಜಕ್ಕೂ ಆಕಸ್ಮಿಕವಲ್ಲ. "ಜೀವನದಲ್ಲಿ ಒಮ್ಮೆಯಾದರೂ ಹಿಮಾಲಯವನ್ನು ನೋಡಲೇಬೇಕು" ಎಂಬುದು ನನ್ನ ತಂದೆಯವರ ಆಶಯವಾದರೆ, "ಸಾಯುವುದಾದರೆ ಹಿಮಾಲಯದಲ್ಲೇ ಸಾಯಬೇಕು" ಎಂಬುದು ನನ್ನ ಅಣ್ಣನೊಬ್ಬನ ಅಭಿಪ್ರಾಯ. ಇವೆರಡರ ನಡುವೆ, ಹಿಮಾಲಯದ ಪರ್ವತದ ಸಾಲುಗಳನ್ನು ನೋಡುತ್ತ, ಆ ಹಿಮಾಚ್ಛಾದಿತ ಶಿಖರಗಳ ಸೌಂದರ್ಯವನ್ನು ಆಸ್ವಾದಿಸುತ್ತಾ ಏಕಾಂತದಲ್ಲಿ ಹಲವು ವಾರಗಳನ್ನು ಕಳೆಯಬೇಕೆಂಬ ಆಸೆ ಕೆಲವು ವರ್ಷಗಳಿಂದ ನನ್ನಲ್ಲಿ ಮೂಡಿತ್ತು.

ಈ ಆಸೆ ಕಳೆದೊಂದು ವರ್ಷದಿಂದ ಹೆಚ್ಚಾಗಲು ಕಾರಣ ಕೆಲವು ಸಾಹಸಪ್ರಿಯ ಮಿತ್ರರು. ೨೦೧೨ರಲ್ಲಿ ನನ್ನ ಅಣ್ಣ ಜಯರಾಮ್ ಕಾಶ್ಮೀರದ ಲದಾಖ್ ಪ್ರಾಂತ್ಯಕ್ಕೆ ಬೈಕಿನಲ್ಲಿ ಹೋಗಿದ್ದ. ಅಲ್ಲಿನ ಛಾಯಾಚಿತ್ರಗಳು, ಅವನ ಅನುಭವಗಳು ರೋಚಕವಾಗಿದ್ದು, ಮೈಮರೆಸುವಂತಿದ್ದವು. ಅಂತೆಯೇ, ಅದೇ ವರ್ಷ ಭಾರತೀಯ ವಿಜ್ಞಾನ ಸಂಸ್ಥೆಯ ಸಹಪಾಠಿಗಳಿಬ್ಬರು ಹಿಮಾಚಲ ಪ್ರದೇಶ ರಾಜ್ಯದ ಧರ್ಮಶಾಲಾ ನಗರದ ಸಮೀಪಕ್ಕೆ ೨ ವಾರಗಳ ಚಾರಣಕ್ಕೆ ಹೋಗಿಬಂದಿದ್ದರು. ಅವರುಗಳ ಬಾಯಿಂದ ಅಲ್ಲಿನ ವಿವರಗಳನ್ನು, ಆ ಪ್ರಕೃತಿಸೌಂದರ್ಯದ ವರ್ಣನೆಯನ್ನು ಕೇಳುತ್ತಿದ್ದಾಗ ರೋಮಾಂಚನವಾಗಿತ್ತು. ನಂತರ ನನ್ನ ಮಾಜಿ ಸಹಪಾಠಿಗಳು ಕೆಲವರು ಉತ್ತರಾಖಂಡದ ಪುಷ್ಪಗಳ ಕಣಿವೆಗೆ (Valley of Flowers) ಹೋಗಿಬಂದರೆಂದು ತಿಳಿದಾಗ ಆ ಸ್ಥಳದ ಬಗ್ಗೆ ಅಂತರ್ಜಾಲದಲ್ಲಿ ಬಹಳಷ್ಟು ಹುಡುಕಾಟ ನಡೆಸಿದ್ದೆ. ಓದಿದಷ್ಟೂ ಕುತೂಹಲ ಹೆಚ್ಚಿಸುತ್ತಿದ್ದ ಈ ಜಾಗಕ್ಕೆ ಮುಂದಿನ ವರ್ಷ ಖಂಡಿತ ಹೋಗೋಣವೆಂದು ನನ್ನೆಲ್ಲ ಮಿತ್ರರನ್ನು ಒಪ್ಪಿಸಿದ್ದೆ.

ಹಿಮಾಲಯಕ್ಕೆ ಹೋಗಲು ಜೂನ್–ಜುಲೈ–ಆಗಸ್ಟ್ ಮಾಸಗಳು ಅತ್ಯುತ್ತಮವಾದುವು. ೨೦೧೩ರ ಆರಂಭದಲ್ಲೇ, ಹೋಗೋಣವೆಂದು ನಿರ್ಧರಿಸುವ ಹಂತದಲ್ಲೇ ಕಾರಣಾಂತರಗಳಿಂದ ಮಿತ್ರರೆಲ್ಲರೂ ಪ್ರವಾಸದ ಯೋಜನೆಯಿಂದ ಹಿಂದೆ ಸರಿದಾಗ, ಕೊಂಚ ಬೇಸರ ಮೂಡಿ ಅಣ್ಣ ಜಯರಾಮನಲ್ಲಿ ದುಃಖ ತೋಡಿಕೊಂಡೆ. "ಅಚ್ಚರಿಗಳ ಸರೋವರ ರೂಪ್‌ಕುಂಡ್‌ಗೆ ಹೋಗೋಣ, ತಯಾರಾಗು. ನನ್ನ ಗೆಳೆಯರಾದ ಪರಮೇಶ್ ಮತ್ತು ಶ್ರೀಧರ್ ಅವರಿಗೂ ತಿಳಿಸುತ್ತೇನೆ" ಎಂದು ಹೇಳಿದಾಗ ನನ್ನ ಆನಂದಕ್ಕೆ ಪಾರವೇ ಇರಲಿಲ್ಲ. ರೂಪ್‌ಕುಂಡ್ ಬಗ್ಗೆಯೂ ಅಂತರ್ಜಾಲದಲ್ಲಿ ಸಂಶೋಧನೆ ನಡೆಸಲು ಪ್ರಾರಂಭಿಸಿದೆನಾದರೂ, ಪುಷ್ಪಗಳ ಕಣಿವೆಯ ಆರಾಧನೆ ಮಾತ್ರ ಕೊಂಚವೂ ಕಡಿಮೆಯಾಗಿರಲಿಲ್ಲ.

ಮುಂದಿನದು ಯೋಜನೆಯ ಹಂತ. ರೂಪ್‌ಕುಂಡ್ ನಮ್ಮ ಪಟ್ಟಿಯಲ್ಲಿ ಮೊದಲ ಸ್ಥಾನ ಪಡೆದಿತ್ತಾದರೂ, ನಂತರದಲ್ಲಿ ಏಕೆ ಅದನ್ನು ಬಿಟ್ಟು ಘಡವಾಲ್ (Garhwal) ಪ್ರಾಂತ್ಯದ ಪುಷ್ಪಗಳ ಕಣಿವೆಗೆ ಹೋಗಲು ನಿರ್ಧರಿಸಿದೆವೋ ಇಂದಿಗೂ ಅರಿಯೆನು. ಪ್ರಾಯಶಃ ಪುಷ್ಪಗಳ ಕಣಿವೆಯಷ್ಟೇ ಅಲ್ಲದೆ ಇತರ ಅನೇಕ ಸ್ಥಳಗಳಿಗೂ ಹೋಗಬಹುದೆಂಬ ಆಸೆಯಿಂದ ಹೀಗೆ ಮಾಡಿದೆವೇನೋ. ಘಡವಾಲ್ ಪ್ರಾಂತ್ಯ ಅನೇಕ ಸುಂದರ ಸ್ಥಳಗಳೂ, ದೇವಾಲಯಗಳಿಗೂ ಪ್ರಸಿದ್ಧವಾದುದು. ಬದರಿನಾಥ, ಕೇದಾರನಾಥ, ಗಂಗೋತ್ರಿ, ಯಮುನೋತ್ರಿ, ತುಂಗನಾಥ, ರುದ್ರಪ್ರಯಾಗ – ಈ ಧಾರ್ಮಿಕ ಸ್ಥಳಗಳು ಕೆಲವು ಉದಾಹರಣೆಗಳಷ್ಟೇ.

ಯಾವಾಗ ಪುಷ್ಪಗಳ ಕಣಿವೆಗೆ ಹೋಗುವುದೆಂದು ತೀರ್ಮಾನವಾಯಿತೋ ಆಗಲೇ ಬದರಿನಾಥ ಕ್ಷೇತ್ರವನ್ನೂ ನಮ್ಮ ಪಟ್ಟಿಗೆ ಸೇರಿಸಿದ್ದಾಯಿತು. ಅಂತೆಯೇ ಸಿಖ್ಖರಿಗೂ, ಹಿಂದೂಗಳಿಗೂ ಸಹ ಪವಿತ್ರ ಸ್ಥಳವಾದ ಹೇಮಕುಂಡ್ ಸಾಹಿಬ್‌ಗೂ ಹೋಗಿಬರುವುದೆಂದು ನಿರ್ಧರಿಸಿದೆವು. ಹತ್ತು ದಿನಗಳ ಪ್ರವಾಸವೆಂದು ಮೊದಲೇ ನಿರ್ಣಯಿಸಿದ್ದರಿಂದ ಇನ್ನೂ ಒಂದು ಸ್ಥಳ ಅಥವಾ ಚಾರಣವೊಂದನ್ನು ಸೇರಿಸಬಹುದೆಂದು ತಿಳಿದುಬಂತು. ಜಯರಾಮ್ ಕೇದಾರನಾಥ ಕ್ಷೇತ್ರಕ್ಕೂ, ನಾನು ಚೋಪತಾ ಸಮೀಪದ ತುಂಗನಾಥಕ್ಕೂ ಚಾರಣ ಹೋಗೋಣವೆಂದು ಸೂಚಿಸಿದೆವು. ಬಹಳಷ್ಟು ವಾದ–ವಿವಾದಗಳ ನಂತರ ಕೇದಾರನಾಥಕ್ಕೇ ಹೋಗಿಬರೋಣವೆಂದು ನಿರ್ಧರಿಸಿದೆವು. (ಚೋಪತಾ ಎಂಬ ಸಣ್ಣ ಹಳ್ಳಿ ಕೇದಾರನಾಥದಿಂದ ಬದರಿನಾಥಕ್ಕೆ ಹೋಗುವ ದಾರಿಯಲ್ಲಿದ್ದು, ಸಣ್ಣ ಸ್ವಿಟ್ಜರ್ಲೆಂಡ್ ಎಂದೇ ಪ್ರಸಿದ್ಧ. ಘಡವಾಲ್ ಪ್ರಾಂತ್ಯದಲ್ಲೇ ಈ ಜಾಗ ಅತ್ಯಂತ ಸುಂದರವಾಗಿದ್ದು, ಇದರಷ್ಟು ಸುಂದರವಾದ ಸ್ಥಳ ಮತ್ತೊಂದಿಲ್ಲ ಎಂದು ಸ್ಥಳೀಯ ಜನರ ಅಭಿಪ್ರಾಯ ಕೂಡ. ಆ ಮಾರ್ಗ ಕಿರಿದಾಗಿದೆಯಾದ್ದರಿಂದ ಅಲ್ಲಿ ದೊಡ್ಡ ಬಸ್‌ಗಳಿಗೆ ಪ್ರವೇಶವಿಲ್ಲ. ನಾವು ಕಾರ್‌ನಲ್ಲಿ ಹೋಗುತ್ತಿದ್ದೆವಾದ್ದರಿಂದ ಆ ಜಾಗಕ್ಕೆ ಹೋಗುವುದು ಸುಲಭವಾಗಿತ್ತು). ಹೇಗಿದ್ದರೂ ಜೋಶೀಮಠ ಎಂಬ ಊರಿನ ಮುಖಾಂತರವೇ

ಬದರಿನಾಥಕ್ಕೆ ಹೋಗಬೇಕಾದ್ದರಿಂದ, ಅದರ ಸಮೀಪದಲ್ಲಿರುವ ಔಲಿ ಎಂಬ ಊರಿಗೂ ಹೋಗುವುದೆಂದು ನಿಶ್ಚಯಿಸಿದೆವಾದರೂ, ಅದನ್ನು ಕೈಬಿಟ್ಟೆವು. ಔಲಿ Skiing ಗೆ ಪ್ರಸಿದ್ಧವಾದ ಸ್ಥಳವಾದರೂ, ಬೇಸಿಗೆಯ ಸಮಯವಾದ್ದರಿಂದ ಅಲ್ಲಿ ಹಿಮ ಇರುವುದಿಲ್ಲವೆಂದು ಬಲ್ಲವರು ತಿಳಿಸಿದ್ದರಿಂದಲೇ ನಾವು ಅದನ್ನು ಯೋಜನೆಯಿಂದ ದೂರವಿರಿಸಿದೆವು.

ಈ ನಡುವೆ ನಮ್ಮ ತಂಡದ ಸಂಖ್ಯೆ ಐದರಿಂದ ಮೂರಕ್ಕಿಳಿದು, ನಾನು, ಜಯರಾಮ್ ಮತ್ತು ಶ್ರೀಧರ್ ಮಾತ್ರ ಉಳಿದುಕೊಂಡೆವು. ಎಷ್ಟಿದ್ದರೇನು, ಹೋಗಬೇಕೆಂಬ ಭಾವನೆಯು ಬಲವಾಗಿದ್ದಲ್ಲಿ ಒಬ್ಬರೇ ಕೂಡಾ ಹೋಗಬಹುದು ಎಂಬ ಗಟ್ಟಿ ಮನಸ್ಸು ಮೂವರಿಗೂ ಇತ್ತು. ಅಷ್ಟೊಂದು ಉತ್ಸಾಹ ಇರುವಾಗ ನಮ್ಮನ್ನು ತಡೆಯುವವರಾರು! ಅವರಿಬ್ಬರೂ ನನಗಿಂತಲೂ ಹಿರಿಯರಾಗಿದ್ದು, ಜವಾಬ್ದಾರಿಯುತ ಜನರಾದ್ದರಿಂದ ನನಗೂ ಮನೆಯಲ್ಲಿ ಬಹಳ ಸುಲಭವಾಗಿ ಒಪ್ಪಿಗೆ ದೊರೆಯಿತು (ಒಪ್ಪಿಗೆ ದೊರೆಯಿತು ಎನ್ನುವುದಕ್ಕಿಂತಲೂ ದೊರಕಿಸಿಕೊಂಡೆನು ಎಂಬುದು ಸತ್ಯಕ್ಕೆ ಹತ್ತಿರವಾದುದು!)

ಮುಂದಿನದು ಸಿದ್ಧತೆಯ ಪರ್ವ. ಚಾರಣಕ್ಕೆ ಬೇಕಾದ ಸಾಮಗ್ರಿ, ಬೂಟು, backpack ಇವುಗಳನ್ನೆಲ್ಲಾ ಬೆಂಗಳೂರಿನ ಉದ್ದಗಲ ಅಲೆದಾಡಿ ಖರೀದಿಸಿದೆವು. ನಡುವೆ, ಬಲ್ಲವರಿಂದ ಕೇಳಿ ತಿಳಿದು, ಅವರ ಅನುಭವಗಳನ್ನೆಲ್ಲ ಅರಿತು ನಮ್ಮ ಯೋಜನೆಯನ್ನು ಚೂರು ಬದಲಿಸಿದೆವು. ಹರಿದ್ವಾರದಿಂದ ಪ್ರಾರಂಭಿಸಿ, ಮೊದಲು ಕೇದಾರನಾಥ, ನಂತರ ಮೂರು ದಿನಗಳ ಕಾಲ ಪುಷ್ಪಗಳ ಕಣಿವೆ ಹಾಗೂ ಹೇಮಕುಂಡ್ ಸಾಹಿಬ್, ಕಡೆಗೆ ಬದರಿನಾಥ, ಅಲ್ಲಿಂದ ಮರಳಿ ಹರಿದ್ವಾರಕ್ಕೆ ಬಂದು ದೆಹಲಿಯಲ್ಲಿ ಒಂದು ದಿನವಿದ್ದು ಬೆಂಗಳೂರಿಗೆ ವಾಪಸಾಗುವುದೆಂಬ ಖಚಿತ ಯೋಜನೆ ಸಿದ್ಧವಾಯಿತು. ಹೀಗೆ ಮಾಡಲು ಸೂಚಿಸಿದ ಹರಿದ್ವಾರದ ನಮ್ಮ ಪ್ರವಾಸ ಸಂಯೋಜಕ (Tour Organizer) ಕಾರ್ ಒಂದನ್ನು ಕಾಯ್ದಿರಿಸಿ, ಬೇಕಾದ ಕಡೆಯೆಲ್ಲ ವಸತಿ ಗೃಹಗಳ ವ್ಯವಸ್ಥೆ ಮಾಡಿಟ್ಟು ನಮಗಾಗಬಹುದಾಗಿದ್ದ ತೊಂದರೆಗಳನ್ನು ನಿವಾರಿಸಿದ. ಅವನಿಗೆ ಮುಂಗಡ ಹಣ ಪಾವತಿ ಮಾಡುವುದಷ್ಟೇ ನಮ್ಮ ಕೆಲಸವಾಯಿತು.

ಈ ಮಧ್ಯೆ ನನಗೆ ದೊಡ್ಡದೊಂದು ಸವಾಲು ಎದುರಾಯಿತು. ನನ್ನ ದೈಹಿಕ ಸಾಮರ್ಥ್ಯಕ್ಕೆ, ನನ್ನ ಸ್ಥೂಲಕಾಯಕ್ಕೆ ಈ ಚಾರಣದ ಸಾಹಸ ಆಗಿಬರುವುದೇ ಎಂದು. ಸ್ನೇಹಿತೆಯೊಬ್ಬರು "ಆ ಎತ್ತರದ ಪ್ರದೇಶದಲ್ಲಿ ಒಮ್ಮೊಮ್ಮೆ ಆಮ್ಲಜನಕದ ಕೊರತೆ ಕಾಡುವುದು, ಅಂತಹ ಸ್ಥಿತಿಯಲ್ಲಿ ಉಸಿರಾಟವು ನಿಯಂತ್ರಣಕ್ಕೆ ಸಿಗಬೇಕೆಂದರೆ ದೇಹವು ಮುಂಚೆಯೇ ತಯಾರಾಗಿರಬೇಕು. ಅದಕ್ಕಾಗಿ ಈಗಿನಿಂದಲೇ ದೇಹ ದಂಡಿಸು" ಎಂದು ಕೊಟ್ಟ ಸಲಹೆಯನ್ನು ಗಂಭೀರವಾಗಿ ಪರಿಗಣಿಸಿ, ಭಾರತೀಯ ವಿಜ್ಞಾನ

ಸಂಸ್ಥೆಯ ಸುವಿಶಾಲ ಕ್ರೀಡಾಂಗಣದಲ್ಲಿ ಹಲವು ಸುತ್ತು ಓಡಲು ಆರಂಭಿಸಿದೆ. ಆಕೆ ಹೇಳಿದ್ದು ನೂರಕ್ಕೆ ನೂರರಷ್ಟು ಸತ್ಯ – ಅನೇಕ ಕಡೆ ಆಮ್ಲಜನಕದ ಕೊರತೆ ತೀವ್ರವಾಗಿ ಕಾಡಿಸಿತ್ತು. ಇಷ್ಟೆಲ್ಲ ಮಾಡಿದ ನಂತರವೂ ನನ್ನ ದೈಹಿಕ ಸಾಮರ್ಥ್ಯ ಮೂರು ಕಾಸಿಗೆ ಪ್ರಯೋಜನವಿಲ್ಲವೆಂದು ಹಿಮಾಲಯ ಸಾಬೀತುಪಡಿಸಿತು. ನನ್ನಂತೆ ಇರುವ ಸ್ಥೂಲಕಾಯದ ಜನರಿಗೆ ಹಿಮಾಲಯ ಪರ್ವತಶ್ರೇಣಿ ಝಾಡಿಸಿ ಒದ್ದು ದೈಹಿಕ ಕ್ಷಮತೆಯ ಪಾಠ ಹೇಳುವುದು! ಅಲ್ಲಿನ ಸ್ಥಳೀಯ ಜನರ ಶಕ್ತಿಯೆದುರಿಗೆ ನನ್ನ ಶಕ್ತಿ ಆನೆಯ ಎದುರು ಇರುವೆಯಂತಿತ್ತು! ಆಕೆ ಒಂದೆರಡು ವರ್ಷಗಳ ಕಾಲ ಸತತವಾಗಿ ದೇಹದಂಡನೆ ಮಾಡಿ, ತೆಳ್ಳಗಾಗಿ ಅಲ್ಲಿಗೆ ಹೋಗು, ಸದ್ಯಕ್ಕೆ ನಿನ್ನ ಕೈಲಿ ಆಗುವ ಮಾತಲ್ಲ ಎಂದು ನನಗೆ ಹೇಳಿದ್ದರೂ ಅದು ಅತಿಶಯೋಕ್ತಿಯಲ್ಲ ಎಂಬ ಸಂಗತಿ ಚಾರಣ ಕೈಗೊಂಡಾಗ ಮನದಟ್ಟಾಯಿತು.

ಅಲ್ಲಿಗೆ ಎಲ್ಲವೂ ತಯಾರಾಗಿತ್ತು. ೮ ಜೂನ್ ೨೦೧೩ರಂದು ಬೆಂಗಳೂರಿನಿಂದ ಹೊರಟು, ೧೮ರಂದು ಮರಳಿ ಬರುವುದೆಂದು ಖಚಿತವಾಗಿತ್ತು. ಅದಕ್ಕೆ ತಕ್ಕಂತೆ, ವಿಮಾನದಲ್ಲಿ ಮುಂಗಡವಾಗಿ ಟಿಕೆಟ್‌ಗಳನ್ನು ಕಾಯ್ದಿರಿಸಿದ್ದೆವು. ವಸತಿಗೃಹಗಳಲ್ಲಿ ಮುಂಗಡ ಹಣ ಪಾವತಿಯಾಗಿತ್ತು. ಯಾವ ದಿನದಂದು ಎಲ್ಲಿಗೆ ಹೋಗಬೇಕು ಎಂಬ ಬಗ್ಗೆ ನಿರ್ಣಯ ಕೈಗೊಂಡಾಗಿತ್ತು. ಉತ್ತರ ಭಾರತಕ್ಕೆ ಇದು ನನ್ನ ಮೊದಲನೆಯ ಪ್ರವಾಸವಾಗಿದ್ದರಿಂದ, ನನಗೆ ದೆಹಲಿಯಲ್ಲಿ ಅಕ್ಷರಧಾಮ ಮಂದಿರವನ್ನು ತೋರಿಸುತ್ತೇವೆಂದು ಜಯರಾಮ್ ಮತ್ತು ಶ್ರೀಧರ್ ಇಬ್ಬರೂ ಹೇಳಿದ್ದರು. ಎಲ್ಲೂ ಯಾವ ರೀತಿಯ ಬದಲಾವಣೆಯೂ ಆಗುವ ಸಂಭವವಿರಲಿಲ್ಲ.

ವಿಧಿ ಸಹ ತನ್ನದೇ ದಾಳ ನಡೆಸಲು ಸಿದ್ಧವಾಗಿತ್ತೋ ಏನೋ. ಮುಂಬರುವ ಸಂಕಟಗಳ ಸರಮಾಲೆಯ ಸೂಚನೆ ನಮಗಂತೂ ದೊರೆತಿರಲಿಲ್ಲ. ನಮಗಾಗಿ ಏನೇನು ಕೌತುಕಗಳ ಮಹಾಪೂರ ಕಾಯುತ್ತಿದೆಯೋ ಎನ್ನುವುದರ ಕನಿಷ್ಠ ಅರಿವೂ ನಮಗಿರಲಿಲ್ಲ.

# ಹರಿದ್ವಾರ – ಉತ್ತರಾಖಂಡದ ಹೆಬ್ಬಾಗಿಲು

೮ ಜೂನ್ ೨೦೧೩, ಶನಿವಾರ. ನನ್ನ ಜೀವನದಲ್ಲೊಂದು ಅವಿಸ್ಮರಣೀಯ ದಿವಸ. ನನ್ನ ಸುದೀರ್ಘವಾದ ಹಿಮಾಲಯ ಪ್ರವಾಸದ ಮೊದಲನೆಯ ದಿನ. ದಕ್ಷಿಣ ಭಾರತಕ್ಕೆ, ಹೆಚ್ಚೆಂದರೆ ಮಹಾರಾಷ್ಟ್ರದ ಕೆಲವು ಊರುಗಳಿಗೆ ಸೀಮಿತಗೊಂಡಿದ್ದ ನನ್ನ ಹೆಜ್ಜೆಗುರುತನ್ನು ದೂರದ ಉತ್ತರಪ್ರದೇಶಕ್ಕೂ, ಉತ್ತರಾಖಂಡಕ್ಕೂ ವಿಸ್ತರಿಸುವ ಒಂದು ಅತ್ಯುತ್ತಮ ಅವಕಾಶವನ್ನು ಭಗವಂತ ನನಗೆ ನೀಡಿದ ದಿನ.

ಮುಂಜಾನೆ ಸೂರ್ಯ ಹುಟ್ಟುವ ಯೋಚನೆ ಮಾಡುವ ಮುನ್ನವೇ ನಾವು ಮೂವರೂ (ಶ್ರೀಧರ್, ಜಯರಾಮ್ ಮತ್ತು ನಾನು) ಬೆಂಗಳೂರಿನ ಕೆಂಪೇಗೌಡ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿ ಹಾಜರಾಗಿದ್ದೆವು. ಸೂರ್ಯ ಸೋಮಾರಿಯಾಗಿರಬಹುದು, ಆದರೆ ವಿಮಾನ ಪ್ರಯಾಣಿಕರಾಗಲೀ, ಅಥವಾ ವಿಮಾನ ನಿಲ್ದಾಣದಲ್ಲಿ ಕಾರ್ಯನಿರ್ವಹಿಸುವ ಸಿಬ್ಬಂದಿಯಾಗಲೀ ಸೋಮಾರಿಗಳಾಗಿರಲು ಸಾಧ್ಯವಿಲ್ಲ. ರಾತ್ರಿಯಿಡೀ ಎಚ್ಚರವಾಗಿರುವ ಬೆಂಗಳೂರಿನ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ ವಾರಾಂತ್ಯಗಳಲ್ಲಂತೂ ಜನಭರಿತವಾಗಿರುತ್ತದೆ. ವಾರವಿಡೀ ದುಡಿದು, ಶನಿವಾರ ಮುಂಜಾನೆ ತಮ್ಮ ತಮ್ಮ ಊರುಗಳಿಗೆ ಹೋಗುವ ಸಾವಿರಾರು ಮಂದಿ ಶುಕ್ರವಾರದ ಮಧ್ಯರಾತ್ರಿಯೇ ಅಲ್ಲಿ ಹಾಜರಾಗಿರುತ್ತಾರೆ.

ಹೇಗಿದ್ದರೂ ನಾವು ಬಹಳ ಮುಂಚೆಯೇ ಹೋಗಿದ್ದೆವಾದ್ದರಿಂದ ಅಪರೂಪಕ್ಕೊಂದು ಬಾರಿ ಅಪಾರವಾದ ಹಣತೆತ್ತು ಕಾಫಿ ಕೊಂಡು ಕುಡಿದೆವು. ಆ ಚಳಿಗೆ ಬಿಸಿಕಾಫಿ ಹಿತವಾಗಿತ್ತು. ಒಬ್ಬರನ್ನೊಬ್ಬರು ರೇಗಿಸಿಕೊಳ್ಳುತ್ತಾ, ಕಾಲೆಳೆಯುತ್ತಾ, ಸುತ್ತಮುತ್ತಲ ಜನರೆಲ್ಲರ ಬಗ್ಗೆ ನಮ್ಮದೇ ರೀತಿಯಲ್ಲಿ ಹಾಸ್ಯ ಮಾಡಿಕೊಳ್ಳುತ್ತಾ ವಿಮಾನವನ್ನೇರಿ ಕುಳಿತೆವು.

ನನಗಿನ್ನೂ ಚೆನ್ನಾಗಿ ನೆನಪಿದೆ. ೨೦೧೨ರಲ್ಲಿ ಜೀವನದಲ್ಲಿ ಮೊದಲನೆಯ ಬಾರಿ ಮಹಾರಾಷ್ಟ್ರದ ಪುಣೆಗೆ ಹೋಗಲು ವಿಮಾನವೇರಿದ್ದಾಗ ಕೂಡಾ ನನ್ನೊಂದಿಗೆ ಜಯರಾಮ್ ಇದ್ದ. "ವಿಮಾನ ಪ್ರಯಾಣ ತುಂಬಾ ಅಪಾಯಕಾರಿ. ವಿಮಾನ ಟೇಕ್‌ಆಫ್ ಅಥವಾ ಲ್ಯಾಂಡ್ ಆಗುವಾಗ ಏನು ಬೇಕಾದರೂ ಆಗಬಹುದು!" ಎಂದೆಲ್ಲ ಹೆದರಿಸುತ್ತಿದ್ದ. ಅಂದು ನಾನು ಮತ್ತು ನನ್ನೊಬ್ಬ ಅಣ್ಣ ಭಯದಿಂದ ಕಪಿಗಳಂತೆ ಆಡಿದ್ದೆವು. ಈ ಬಾರಿಯೂ ಜಯರಾಮ್ ಅದೇ ಆಟ ಹೂಡಲು ಪ್ರಯತ್ನಿಸಿದನಾದರೂ ಆ ಹಸಿಹಸಿ ಸುಳ್ಳನ್ನು ನಾನು ಕೇಳಿಸಿಕೊಳ್ಳುವ ಪ್ರಯತ್ನ ಸಹ ಮಾಡಲಿಲ್ಲ.

ಮೂರು ಗಂಟೆಗಳ ವಿಮಾನ ಪ್ರಯಾಣದಲ್ಲೇನೂ ವಿಶೇಷವಿರಲಿಲ್ಲ. ಕಿವಿಗೆ iPod ಚುಚ್ಚಿಕೊಂಡು ಸುಖವಾಗಿ ತೂಕಡಿಸಿದೆ. ಮುಂಜಾನೆಯ ಎಳೆಬಿಸಿಲು, ನನ್ನಿಷ್ಟದ ಗಾಯಕಿಯ ಇಂಪಾದ ಹಾಡುಗಳು, ಹೊಸ ಸ್ಥಳಗಳಿಗೆ ಹೋಗುತ್ತಿರುವೆನೆಂಬ ಆನಂದಭರಿತ ಕುತೂಹಲ – ಇವೆಲ್ಲದರ ಮಿಶ್ರಣ ನನ್ನನ್ನು ಸ್ವರ್ಗದಲ್ಲಿರಿಸಿತ್ತು. ಜಯರಾಮ್ ಮತ್ತು ಶ್ರೀಧರ್ ಕೂಡಾ ಬಹು ಆನಂದದಿಂದಿದ್ದರು.

ವಿಮಾನ ಕೆಳಗಿಳಿಯುವಾಗ ಚೂರು ಒರಟಾಗಿ ಇಳಿಯಿತು. ಚಾಲಕನ ಲ್ಯಾಂಡಿಂಗ್ ಮಾಡುವ ವೈಖರಿಯನ್ನು ಅಣಕಿಸಿಕೊಳ್ಳುತ್ತ, ಹಾಸ್ಯಮಾಡುತ್ತ ಕೆಳಗಿಳಿದ ನಮ್ಮನ್ನು ಸ್ವಾಗತಿಸಿದ್ದು ದೆಹಲಿಯ ಬಿರುಬಿಸಿಲು! ಮಂಜುಗಡ್ಡೆಯಿಂದ ನೇರ ಬೆಂಕಿಗೆ ಬಿದ್ದಂತಾಗಿತ್ತು ನಮ್ಮ ಪರಿಸ್ಥಿತಿ. ಅಂಥಾ ಸೆಖೆಯನ್ನು ನನ್ನ ಜೀವನದಲ್ಲೇ ಕಂಡಿದ್ದಿಲ್ಲ. ನನ್ನೂರು ಮೈಸೂರಿನ ಸೆಖೆಯೇ ಹೆಚ್ಚೆಂದು ಸದಾ ಕೊರಗುವ ನನಗೆ ಇದೊಂದು ಹೊಚ್ಚಹೊಸ ಅನುಭವ. ೪೬ ಡಿಗ್ರಿ ತಾಪಮಾನವಿದ್ದ ದೆಹಲಿಯಲ್ಲಿ ಅದು ಹೇಗೆ ಜನ ವಾಸವಾಗಿದ್ದಾರೋ ಅನ್ನಿಸುತ್ತಿತ್ತು.

ದೆಹಲಿಯಲ್ಲಿ ಕನಿಷ್ಠ ಮೂರು ಅಂತಾರಾಜ್ಯ ಬಸ್ ನಿಲ್ದಾಣಗಳಿವೆ. ನಮ್ಮ ಬೆಂಗಳೂರಿನಲ್ಲಿ ಹೇಗೆ ಬೇರೆ ಬೇರೆ ಊರುಗಳಿಗೆ ಹೋಗಲು ಬೇರೆ ಬೇರೆ ಬಸ್ ನಿಲ್ದಾಣಗಳಿಗೆ ಹೋಗಬೇಕೋ ಹಾಗೆಯೇ ದೆಹಲಿಯಲ್ಲೂ ಸಹ. ವ್ಯತ್ಯಾಸವೇನೆಂದರೆ ನಮ್ಮಲ್ಲಿ ದೊರೆಯುವಂತೆ ನಿಖರವಾದ ಮಾಹಿತಿ ಅಲ್ಲಿ ದೊರೆಯುವುದಿಲ್ಲ. ಹರಿದ್ವಾರಕ್ಕೆ ಹೋಗುವ ಬಸ್ ಹಿಡಿಯಲು ಕಾಶ್ಮೀರಿ ಗೇಟ್ ಬಸ್ ನಿಲ್ದಾಣಕ್ಕೆ ಹೋಗಬೇಕೋ ಅಥವಾ ಆನಂದ್ ವಿಹಾರ್ ಬಸ್ ನಿಲ್ದಾಣಕ್ಕೆ ಹೋಗಬೇಕೋ ಎನ್ನುವ ನಮ್ಮ ಸಂದೇಹ ಬಗೆಹರಿಯಲು ತೆಗೆದುಕೊಂಡಿದ್ದು ಬರೋಬ್ಬರಿ ೨೦ ನಿಮಿಷ. ಆ ಬಿಸಿಲಿನಲ್ಲಿ ಅಷ್ಟೇ ಸಮಯ ಕೂಡಾ ಅಸಹನೀಯವಾಗಿತ್ತು. ಅಂತೂ ಕಡೆಗೆ ISBT ಆನಂದ್ ವಿಹಾರ್ ಬಸ್ ತಂಗುದಾಣದಿಂದ ಹರಿದ್ವಾರಕ್ಕೆ ಹೋಗಲು ಬಸ್ ಸಿಗುವುದೆಂದು ಖಾತ್ರಿಯಾದ ನಂತರ ಅಲ್ಲಿಗೆ ಟ್ಯಾಕ್ಸಿ ಹಿಡಿದೆವು.

ಅತ್ಯಂತ ಜನಭರಿತ ನಗರವಾದರೂ ಸಹ ದೆಹಲಿಯ ರಸ್ತೆಗಳು ವಿಶಾಲವಾದ್ದರಿಂದ ವಾಹನಗಳ ದಟ್ಟಣೆ ಅಷ್ಟಾಗಿ ಗೋಚರಿಸುವುದಿಲ್ಲ. ಅದರಲ್ಲಿಯೂ ಶನಿವಾರ ಬೆಳಿಗ್ಗೆ ಉರಿಬಿಸಿಲಿನಲ್ಲಿ ಅನವಶ್ಯಕವಾಗಿ ಯಾವ ಮೂರ್ಖ ತಾನೇ ರಸ್ತೆಗೆ ಬರುವನು! ಆದರೂ ವಾಹನಸಂಚಾರ ಸಾಕಷ್ಟಿತ್ತು. ಬಸ್ ನಿಲ್ದಾಣ ಸಾಕಷ್ಟು ದೂರವೂ ಇತ್ತು. ಧಗೆಯಲ್ಲಿ ಅರ್ಧಗಂಟೆಯ ಯಾನದ ನಂತರ ಸಿಕ್ಕಿತ್ತು ISBT ಆನಂದ್ ವಿಹಾರ್.

ISBT ಆನಂದ್ ವಿಹಾರ್ ಬಹಳ ದೊಡ್ಡ ಬಸ್ ನಿಲ್ದಾಣ. ಅಲ್ಲಿಂದ ಉತ್ತರಾಖಂಡ, ಉತ್ತರಪ್ರದೇಶಗಳ ನೂರಾರು ನಗರ–ಪಟ್ಟಣಗಳಿಗೆ ಬಸ್ ವ್ಯವಸ್ಥೆಯಿದೆ. ನೂರಕ್ಕಿಂತ ಹೆಚ್ಚು ಅಂಕಣಗಳಿವೆಯಲ್ಲಿ.

ಮೂಲೆಯಲ್ಲಿದ್ದ ಹರಿದ್ವಾರದ ಅಂಕಣಕ್ಕೆ ಹೋದಾಗ ಅಲ್ಲಿದ್ದದ್ದು ಒಂದೇ ಹವಾನಿಯಂತ್ರಿತ ಬಸ್, ಜೊತೆಗೆ ನೂರಾರು ಪ್ರಯಾಣಿಕರು ಟಿಕೆಟ್‌ಗಾಗಿ ನಿರ್ವಾಹಕನನ್ನು ಕಾಡಿಸುತ್ತಿದ್ದರು. ಸಾಲಿನಲ್ಲಿ ನಿಂತು ಟಿಕೆಟ್ ಪಡೆಯುವ ಮಾತೇ ಇರಲಿಲ್ಲ. ಜನರ ಮಧ್ಯೆ ನುಗ್ಗಿ ಟಿಕೆಟ್ ತರುವ ಜವಾಬ್ದಾರಿ ಹಿಂದಿ ಅಂಕಿಗಳನ್ನು ಬಲ್ಲ ನನ್ನ ಹೆಗಲಿಗೆ ಬಿತ್ತು! ಯುದ್ಧ ಮಾಡಿ ಗೆದ್ದು ಟಿಕೆಟ್ ತಂದು ಅವರಿಬ್ಬರ ಕೈಗಿತ್ತಾಗ ನನ್ನಲ್ಲೂ ಚೂರುಪಾರು ಕೆಲಸ ಸಾಧಿಸುವ ಕಲೆಯಿದೆಯೆಂದು ತಿಳಿದು ನನ್ನ ಎನ್ನನ್ನು ನಾನೇ ತಟ್ಟಿಕೊಂಡೆ. ಆದರೆ ಆ ಸಂತೋಷ ಹೆಚ್ಚು ಹೊತ್ತು ಉಳಿಯುವಂತಿರಲಿಲ್ಲ! ಬಸ್ ಹತ್ತಿದಾಗಲೇ ತಿಳಿದದ್ದು, ಆ ಮುಠ್ಠಾಳ ನಿರ್ವಾಹಕ ನನ್ನದೇ ಸೀಟನ್ನು ಬೇರೊಬ್ಬನಿಗೂ ನೀಡಿದ್ದಾನೆಂದು! ಪುಣ್ಯಕ್ಕೆ ನಮ್ಮದು ಮೂರು ಟಿಕೆಟ್ ಇದ್ದಿದ್ದಾದ್ದರಿಂದ ನನ್ನನ್ನಂತೂ ಎಬ್ಬಿಸುವಂತಿರಲಿಲ್ಲ. ಪ್ರಯಾಣಿಕ ಕೂಡಾ ಅದನ್ನು ಅರಿತುಕೊಂಡು ನಿರ್ವಾಹಕನೊಡನೆ ಬೇರೆ ಸ್ಥಳ ನೀಡಲು ಜಗಳ ಆಡಿದನೇ ಹೊರತು ನನ್ನತ್ತ ತಿರುಗಿ ನೋಡಲೂ ಇಲ್ಲ. ಸಣ್ಣದೊಂದು ತಾಪತ್ರಯ ಹೀಗೆ ಅಂತ್ಯವಾಗಿತ್ತು.

ಮುಂದಿನ ಕೆಲವೇ ನಿಮಿಷಗಳಲ್ಲಿ ನನ್ನ ಪಕ್ಕ ಕುಳಿತಿದ್ದವನ ಜೊತೆಗೆ ಮಾತಿಗಿಳಿದೆ. ರೂರ್ಕಿ ನಗರದವನಾದ ಅವನು, ದೂರದ ಮುಂಬೈನ ಮೊಬೈಲ್ ಕಂಪೆನಿಯೊಂದರಲ್ಲಿ ಮಾರ್ಕೆಟಿಂಗ್ ಮ್ಯಾನೇಜರ್ ಆಗಿ ಕಾರ್ಯನಿರ್ವಹಿಸುತ್ತಿದ್ದ. ಕೆಲದಿನ ರಜೆ ಕಳೆಯುವುದಕ್ಕಾಗಿ ಮನೆಗೆ ಹೋಗುತ್ತಿದ್ದ. ನಾವು ಪುಷ್ಪಗಳ ಕಣಿವೆಗೆ ಹೋಗುತ್ತಿದ್ದೇವೆಂದು ತಿಳಿದೊಡನೆ ಬಹಳ ಹರ್ಷದಿಂದ, ತಾನೂ ಗುಡ್ಡಗಾಡಿನ ಕಡೆಯವನೇ, ತಂದೆಯವರ ಕಾಲದಿಂದ ರೂರ್ಕಿಯಲ್ಲಿ ನೆಲೆಸಿದ್ದೇವೆಂದ. ಗುಡ್ಡಗಾಡು ಪ್ರದೇಶದ ಜನಜೀವನದ ಮಾತಿನಿಂದ ಪ್ರಾರಂಭಗೊಂಡ ನಮ್ಮ ಸಂವಾದವು ಸಾಗದ ಹಾದಿಯಿಲ್ಲ. ಬಯಲುಸೀಮೆಯ ಜನಜಂಗುಳಿ, ಉತ್ತರಭಾರತದ ಮಳೆಗಾಲ, ಕಡೆಗೆ ಮೊಬೈಲ್ ಕಂಪೆನಿಗಳ ವ್ಯವಹಾರದ ವಿಷಯವೂ ನಮ್ಮ ಹರಟೆಯಲ್ಲಿ ಬಂದುಹೋದವು. ಐದಾರು ಗಂಟೆಗಳ ಪ್ರಯಾಣ! ತೆಪ್ಪಗೆ ಕುಳಿತರೆ, ಹವಾನಿಯಂತ್ರಿತ ಬಸ್ ಆಗಿದ್ದರೂ ಕೂಡ ಸೆಖೆಯ ಝಳದ ಅರಿವಾಗುತ್ತಿತ್ತು. ಪ್ರಾಯಶಃ ಆತನಿಗೂ ಹರಟೆ ಹೊಡೆಯುವ ಮನಸ್ಸಿತ್ತೋ ಏನೋ! ಜಯರಾಮ್ ಮತ್ತು ಶ್ರೀಧರ್ ಮಾತ್ರ ಪಕ್ಕದ ಸೀಟಿನಲ್ಲಿ ಸುಖವಾಗಿ ನಿದ್ದೆಮಾಡುತ್ತಿದ್ದರು.

ದೆಹಲಿ ಮತ್ತು ಘಾಜಿಯಾಬಾದ್ ನಗರಗಳಲ್ಲಿನ ಹುಚ್ಚು ವಾಹನದಟ್ಟಣೆ ನಿಧಾನವಾಗಿ ಕರಗಿ, ಮುಂದೆ ಮೀರತ್ ನಗರವನ್ನೂ ದಾಟಿಬಂದಿದ್ದೆವು. ವಿಮಾನದಲ್ಲಿ ಸ್ವಲ್ಪವೇ ತಿಂಡಿ ತಿಂದಿದ್ದರಿಂದ ಹಸಿವು ಬಹಳವಾಗಿತ್ತು. ಎಡೆಬಿಡದೆ ಮಾತನಾಡಿ ಇದ್ದೆಲ್ಲ ಶಕ್ತಿಯೂ ಕರಗಿತ್ತು. ಅಂತೂ ಇಂತೂ ಚಾಲಕನಿಗೆ ನಮ್ಮೆಲ್ಲರ ಮೇಲೆ ಕರುಣೆ ಬಂದು ಮೀರತ್–ಮುಜಫ್ಫರನಗರದ ನಡುವೆಯಿದ್ದ ಹೋಟೆಲ್‌ವೊಂದರ ಎದುರು ಬಸ್ಸನ್ನು ನಿಲ್ಲಿಸಿದ.

ಬಸ್ ನಿಲ್ಲಿಸಿದಾಕ್ಷಣ ಮಿತ್ರರಿಬ್ಬರೂ ನನ್ನ ಕಾಲೆಳೆಯಲು ಆರಂಭಿಸಿದರು. "ಪಾಪ ಆ ಮನುಷ್ಯ, ಅದೆಷ್ಟು ತಲೆ ತಿಂತೀಯಾ ಅವನದ್ದು. ರೂರ್ಕಿ ಬರುವಷ್ಟರಲ್ಲಿ ಅವನಿಗೆ ಹುಚ್ಚೇ ಹಿಡಿದಿರತ್ತೆ ನಿನ್ನೊಟ್ಟಿಗೆ ಮಾತಾಡಿ. ನಿಮ್ಮಿಬ್ಬರ ಹರಟೆಯಿಂದ ನಮಗೂ ಸರಿಯಾಗಿ ನಿದ್ದೆಯಿಲ್ಲ" ಎಂದು ತಮಾಷೆ ಮಾಡಿದರು. ಅವರಿಬ್ಬರಿಗೂ ನನ್ನ ಮಾತಿನ ಚಪಲದ ಬಗ್ಗೆ ಸಂಪೂರ್ಣ ಅರಿವು ಮೂಡಿದಂತಿರಲಿಲ್ಲ. ಪಾಪ, ಮುಂದಿನ ದಿನಗಳಲ್ಲಿ ಬಹಳ ಅನುಭವಿಸಬೇಕಾಯಿತು!

ಕೈಗೆ ಸಿಕ್ಕಿದ್ದನ್ನು ತಿಂದು ಹೊಟ್ಟೆ ತುಂಬಿಸಿಕೊಂಡು ಮತ್ತೆ ಬಂದು ಕುಳಿತಾಗ ಭುಕ್ತಾಯಾಸದ ಆಗಮನವಾಯಿತು. ಆದರೆ ಮನಸ್ಸಿನಲ್ಲಿದ್ದ ಉತ್ಸಾಹ ಬಲುಬೇಗ ಅದನ್ನು ಹೊಡೆದೋಡಿಸಿತು. ದಾರಿಯುದ್ದಕ್ಕೂ, ಕೇವಲ ಚಲನಚಿತ್ರಗಳಲ್ಲಿ ನೋಡಿದ್ದಂತಹ ಉತ್ತರಪ್ರದೇಶದ ಬಯಲುಸೀಮೆ ಕಣ್ಣೆದುರೇ ನಿಂತಿರಲು, ಹೊಸದೊಂದು ಆನಂದ ಮನೆಮಾಡಿತ್ತು. ಹೊಸ ಜಾಗಗಳ ಆಕರ್ಷಣೆ ಅದೆಷ್ಟು ಮಧುರ! ಪರಸ್ಥಳವಾದರೂ ಇವೆಲ್ಲವೂ ನಮ್ಮದೇ ಎನ್ನುವ ಆಪ್ತಭಾವನೆ! ಇವೆಲ್ಲದರ ನಡುವೆ ಬಸ್ಸು ಸಾಗುತ್ತಿದ್ದುದರ ಅರಿವೇ ಆಗಲಿಲ್ಲ. ಸೆಖೆಯೂ ಕೊಂಚ ಕಡಿಮೆಯಾಗಿದ್ದು, ಪ್ರಯಾಣ ಸುಖಕರವಾಗಿತ್ತು. ಅಲ್ಲಲ್ಲಿ ವಾಹನದಟ್ಟಣೆಯಿತ್ತೆಂಬುದನ್ನು ಬಿಟ್ಟರೆ ಪಯಣದ ಮಿಕ್ಕೆಲ್ಲ ಆಯಾಮಗಳು ಆರಾಮದಾಯಕವಾಗಿದ್ದವು.

ರೂರ್ಕಿ ಸಮೀಪಿಸಿತು. ಕನಸಿನ ಲೋಕ ಉತ್ತರಾಖಂಡಕ್ಕೆ ಕಾಲಿಟ್ಟಾಗಿತ್ತು. ಜೊತೆಯಲ್ಲಿದ್ದ ಸಹಪ್ರಯಾಣಿಕ ಇಳಿಯುವ ವೇಳೆ ಬಂದಿತ್ತು. ನಮ್ಮ ಮುಂದಿನ ಪ್ರವಾಸಕ್ಕೆ ಶುಭಾಶಯಗಳನ್ನು ತಿಳಿಸಿ ಇಳಿದು ಹೋದವನ ಮುಖದಲ್ಲಿ ಪತ್ನಿ–ಮಗ, ತಂದೆ–ತಾಯಿಯರನ್ನು ಭೇಟಿಮಾಡುವ ಕಾತರ ಮನೆಮಾಡಿತ್ತು. ಹೋಗುವ ಮುನ್ನ ಅವನು ಹೇಳಿದ ಮಾತು ಮರೆಯಲಾಗುವುದಿಲ್ಲ. "ಪುಷ್ಪಗಳ ಕಣಿವೆ ಯಾರನ್ನಾದರೂ ಒಬ್ಬ ಭಾವುಕ ಕವಿಯಾಗಿ ಮಾಡುತ್ತದೆ". ಆತನಿಗೇನು ಗೊತ್ತಿತ್ತು, ಇಡೀ ಉತ್ತರಾಖಂಡದಲ್ಲಿ ನಾನು ಗಳಿಸಹೊರಟಿರುವ ಅನುಭವ ನನ್ನನ್ನು ಅದೇನೇನು ಮಾಡಲು ಹೊರಟಿತ್ತೋ ಎಂದು!

ರೂರ್ಕಿ ಒಂದು ಸಣ್ಣ ನಗರ. ಸೇನೆಯ ಛಾವಣಿ ಹಾಗೂ ಭಾರತೀಯ ತಂತ್ರಜ್ಞಾನ ಸಂಸ್ಥೆಯ (IIT Roorkee) ಇರುವಿಕೆಯನ್ನು ಬಿಟ್ಟರೆ ಅಷ್ಟೇನೂ ಮಹತ್ವದ್ದಲ್ಲದ ನಗರವದು. ಉತ್ತರಾಖಂಡವೆಂಬ ಗುಡ್ಡಗಾಡಿನ ರಾಜ್ಯದ ಕೆಲವೇ ಬಯಲುಸೀಮೆಯ ನಗರಗಳಲ್ಲಿ ಇದೂ ಒಂದು. ಪ್ರವಾಸಿಗರಿಗೆ ಅಷ್ಟೇನೂ ಮುಖ್ಯವಲ್ಲದ ಸಾಮಾನ್ಯ ನಗರ ರೂರ್ಕಿ.

ರೂರ್ಕಿ ದಾಟಿ ಮುಂದೆ ಹೋಗುತ್ತಿರಲು ಜಾಗದ ಗುಣಲಕ್ಷಣ, ಹವೆ ನಿಧಾನವಾಗಿ ಬದಲಾಗುತ್ತಿರುವುದು ನಮ್ಮ ಅನುಭವಕ್ಕೆ ಬಂತು. ಹರಿದ್ವಾರದ ಸಮೀಪ ಬಂದಾಗ ಕಣ್ಣಿಗೆ ಬಿದ್ದ ಬೆಟ್ಟದ ಸಾಲುಗಳು ನಮ್ಮ ಕಾತರವನ್ನು ನೂರ್ಮಡಿಗೊಳಿಸಿದವು.

ಚಾರ್‌ಧಾಮ್ ಯಾತ್ರೆಯನ್ನು ಪ್ರಾರಂಭಿಸಲು ಹರಿದ್ವಾರವೇ ಬೇಸ್‌ಕ್ಯಾಂಪ್. ಗಂಗೆ ಹಿಮಾಲಯದ ಪರ್ವತಶ್ರೇಣಿಯನ್ನು ಬಿಟ್ಟು ಬಯಲುಭೂಮಿಯಲ್ಲಿ ಹರಿಯಲು ಆರಂಭಿಸುವುದೂ ಹರಿದ್ವಾರದಿಂದಲೇ. ಉತ್ತರಾಖಂಡ ರಾಜ್ಯವನ್ನು ದೇವಭೂಮಿಯೆಂದು ಏಕೆ ಕರೆಯುತ್ತಾರೆಂದು ತಿಳಿಯಲು ಕೇವಲ ಹರಿದ್ವಾರ ನಗರವೊಂದನ್ನು ನೋಡಿದರೇ ಗೊತ್ತಾಗುತ್ತದೆ. ಅಲ್ಲಿರುವಷ್ಟು ಅಪಾರ ಸಂಖ್ಯೆಯ ದೇವಾಲಯಗಳು, ಮಠ-ಆಶ್ರಮಗಳು, ಸಾಧು-ಸಂತರನ್ನು ದೇಶದ ಬೇರಾವುದೇ ರಾಜ್ಯದ ಯಾವ ನಗರದಲ್ಲಿಯೂ ನೋಡುವುದು ಕಷ್ಟ. ಆಧ್ಯಾತ್ಮಿಕ ಮತ್ತು ಯೋಗಿಕ ಸಾಧನೆಗಳತ್ತ ಒಲವಿದ್ದವರಿಗೆ ಹರಿದ್ವಾರ ಮತ್ತು ಹತ್ತಿರದ ಋಷಿಕೇಶ ನಗರಗಳು ಹೇಳಿ ಮಾಡಿಸಿದಂತಹ ಸ್ಥಳಗಳು. ಜನಜಂಗುಳಿಯಿದ್ದರೂ, ಸ್ವಚ್ಛತೆಗೆ ಕೊರತೆಯಿದ್ದರೂ ನಂಬಿಕೆಗಂತೂ ಇಲ್ಲಿ ಏನೇನೂ ಕೊರತೆಯಿಲ್ಲ.

ಬಸ್‌ನಿಂದ ಇಳಿದು ಅತ್ತಿತ್ತ ನೋಡುವಷ್ಟರಲ್ಲಿ ನಮ್ಮ ಪ್ರವಾಸ ಸಂಯೋಜಕ ಹಾಜರಾದ. ಸಮೀಪದಲ್ಲೇ ಇದ್ದ ಹೋಟೆಲ್‌ವೊಂದರಲ್ಲಿ ಆಗಲೇ ಕಾಯ್ದಿರಿಸಿದ್ದ ಕೊಠಡಿಗೆ ನಮ್ಮನ್ನು ಸೇರಿಸಿ ದಣಿವಾರಿಸಿಕೊಳ್ಳಲು ಹೇಳಿ ಹೊರಟುಹೋದ. ಕೊಠಡಿಗೇ ತರಿಸಿಕೊಂಡು ಕುಡಿದ ಕಾಫಿ ಮಾತ್ರ ಸೊಗಸಾಗಿತ್ತು. ಇಡೀ ೨೧ ಉತ್ತರಾಖಂಡ ಪ್ರವಾಸದಲ್ಲಿ ನಾವು ಕುಡಿದ ಅತ್ಯುತ್ತಮ ಕಾಫಿ ಅದಾಗಿತ್ತು. ಬೆಲೆ ಮಾತ್ರ ತೀರಾ ದುಬಾರಿ. ಅದೇನು ವಿಚಿತ್ರವೋ ಗೊತ್ತಿಲ್ಲ. ಇಡೀ ಉತ್ತರಾಖಂಡ ರಾಜ್ಯದಲ್ಲಿ ಕಾಫಿಯ ಬೆಲೆ ಬಹಳ ಹೆಚ್ಚು. ಕೆಲವೆಡೆ ಒಂದು ಸಣ್ಣ ಲೋಟಕ್ಕೆ ೩೦ ರೂಪಾಯಿ ತೆತ್ತದ್ದೂ ಉಂಟು. ಚಹಾ ಮಾತ್ರ ಸಾಮಾನ್ಯ ದರ.

ಗಂಗೆಯ ತೀರದಲ್ಲಿರುವ ಹರಿದ್ವಾರದಲ್ಲಿ ಸಂಜೆಯ ಸಮಯ ನಡೆಯುವ "ಗಂಗಾ ಆರತಿ" ಬಹಳ ಮಹತ್ವದ್ದು. ಸಾವಿರಾರು ಜನರು ಸೇರುವ ಈ ಸನ್ನಿವೇಶದಲ್ಲಿ ಭಕ್ತಿಭಾವನೆ ಮತ್ತೊಂದು ಮಜಲನ್ನೇರುತ್ತದೆ. "ಹರಿ ಕೀ ಪೌಡೀ" ಎಂಬ ಜಾಗದಲ್ಲಿ ನಡೆಯುವ ಈ ದಿನನಿತ್ಯದ ಉತ್ಸವವನ್ನು ಖಂಡಿತವಾಗಿಯೂ ನೋಡದೆ ಬಿಡಬಾರದೆಂದು ಮಿತ್ರರೊಬ್ಬರು ಒತ್ತಿ ಹೇಳಿದ್ದರು. ಅದರಂತೆಯೇ ನಮ್ಮ ಹೋಟೆಲ್ ಸಿಬ್ಬಂದಿ ಕೂಡಾ ಸಮೀಪದಲ್ಲೇ ಇದ್ದ ಆ ಜಾಗಕ್ಕೆ ಹೋಗಿ ಆ ಅತ್ಯುತ್ತಮ ಅನುಭವವನ್ನು ಪಡೆಯಲು ಹೇಳಿದರು.

ನಾವಿದ್ದ ಸ್ಥಳದಿಂದ ಕೇವಲ ಒಂದೂವರೆ ಕಿ.ಮೀ. ದೂರದಲ್ಲಿದ್ದ "ಹರಿ ಕೀ ಪೌಡೀ"ಗೆ ಹೋಗಲು ಸೈಕಲ್ ರಿಕ್ಷಾ ದೊರೆಯಿತು. ಕರ್ನಾಟಕದಲ್ಲಷ್ಟೇ ಏನು, ಇದುವರೆಗೂ ನಾನು ಸಂಚರಿಸಿದ ಯಾವುದೇ ಊರಿನಲ್ಲೂ ಕಾಣಿಸದ ಸೈಕಲ್ ರಿಕ್ಷಾ ನಿಜಕ್ಕೂ ಮಾನವನನ್ನು ಪಶುವಿನಂತೆ ಬಳಸಿಕೊಳ್ಳುವ ಒಂದು ಕೆಟ್ಟ ವ್ಯವಸ್ಥೆಯ ಪಳೆಯುಳಿಕೆಯಾಗಿ ತೋರಿತು. ಕೃಶಕಾಯದ, ವೃದ್ಧಾಪ್ಯದ ಸನಿಹದಲ್ಲಿರುವ ಒಬ್ಬ ವ್ಯಕ್ತಿಯು ಮೂವರು ಬಲಶಾಲಿ ಆರೋಗ್ಯವಂತ ಯುವಕರನ್ನು ರಿಕ್ಷಾದಲ್ಲಿ ಕೂರಿಸಿಕೊಂಡು ನೂಕುನುಗ್ಗಲಿದ್ದ ಆ ಪುಟ್ಟ, ಎತ್ತರ-ತಗ್ಗು ಮಿಶ್ರಿತ ರಸ್ತೆಯಲ್ಲಿ ತುಳಿಯುವುದು ಸಾಮಾನ್ಯದ ಮಾತೇನಲ್ಲ. "ಎಲ್ಲರೂ ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ, ತುತ್ತು ಹಿಟ್ಟಿಗಾಗಿ" ಎಂಬ ದಾಸವಾಣಿಯು ಅದೆಷ್ಟು ಅರ್ಥಪೂರ್ಣವಾಗಿದೆ! ಮುಂಚಿತವಾಗಿಯೇ ಒಪ್ಪಿಕೊಂಡಿದ್ದ ಅರವತ್ತು ರೂಪಾಯಿಗೆ ಬದಲಾಗಿ ನೂರು ರೂಪಾಯಿ ಕೈಗಿತ್ತಾಗ ಒಂದು ಅವ್ಯಕ್ತ ಸಮಾಧಾನ ಉಂಟಾಗಿ, ಪಾಪಪ್ರಜ್ಞೆ ಕೊಂಚವಾಗಿ ಮಾಯವಾಯಿತು. ವಾಹನಗಳು ಚಲಿಸಲು ಸಾಧ್ಯವಾಗುವಷ್ಟು ದೂರದವರೆಗೂ ನಮ್ಮನ್ನು ಕರೆದೊಯ್ದು ರಿಕ್ಷಾದವನು ವಾಪಸಾದ. ಅಲ್ಲಿಂದ ಮೂರು ನಿಮಿಷಗಳ ನಡಿಗೆಯ ದೂರದಲ್ಲಿತ್ತು "ಹರಿ ಕೀ ಪೌಡೀ".

ರಭಸದಿಂದ ಹರಿಯುವ ಗಂಗಾನದಿಯನ್ನು ಮೊದಲಬಾರಿಗೆ ನೋಡಿದಾಗ ಆಗುವ ಆನಂದವನ್ನು ವರ್ಣಿಸಲಸಾಧ್ಯ. ಘಟ್ಟವನ್ನಿಳಿದು ಬಂದ ಗಂಗೆ ಹಿಮಾಲಯವನ್ನೇ ಗೆದ್ದು ಬಂದಿರುವೆ, ಮುಂದೆ ನನಗಿನ್ನಾರು ಸಮ ಎನ್ನುವಂತೆ ಆವೇಶದಿಂದ ಹರಿಯುವಳು. ಗಂಗೆಯ ಪ್ರವಾಹದಂತೆಯೇ ಭಕ್ತರ, ಆಸ್ತಿಕರ ಭಕ್ತಿಯ ಪ್ರವಾಹವೂ ಅಪಾರವಿಲ್ಲಿ. ಸಾವಿರಾರು ಜನ ನದಿಯ ಎರಡೂ ದಡಗಳಲ್ಲಿ ಬೀಡುಬಿಟ್ಟು ತಮ್ಮತಮ್ಮ ಭಕ್ತಿಯನ್ನು ನಿವೇದಿಸಿಕೊಳ್ಳುವಲ್ಲಿ ನಿರತರಾಗಿದ್ದರು. ನದಿಗೆ ಅಡ್ಡವಾಗಿ ಕಟ್ಟಿರುವ ಸೇತುವೆಯ ಮೇಲೆ ನಿಂತು ಗಂಗಾ ಆರತಿಯ ವೇಳೆಯಾಗುವುದನ್ನು ಕಾಯುತ್ತಿದ್ದಾಗ ಸ್ಥಳೀಯ ಯುವಕನೊಬ್ಬ ಇದ್ದಕ್ಕಿದ್ದಂತೆ ಮೇಲಿನಿಂದ ನೀರಿಗೆ ಧುಮುಕಿದ! ಕಡೇಪಕ್ಷ ೨೦-೩೦ ಅಡಿಗಳ ಎತ್ತರವದು. ಎರಡು ಕ್ಷಣ ಪ್ರವಾಹದಲ್ಲಿ ಕೊಚ್ಚಿಹೋಗುವಂತೆ ಕಂಡುಬಂದರೂ ಕೂಡಲೇ ನಿಯಂತ್ರಣವನ್ನು ಗಳಿಸಿ ದಡಕ್ಕೆ ಈಜಿಹೋದ. ಪ್ರಾಯಶಃ ಈ ಕ್ರಿಯೆ ಅವನಿಗದು ಮಕ್ಕಳಾಟವೇನೋ! ಪ್ರವಾಸಿಗರಿಗಂತೂ ಅದು ಆಶ್ಚರ್ಯಕರವಾಗಿ ಕಂಡುಬಂದಿತ್ತು.

ಗಂಗಾ ಆರತಿ ಶುರುವಾದಾಕ್ಷಣ ಎಲ್ಲರ ಗಮನ ಅಲ್ಲಿಯೇ ನೆಟ್ಟಿತು. ಮಬ್ಬುಗತ್ತಲಲ್ಲಿ ನಡೆಯುವ ಈ ಕ್ರಿಯೆ ಬಲು ಆಕರ್ಷಣೀಯ. ಇಡೀ ಸಮೂಹದ ಭಕ್ತಿ ಒಂದೇ ಕಡೆ ನೆಲೆಗೊಂಡಾಗ ಅಲ್ಲಿ ಬೇರೆಯದೇ ವಾತಾವರಣ ನಿರ್ಮಾಣವಾಗಿರುತ್ತದೆ. ಆಸಕ್ತಿಯಿಲ್ಲದ್ದಿದ್ದವರನ್ನೂ ಅಯಸ್ಕಾಂತದಂತೆ ಸೆಳೆಯುವ ಶಕ್ತಿಯುಂಟು ಈ ಸಮೂಹ ಭಕ್ತಿಗೆ. ಸುಮಾರು ಅರ್ಧಘಂಟೆಗಳ ಕಾಲ ನಡೆದ ಈ ಕ್ರಿಯೆಯುದ್ದಕ್ಕೂ

ಜನಜಂಗುಳಿ ಹೆಚ್ಚಾಗುತ್ತಿತ್ತೇ ಹೊರತು ಕರಗುವ ಸೂಚನೆಯೇ ಇರಲಿಲ್ಲ. ದೇವರೆಡೆಗೆ ಅಷ್ಟೇನೂ ಶ್ರದ್ಧೆ–ಭಕ್ತಿ ಇರದವನನ್ನೂ ಕೆಲನಿಮಿಷದ ಮಟ್ಟಿಗೆ ಅಪ್ಪಟ ಆಸ್ತಿಕನನ್ನಾಗಿ ಪರಿವರ್ತಿಸುವ ಸಾಧನವಾಗಿರುವಂತಿತ್ತು "ಗಂಗಾ ಆರತಿ".

ಆರತಿಯ ನಂತರ ಹಬ್ಬದ ವಾತಾವರಣ ಮುಗಿದು ಜನ ಕಡಿಮೆಯಾಗತೊಡಗಿದರು. ನಾವು ಸಹ ನದಿಯಲ್ಲಿ ಕೈಕಾಲು ತೊಳೆಯಲು ಸೇತುವೆಯಿಂದ ಕೆಳಗಿಳಿದೆವು. ನದೀತೀರದಲ್ಲಿ ಅನೇಕ ಗಟ್ಟಿಯಾದ ಸರಪಳಿಗಳನ್ನು ಕಟ್ಟಿದ್ದಾರೆ. ಸ್ನಾನ ಮಾಡುವವರು ಅದನ್ನು ಹಿಡಿದೇ ಮುಳುಗು ಹಾಕಬೇಕೆಂಬ ಉದ್ದೇಶದಿಂದ ಈ ವ್ಯವಸ್ಥೆ. ನದಿಯ ವೇಗಕ್ಕೆ ಯಾರೂ ಕೊಚ್ಚಿಕೊಂಡು ಹೋಗಬಾರದೆಂದು ಈ ಮುನ್ನೆಚ್ಚರಿಕೆ. ಜೊತೆಗೆ ಸ್ನಾನಮಾಡುವ ಜಾಗಗಳನ್ನು ಗುರುತಿಸುವ ಸಲುವಾಗಿ ಕಬ್ಬಿಣದ ಕಂಬಿಗಳನ್ನು ನೆಟ್ಟಿದ್ದಾರೆ.

"ಹರಿ ಕೀ ಪೌಡೀ"ಯೊಂದಿಗೆ ಸದ್ಯಕ್ಕೆ ನಮ್ಮ ಹರಿದ್ವಾರದ ಯಾತ್ರೆ ಮುಗಿದಿತ್ತು. ಇರುವ ನೂರಾರು ದೇವಾಲಯಗಳಲ್ಲಿ – ಅದು ಎಷ್ಟೇ ಮುಖ್ಯವಾದದ್ದಾದರೂ ಸಹ – ಅದನ್ನು ನೋಡುವ ಕುತೂಹಲವಿರಲಿಲ್ಲ. ಅಪ್ಪಟ ದಕ್ಷಿಣ ಭಾರತೀಯರಂತೆ ದೋಸೆ–ಇಡ್ಲಿ ಹುಡುಕಿಕೊಂಡು ಅಲೆದಾಡಿದ ನಾವು ಕೊನೆಗೆ ತಿಂದಿದ್ದು "ವೆಜ್ ಮೋಮೋ" ಎಂಬ ಹೊಸ ತಿಂಡಿಯನ್ನು! ಜಯರಾಮ್ ಮತ್ತು ಶ್ರೀಧರ್ ಅದನ್ನು ಲದಾಖ್‌ನಲ್ಲಿ ತಿಂದಿದ್ದರಂತೆ. ನಮ್ಮಲ್ಲಿ ಮಾಡುವ ಖಾರದ ಕಡುಬು ನಾನು ಇದುವರೆಗೂ ತಿಂದಿರುವ ತಿಂಡಿಗಳಲ್ಲಿ "ವೆಜ್ ಮೋಮೋ"ಗೆ ಕೊಂಚವಾಗಿ ಹೋಲುತ್ತಿತ್ತು.

ಮಾರನೆಯ ದಿನದಿಂದ ಹಿಮಾಲಯವನ್ನು ಇನ್ನೂ ಹತ್ತಿರದಿಂದ ನೋಡುವ ಕಾತರ ಮನೆಮಾಡಿತ್ತು. ಅದೇ ಗುಂಗಿನಲ್ಲಿ ಸುಖವಾಗಿ ನಿದ್ದೆಹೋದೆವು. ಮರುದಿನ ನಮ್ಮ ಪ್ರವಾಸ ಸಂಯೋಜಕನನ್ನು ಭೇಟಿಮಾಡಿ, ಅವನಿಗೆ ಕೊಡಬೇಕಾಗಿದ್ದ ಬಾಕಿ ಹಣವನ್ನು ನೀಡಿ, ನಮಗಾಗಿ ಕಾದಿದ್ದ ಕಾರಿನ ಚಾಲಕನನ್ನು ಪರಿಚಯಿಸಿಕೊಂಡು, ಹರಿದ್ವಾರದಿಂದ ಮುಂದಕ್ಕೆ ಹೊರಟೆವು. ನಮ್ಮ ಪಯಣದ ಮತ್ತೊಂದು ಘಟ್ಟ ಪ್ರಾರಂಭವಾಗಿತ್ತು.

# ಗುಡ್ಡಗಾಡು ಪ್ರದೇಶದ ನಡುವಿನಲ್ಲಿ

೯ ಜೂನ್ ೨೦೧೩, ಭಾನುವಾರ... ಸಾವಿಲ್ಲದ ಮನೆಯಿಂದ ಸಾಸಿವೆ ತಂದವರಾರು... ಬೆಂಗಳೂರೆಂಬ ಮಹಾನಗರಿಯೊಳು ಟ್ರಾಫಿಕ್ ಎಂಬ ಗುಮ್ಮನಿಂದ ಕಾಡಿಸಿಕೊಳ್ಳದವರಾರು... ಹಿಂದಿನ ದಿನದ ಬಸ್ ಪ್ರಯಾಣದಲ್ಲಿ ನಮ್ಮನ್ನು ಪೀಡಿಸಿದ್ದ ಟ್ರಾಫಿಕ್ ಅಷ್ಟೇನೂ ಜನ ಓಡಾಡದ ಹರಿದ್ವಾರ-ಋಷಿಕೇಶ ರಸ್ತೆಯಲ್ಲೂ ನಮ್ಮನ್ನು ಬಿಡದಿರುವುದಿಲ್ಲವೆಂಬ ಸಂಗತಿಯನ್ನು ಕನಸಿನಲ್ಲಿಯೂ ಊಹಿಸಿಕೊಂಡಿರಲಿಲ್ಲ. ದೆಹಲಿಯ ಜನರು ವಾರಾಂತ್ಯ ಕಳೆಯಲು, ನೆಮ್ಮದಿಯನ್ನರಸಲು ಋಷಿಕೇಶದ ಸುಂದರ ಪರಿಸರಕ್ಕೆ ಬರುವರಂತೆ. ಇದಕ್ಕೆ ನಿದರ್ಶನವೆಂಬಂತೆ, ರಸ್ತೆಯಲ್ಲಿ ಕಂಡ ವಾಹನಗಳಲ್ಲಿ ಬಹುಪಾಲು ದೆಹಲಿ ಮತ್ತು ಹರಿಯಾಣಾ ರಾಜ್ಯಗಳಲ್ಲಿ ನೋಂದಣಿಯಾದವುಗಳು. ಋಷಿಕೇಶದಿಂದ ಕೊಂಚ ದೂರವಿರುವ ಶಿವಪುರಿ ಮತ್ತು ಕೌಡಿಯಾಲಾ ಊರುಗಳಲ್ಲಿ ನಡೆಯುವ "ರಿವರ್ ರ್‍ಯಾಫ್ಟಿಂಗ್" (River Rafting) ಎಂಬ ಸಾಹಸಕ್ರೀಡೆ ರಾಷ್ಟ್ರಾದ್ಯಂತ ಪ್ರಸಿದ್ಧ. ಜೊತೆಗೆ, ಜೂನ್ ಮಾಸವು ಚಾರ್‌ಧಾಮ್ ಯಾತ್ರೆಗೆ ಹೋಗುವವರಿಗೆ ಹೇಳಿ ಮಾಡಿಸಿದ ಸಮಯ. ಚಳಿಯೂ ಕಡಿಮೆ, ಮಳೆಯ ಹಾವಳಿಯೂ ಇರುವುದಿಲ್ಲ. ಇವೆಲ್ಲ ಕಾರಣಗಳಿಂದಾಗಿ ಉಂಟಾಗಿದ್ದ ವಾಹನದಟ್ಟಣೆಯಲ್ಲಿ ಸಿಲುಕಿದ್ದ ನಾವು, ೨೫ ಕಿ.ಮೀ ಸಾಗಲು ತೆಗೆದುಕೊಂಡ ಸಮಯ ಸುಮಾರು ಒಂದೂವರೆ ಗಂಟೆ. ಅದರಿಂದಾಚೆ ಕೌಡಿಯಾಲಾವರೆಗೂ ವಾಹನದಟ್ಟಣೆ ಇದ್ದೇ ಇತ್ತು. ವಾಹನದಟ್ಟಣೆಗಿಂತ ಹೆಚ್ಚಾಗಿ ಬೇಸರ ಮೂಡಿಸುತ್ತಿದ್ದ ವಿಷಯವೆಂದರೆ, ಬಯಲುಸೀಮೆಯ ಪ್ರದೇಶದಿಂದ ಬರುವ ಶತಮೂರ್ಖ ಚಾಲಕರು! ಗುಡ್ಡದಲ್ಲಿ ಓಡಿಸುವ ಸ್ಥಳೀಯ ಚಾಲಕರು ಯಾರೂ ರಸ್ತೆಯಲ್ಲಿನ ನಿಯಮಗಳನ್ನು ಮುರಿಯುವುದಿಲ್ಲ. ಪೊಲೀಸರ ಭಯದಿಂದಲ್ಲ, ತಮ್ಮಿಂದ ಯಾರಿಗೂ ತೊಂದರೆಯಾಗದಿರಲಿ ಎಂಬ ಸದಾಶಯದಿಂದ. ಇಕ್ಕಟ್ಟಾದ ಆ ರಸ್ತೆಗಳಲ್ಲಿ, ಒಬ್ಬ ಮಾಡುವ ತಪ್ಪಿನಿಂದ ಎಲ್ಲರಿಗೂ ಬಹಳಷ್ಟು ಸಮಯ ನಷ್ಟವಾಗುವುದು ಎಂಬ ಪ್ರಜ್ಞೆ ಅಲ್ಲಿ ಓಡಿಸುವವರೆಲ್ಲರಿಗೆ ಬರುವವರೆಗೂ ಅಲ್ಲಿನ ಟ್ರಾಫಿಕ್ ಸಮಸ್ಯೆಗೆ ಪರಿಹಾರವಿಲ್ಲ.

ರ್‍ಯಾಫ್ಟಿಂಗ್‌ನವರ ಹಾವಳಿ ಕಡಿಮೆಯಾದಂತೆಯೇ ನಮ್ಮ ಕಾರಿನ ವೇಗ ಹೆಚ್ಚಾಗತೊಡಗಿತು. ಹೆಚ್ಚು ಎಂದರೆ ಬೆಂಗಳೂರು-ಹುಬ್ಬಳ್ಳಿ ನಡುವಿನ ಹೆದ್ದಾರಿಯಲ್ಲಿ ಹೋಗುವಂತೆ ನೂರು ಕಿ.ಮೀ ವೇಗವಲ್ಲ. ಪರ್ವತಸೀಮೆಯಲ್ಲಿ ತಾಸಿಗೆ ೩೦ ಕಿ.ಮೀ ಪಯಣಿಸಿದರೂ ಅದೇ ಹೆಚ್ಚು! ಮುನ್ನೂರು ಕಿ.ಮೀ ದೂರ ಕ್ರಮಿಸಲು ಮುಂಜಾನೆಯಿಂದ ರಾತ್ರಿಯವರೆಗೂ ಸತತವಾಗಿ ಸಾಗಬೇಕು, ಅದೂ ರಸ್ತೆಗಳೆಲ್ಲವೂ ಸುಸ್ಥಿತಿಯಲ್ಲಿದ್ದರೆ ಮಾತ್ರ! ಮಧ್ಯೆ ಎಲ್ಲಿಯಾದರೂ ಭೂಕುಸಿತ ಉಂಟಾಗಿದ್ದಲ್ಲಿ ಅಲ್ಲಿಗೆ ಅಂದಿನ ಪಯಣ ಮುಕ್ತಾಯವಾದಂತೆಯೇ. ರಾಷ್ಟ್ರೀಯ ಹೆದ್ದಾರಿಯಾದರೂ ಪರ್ವತಪ್ರಾಂತ್ಯದ ರಸ್ತೆಗಳು

ಅಷ್ಟಕ್ಕಷ್ಟೇ. ಕೆಲವೆಡೆಯಂತೂ ರಸ್ತೆಯಿರುವುದೇ ಬಹುದೊಡ್ಡ ಸಂಗತಿಯಂತೆ ತೋರುವುದು – ಅಷ್ಟು ಇಕ್ಕಟ್ಟಿನ ಪ್ರದೇಶವದು.

ಗುಡ್ಡ ಪ್ರದೇಶದ ಹಾದಿಯಲ್ಲಿ ಅದೆಷ್ಟು ಪಯಣಿಸಿದರೂ ಬೇಸರ ಬಾರದು. ಎತ್ತೆತ್ತ ನೋಡಿದರೂ ಕೇವಲ ಬೆಟ್ಟಗುಡ್ಡಗಳೇ. ಹಿಮಾಲಯವೇ ಆದರೂ ಹಿಮ ಬೀಳುವಷ್ಟು ಎತ್ತರವಿರದಿದ್ದ ಕಾರಣ, ಹಾಗೂ ಸಾಕಷ್ಟು ಮಳೆಯಾಗುವ ಸ್ಥಳವಾದ್ದರಿಂದ ಹಸಿರಿಗೆ ಕೊರತೆಯಿರಲಿಲ್ಲ. ಆದರೂ, ನಾವು ಹೋದ ಸಂದರ್ಭದಲ್ಲಿ ಮಳೆ ಇನ್ನೂ ಪ್ರಾರಂಭವಾಗಿಲ್ಲವಾದ್ದರಿಂದ ಕೆಲವೆಡೆ ಬೋಳುಗುಡ್ಡಗಳೂ ಕಾಣುತ್ತಿದ್ದವು. ಶುಭ್ರ ನೀಲಾಕಾಶ ಮತ್ತು ಎಳೆಬಿಸಿಲು ನಮ್ಮ ಉತ್ಸಾಹ, ಆನಂದವನ್ನು ಹೆಚ್ಚುಗೊಳಿಸಿತ್ತು.

ದೆಹಲಿಯ ಸಮೀಪದ ಘಾಜಿಯಾಬಾದ್‌ನಿಂದ ಬದರಿನಾಥ ಕ್ಷೇತ್ರದ ಬಳಿಯಿರುವ ಮಾನಾ ಹಳ್ಳಿಯವರೆಗೂ ಸಾಗುವ ರಾಷ್ಟ್ರೀಯ ಹೆದ್ದಾರಿ ೫೮ ಉತ್ತರಾಖಂಡದ ಜೀವಾಳವೆಂಬುದರಲ್ಲಿ ಸಂಶಯವಿಲ್ಲ. ಬಹಳಷ್ಟು ಧಾರ್ಮಿಕ ಕ್ಷೇತ್ರಗಳ ಮೂಲಕ ಸಾಗುವ ಈ ಹೆದ್ದಾರಿಯ ಪಕ್ಕದಲ್ಲೇ ಬಹುದೂರದವರೆಗೂ ಗಂಗಾನದಿ ಹರಿಯುವುದು. ಬದರಿನಾಥದಲ್ಲಿ ಹುಟ್ಟುವ ಅಲಕನಂದಾ ನದಿಯು ಭೋರ್ಗರೆಯುತ್ತಾ ಹರಿದು, ನೂರಾರು ತೊರೆ, ನದಿಗಳನ್ನು ತನ್ನೊಡಲಲ್ಲಿ ಸೇರಿಸಿಕೊಂಡು, ಕಡೆಗೆ ರಾಜ್ಯದ ಮತ್ತೊಂದು ಮೂಲೆಯಾದ ಗಂಗೋತ್ರಿಯಲ್ಲಿ ಜನಿಸಿ ಹರಿದುಬರುವ ಭಾಗೀರಥಿಯನ್ನು ಸೇರಿ "ಗಂಗೆ"ಯಾಗಿ, ಇಡೀ ಉತ್ತರಭಾರತಕ್ಕೆ ಜೀವಕೊಡುವ ದೇವಿಯಾಗಿದ್ದಾಳೆ. ಅಲಕನಂದಾ–ಭಾಗೀರಥಿ ನದಿಗಳ ಸಂಗಮವಾಗುವ ಕ್ಷೇತ್ರವೇ ದೇವಪ್ರಯಾಗ. ಭಾಗೀರಥಿ, ಅಲಕನಂದೆಯರು ಸಂಗಮವಾಗುವ ಈ ಜಾಗದಲ್ಲಿ, ಎರಡೂ ನದಿಗಳ ನೀರಿನ ಬಣ್ಣದ ವ್ಯತ್ಯಾಸವನ್ನು ಬಹಳ ಸ್ಪಷ್ಟವಾಗಿ ಗಮನಿಸಬಹುದು.

ಸಂಸ್ಕೃತದಲ್ಲಿ ಪ್ರಯಾಗವೆಂದರೆ ನದಿಗಳ ಸಂಗಮವೆಂದರ್ಥ. ಹಿಂದೂ ತೀರ್ಥಕ್ಷೇತ್ರಗಳಾಗಿರುವ ಪಂಚಪ್ರಯಾಗಗಳಲ್ಲಿ ದೇವಪ್ರಯಾಗ ಕಡೆಯದು (ಮಿಕ್ಕ ನಾಲ್ಕು ಪ್ರಯಾಗಗಳು: ವಿಷ್ಣುಪ್ರಯಾಗ, ನಂದಪ್ರಯಾಗ, ಕರ್ಣಪ್ರಯಾಗ ಮತ್ತು ರುದ್ರಪ್ರಯಾಗ). ರಾಮಾಯಣದ ಕಾಲದಲ್ಲಿ, ಯುದ್ಧದ ನಂತರ ಶ್ರೀರಾಮನು ರಾವಣನ ಸಂಹಾರದಿಂದ ಉಂಟಾದ ಬ್ರಾಹ್ಮಣ ಹತ್ಯೆಯ ದೋಷವನ್ನು ಪರಿಹರಿಸಿಕೊಳ್ಳುವ ಸಲುವಾಗಿ ದೇವಪ್ರಯಾಗಕ್ಕೆ ಬಂದು ಪ್ರಾರ್ಥಿಸಿದ್ದನು ಎಂಬ ಕಥೆ ನಮ್ಮ ಪುರಾಣದಲ್ಲಿ ಪ್ರಚಲಿತ. ಮುಂಚಿತವಾಗಿಯೇ ಅರಿವಿರದಿದ್ದ ಈ ಸಂಗತಿಯನ್ನು ಸ್ಥಳೀಯ ಬಾಲಕರಿಬ್ಬರಿಂದ ಕೇಳಿ ತಿಳಿದುಕೊಂಡೆವು. ನದಿಗಳು ಸಂಗಮವಾಗುವ ಜಾಗದಲ್ಲಿ ರಾಮನ ಒಂದು ಸಣ್ಣ ಗುಡಿಯೂ ಉಂಟು. ಊರು ಹೆದ್ದಾರಿಯಿಂದ ಕೊಂಚ ಕೆಳಗಿದ್ದುದರಿಂದಲೂ, ನಮಗೆ ದೇವಾಲಯವನ್ನು ನೋಡುವ

ಇಚ್ಛೆಯಿರಲಿಲ್ಲವಾಗಿಯೂ ಮತ್ತು ಸಮಯದ ಅಭಾವದಿಂದಲೂ ನಾವು ಅಲ್ಲಿಗೆ ಹೋಗಲಿಲ್ಲ. ಎತ್ತರದಲ್ಲಿದ್ದ ಹೆದ್ದಾರಿಯಿಂದಲೇ ಸುಂದರವಾಗಿ ಕಾಣುತ್ತಿದ್ದ ದೇವಪ್ರಯಾಗದ ಚಿತ್ರವನ್ನು ಕಣ್ತುಂಬಿಕೊಂಡು ಮುಂದಕ್ಕೆ ಹೊರಟೆವು.

ಮುಂದೆ ಶ್ರೀನಗರವೆಂಬ ಮತ್ತೊಂದು ಊರನ್ನು ದಾಟಿ, ರುದ್ರಪ್ರಯಾಗವನ್ನು ತಲುಪಿದೆವು. ಶ್ರೀನಗರವೆಂದರೆ ಕಾಶ್ಮೀರದ ಶ್ರೀನಗರವಲ್ಲ. ಉತ್ತರಾಖಂಡದ ಪೌಡೀ ಘಡವಾಲ್ ಜಿಲ್ಲೆಯ ಒಂದು ಪ್ರಮುಖ ಪಟ್ಟಣ. ಇದು ಗುಡ್ಡಗಳಿಂದಲೇ ತುಂಬಿದ ಘಡವಾಲ್ ಪ್ರಾಂತ್ಯದಲ್ಲೇ ದೊಡ್ಡದಾದ ಊರಾಗಿದ್ದು, ವ್ಯಾಪಾರ ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲಿಯೂ ಗುರುತಿಸಿಕೊಂಡಿದೆ.

ರುದ್ರಪ್ರಯಾಗದಲ್ಲಿ ರಸ್ತೆ ಕವಲೊಡೆಯುತ್ತದೆ. ಬದರಿನಾಥದೆಡೆಗೆ ಹೋಗುವ ಹೆದ್ದಾರಿ ಒಂದಾದರೆ, ಮತ್ತೊಂದು ಕೇದಾರನಾಥಕ್ಕೆ ಹೋಗುವ ದಾರಿ. ಕೇದಾರನಾಥದಿಂದ ಹರಿದುಬರುವ ಮಂದಾಕಿನಿ ನದಿಯು ಅಲಕನಂದಾ ನದಿಗೆ ಸೇರುವ ಈ ಊರಿನಲ್ಲಿ ನಾರದಮಹರ್ಷಿಗಳು ತಪಸ್ಸನ್ನಾಚರಿಸಿದರೆಂಬುದಾಗಿ, ಅಲ್ಲಿ ನಾರದಶಿಲೆಯೆಂಬ ಹೆಸರಿನ ಸ್ಥಳವಿದೆ. ಇದನ್ನು ನೋಡುವ ಇಚ್ಛೆಯಿದ್ದರೂ ಕೂಡ, ಸಮಯದ ಅಭಾವದಿಂದ ಮುನ್ನಡೆಯಲೇಬೇಕಿತ್ತು. ಸಂಗಮದ ಬಳಿ ರಸ್ತೆಯಲ್ಲಿ ಮಾರುತ್ತಿದ್ದ ನಿಂಬೆ ಷರಬತ್ತನ್ನು ಕುಡಿದು ಕೇದಾರನಾಥದ ದಾರಿಯಲ್ಲಿರುವ ಗುಪ್ತಕಾಶಿಯತ್ತ ಹೊರಟೆವು.

ರುದ್ರಪ್ರಯಾಗದಿಂದ ಮುಂದಕ್ಕೆ ನಿಧಾನವಾಗಿ ಎತ್ತರದ ಪ್ರದೇಶದತ್ತ ಸಾಗುತ್ತಿರುವುದು ಅನುಭವಕ್ಕೆ ಬರುತ್ತಿತ್ತು. ವಾಹನಗಳು ಅತ್ಯಂತ ಕಡಿಮೆಯಿದ್ದ ಈ ರಸ್ತೆಯಲ್ಲಿ ಎತ್ತರದ ಗುಡ್ಡಗಳು, ಅವುಗಳನ್ನು ಅಲಂಕರಿಸಿರುವ ಎತ್ತರದ ಮರಗಳದ್ದೇ ಸಾಮ್ರಾಜ್ಯ. ಅಪರೂಪಕ್ಕೊಮ್ಮೊಮ್ಮೆ ಈ ಹಸಿರು ಸಾಗರದ ನಡುವೆ ಪುಟ್ಟ ಬಿಂದುಗಳಂತೆ ಕಾಣುವ ಬಣ್ಣಬಣ್ಣದ ಚಿಕ್ಕ ಗುಡಿಗಳು, ಮನೆಗಳು ಮನಮೋಹಕವಾಗಿದ್ದವು. ಎತ್ತರದಲ್ಲೆಲ್ಲೋ ಇರುತ್ತಿದ್ದ ಈ ಮನೆಗಳಿಗೆ ಹೋಗಲು ಕೆಲವೆಡೆ ಕಾಲುದಾರಿಯೂ ಕಾಣುತ್ತಿರಲಿಲ್ಲ. ಹಿಮಾಲಯದ ಸೀಮೆಯ ಬದುಕಿನ ಕಠಿಣತೆಯ ಅರಿವು ನಮಗಾಗುತ್ತಿತ್ತು. ಹಾಗೆಯೇ ಸುಮಾರು ಎರಡು ಗಂಟೆಗಳ ಪಯಣದ ನಂತರ ಗುಪ್ತಕಾಶಿ ತಲುಪಿದೆವು.

ಇಲ್ಲಿ ಒಂದು ಅಚಾತುರ್ಯವಾಯಿತು. ಗುಪ್ತಕಾಶಿಯಿಂದ ಸುಮಾರು ಇಪ್ಪತ್ತೈದು ಕಿ.ಮೀ ಹಿಂದಿದ್ದ ಸಣ್ಣ ಊರಾದ ಚಂದ್ರಪುರಿ ಎಂಬಲ್ಲಿ ಪ್ರಿನ್ಸ್ ಹೋಟೆಲ್‌ನಲ್ಲಿ ನಮ್ಮ ಕೊಠಡಿ ಕಾಯ್ದಿರಿಸಲಾಗಿತ್ತು. ಹರಿದ್ವಾರದ ನಮ್ಮ ಸಂಯೋಜಕ ನಮಗೆ ಕೊಟ್ಟ ವಿವರಗಳ ಫೈಲ್‌ನಲ್ಲಿ ಹೋಟೆಲ್ ಇರುವುದು

ಗುಪ್ತಕಾಶಿಯಲ್ಲಿ ಇರುವುದೆಂದು ಬರೆದಿದ್ದನಾದರೂ ಚಾಲಕನಿಗೆ ಚಂದ್ರಪುರಿ ಎಂದೇ ಹೇಳಿದ್ದ. ಚಾಲಕನ ಮಾತಿನಲ್ಲಿ ನಂಬಿಕೆ ಬರದೆ ಗುಪ್ತಕಾಶಿಗೆ ಹೋಗಿ ವಿಚಾರಿಸಿದಾಗ ಅಲ್ಲಿ ಕೂಡಾ ಒಂದು ಪ್ರಿನ್ಸ್ ಹೋಟೆಲ್ ಇದ್ದುದು ತಿಳಿಯಿತು. ಆ ಹೋಟೆಲ್‌ನ ವೃದ್ಧ ಒಡೆಯ ಮಹಾನ್ ಜಗಳಗಂಟ. "ನನ್ನಲ್ಲಿ ಯಾರೂ ಅಂತರ್ಜಾಲದಲ್ಲಿ ಕಾಯ್ದಿರಿಸುವುದಿಲ್ಲ, ನಿಮಗೆ ಕೊಠಡಿ ಬೇಕೆಂದರೆ ಮರ್ಯಾದೆಯಿಂದ ದುಡ್ಡು ಕೊಡಿ, ಇಲ್ಲವಾದರೆ ಹೊರಡಿ" ಎಂದು ಜೋರುಮಾಡಿದ. ಕೆಲಹೊತ್ತು ಅವನ ಜೊತೆ ವಾದಿಸಿದ ನಂತರ ನಮಗೆ ಸತ್ಯದ ಅರಿವಾಯಿತು. ಮುಂಗಡವಾಗಿ ಹಣ ಕೊಟ್ಟಿದ್ದರಿಂದ ಅಲ್ಲಿಗೆ ಹೋಗದಿದ್ದರೆ ಹಣ ವ್ಯರ್ಥವಾಗುವುದೆಂದು, ಅಲ್ಲಿಗೇ ಹೋಗೋಣವೆಂದು ಚಾಲಕನಿಗೆ ಹೇಳಿದೆವು. ಚಾಲಕನಿಗಂತೂ ನಮ್ಮ ಈ ನಿರ್ಣಯ ಎಳ್ಳಷ್ಟೂ ಇಷ್ಟವಿರಲಿಲ್ಲ. ಇಲ್ಲಿಯೂ ಕೊಠಡಿ ಲಭ್ಯವಿರುವಾಗ ಮತ್ತೇಕೆ ಹಿಂದಕ್ಕೆ ಹೋಗಬೇಕೆಂದು ಅವನ ವಾದ. ಚಂದ್ರಪುರಿಯ ಹೋಟೆಲ್‌ನಲ್ಲಿ ಎರಡು ದಿನಗಳಿಗಾಗಿ ಕೊಠಡಿ ಕಾಯ್ದಿರಿಸಿದ್ದೇವೆ ಎಂದು ಹೇಳಿದರೂ ಅವನಿಗೆ ಸಮಾಧಾನವಾಗಲಿಲ್ಲ.

ಕೇದಾರನಾಥಕ್ಕೆ ಹೋಗಲು ಗೌರಿಕುಂಡದವರೆಗೂ ಗಾಡಿಯಲ್ಲಿ ಹೋಗಿ, ಅಲ್ಲಿಂದ ಹದಿನಾಲ್ಕು ಕಿ.ಮೀ. ದೂರ ಕಾಲ್ನಡಿಗೆಯಲ್ಲಿ ಅಥವಾ ಕುದುರೆಯ ಮೇಲೆ ಸಾಗಬೇಕು. ಸ್ವರ್ಣಪ್ರಯಾಗವೆಂಬ ಜಾಗದಿಂದ (ಸೋನ್‌ಪ್ರಯಾಗ್) ಸುಮಾರು ೮–೧೦ ಕಿ.ಮೀ. ದೂರದ ಗೌರಿಕುಂಡದವರೆಗಿನ ರಸ್ತೆ ಅದೆಷ್ಟು ಕಡಿದಾಗಿದೆಯೆಂದರೆ ಅಲ್ಲಿ ಎರಡೂ ದಿಕ್ಕಿನಲ್ಲಿ ವಾಹನಗಳು ಚಲಿಸುವುದು ಅಸಾಧ್ಯ. ಅಂತೆಯೇ ಸ್ವರ್ಣಪ್ರಯಾಗದಲ್ಲಿ ಪೋಲಿಸರು ಗೇಟ್ ವ್ಯವಸ್ಥೆಯನ್ನು ಮಾಡಿ ವಾಹನಗಳನ್ನು ನಿಯಂತ್ರಿಸುತ್ತಾರೆ. ಒಮ್ಮೆಗೆ ಕೇವಲ ಐವತ್ತು ವಾಹನಗಳನ್ನು ಒಳಬಿಟ್ಟು, ಅವೆಲ್ಲವೂ ಯಾತ್ರಿಕರನ್ನು ಅಲ್ಲಿ ಬಿಟ್ಟು ಹಿಂದಿರುಗುವವರೆಗೂ ಗೇಟ್ ಮುಚ್ಚಿರುತ್ತದೆ. ಕಡೆಯ ವಾಹನ ಹೊರಗೆ ಬಂದ ನಂತರವೇ ಮುಂದಿನ ಐವತ್ತು ವಾಹನಗಳಿಗೆ ಪ್ರವೇಶ. ಹೀಗಾಗಿ ಒಮ್ಮೆ ಒಳಹೋಗುವ ಅವಕಾಶ ತಪ್ಪಿದರೆ ಕಡೇ ಪಕ್ಷ ಮುಕ್ಕಾಲು ಗಂಟೆಯಾದರೂ ಕಾಯಬೇಕಾಗುತ್ತದೆ. ಅಲ್ಲದೆ, ಮುಂಜಾನೆಯ ಸಮಯದಲ್ಲಿ ಯಾತ್ರಿಕರ ಸಂಖ್ಯೆ ಹೆಚ್ಚಾಗಿರುತ್ತದೆಯಾದ್ದರಿಂದ ಕಾಯುವ ಸಮಯವು ಸಹ ಹೆಚ್ಚಾಗುವ ಸಂಭವವುಂಟು.

ನಮ್ಮ ಚಾಲಕನ ಯೋಜನೆ – ನಾವು ಬೆಳಿಗ್ಗೆ ೪ ಗಂಟೆಗೇ ಗುಪ್ತಕಾಶಿಯಿಂದ ಹೊರಟು ೫.೦೦ಗೆ ಗೇಟ್ ತೆಗೆಯುವ ಸಮಯದಲ್ಲಿ ಅಲ್ಲಿದ್ದರೆ ಮೇಲೆ ಕೇದಾರನಾಥದ ದೇವಾಲಯದಲ್ಲಿ ಹೆಚ್ಚು ಸಮಯ ಕಳೆಯುವ ಅವಕಾಶ ದೊರೆಯುವುದೆಂದಾಗಿತ್ತು. ಆದರೆ ಮರಳಿ ಚಂದ್ರಪುರಿಗೆ ಹೋಗಬೇಕಾಯಿತಾದ್ದರಿಂದ ಆ ಯೋಜನೆಗೆ ಪೆಟ್ಟು ಬಿತ್ತು. ಚಂದ್ರಪುರಿಯಿಂದ ಗೌರಿಕುಂಡಕ್ಕೆ ಸುಮಾರು ೨ ಗಂಟೆಗಳ ಪ್ರಯಾಣ. ಜೊತೆಗೆ ಸದ್ಯಕ್ಕೆ ಹಿಂದಿರುಗಿ ಹೋಗಲೂ ಒಂದು ತಾಸು. ಆದರೂ

ವಿಧಿಯಿರಲಿಲ್ಲ. ಬೆಳಿಗ್ಗೆ ಮೂರು ಗಂಟೆಗೇ ಎದ್ದು ಹೊರಡೋಣವೆಂದು ನಿರ್ಧರಿಸಿ, ಚಂದ್ರಪುರಿಯ ದಾರಿ ಹಿಡಿದೆವು.

ಚಂದ್ರಪುರಿಯ ಪ್ರಿನ್ಸ್ ಹೋಟೆಲ್‌ಗೆ ಹೋಗಿ ಊಟ ಮಾಡಿ ನಮ್ಮ ಕೊಠಡಿಯನ್ನು ಸೇರಿದಾಗ ಸಮಯ ರಾತ್ರಿ ಹತ್ತು. ವಸತಿಗೃಹದ ಪಕ್ಕದಲ್ಲೇ ಭೋರ್ಗರೆಯುತ್ತ ಮಂದಾಕಿನಿ ನದಿ ಹರಿಯುತ್ತಿತ್ತು. ಜಿಟಿಜಿಟಿ ಮಳೆ ಸಹ ಸುರಿಯುತ್ತಿತ್ತು. ಆದರೂ ವಿಪರೀತ ಸೆಖೆ. ಕೊಠಡಿಯಲ್ಲಿ ಇರಲಾಗದೆ ಹೊರಹೋಗಿ ಆಕಾಶ ನೋಡುತ್ತಾ ಕುಳಿತಿದ್ದೆವು.

ನನ್ನ ವಿದ್ಯಾರ್ಥಿನಿಲಯದ ಕಟ್ಟಡ ಇಡೀ ಭಾರತೀಯ ವಿಜ್ಞಾನ ಸಂಸ್ಥೆಯಲ್ಲೇ ಎತ್ತರವಾದ ಕಟ್ಟಡ. ಅಲ್ಲಿನ ಛಾವಣಿಯ ಮೇಲೆ ಕುಳಿತು ರಾತ್ರಿಯ ವೇಳೆಯಲ್ಲಿ ಆಕಾಶವನ್ನು ನೋಡುತ್ತಿದ್ದರೆ, ದೊರಕುವ ನೆಮ್ಮದಿ ಅಪಾರ. ಅಷ್ಟೇನೂ ಒಳ್ಳೆಯ ಅನುಭವಗಳಾಗದ ದಿನಗಳನ್ನಂತೂ ನಾನು ಮುಕ್ತಾಯಗೊಳಿಸುವುದೇ ಹೀಗೆ. ಆದರೆ ಬೆಂಗಳೂರಿನ ಆಗಸದಲ್ಲಿ ನಕ್ಷತ್ರಗಳನ್ನು ಕಾಣುವುದು ಅತಿ ಅಪರೂಪ. ನಗರಪ್ರದೇಶದಲ್ಲಿರುವ ಪ್ರಖರ ಬೆಳಕು, ವಾಯುಮಾಲಿನ್ಯದ ಕಾರಣದಿಂದ ಸದಾ ಮೋಡ ಮುಸುಕಿದಂತಿದ್ದು, ಆಗಸವು ಸ್ಪಷ್ಟವಾಗಿ ಕಾಣುವುದೇ ಇಲ್ಲ. ಹೀಗಾಗಿ, ತುಂತುರು ಮಳೆಯಿದ್ದರೂ ಕೂಡ ಸ್ವಚ್ಛವಾಗಿ ಕಾಣುತ್ತಿದ್ದ ಚಂದ್ರಪುರಿಯ ಆಕಾಶ, ಮಿನುಗುತ್ತಿದ್ದ ನಕ್ಷತ್ರಗಳನ್ನು ಕಂಡು ಬಹಳ ಸಂತೋಷವಾಗುತ್ತಿತ್ತು. ಹೋಟೆಲ್ ಎದುರಿನ ರಸ್ತೆಯಲ್ಲಿ ಕತ್ತಲಿನಲ್ಲೇ ಅಡ್ಡಾಡುತ್ತಾ ಕಲುಷಿತಗೊಂಡಿರದ ಗಾಳಿಯನ್ನು ಸೇವಿಸುತ್ತ ಸ್ವಚ್ಛಂದವಾಗಿ ವಿಹರಿಸುತ್ತಿದ್ದ ನಮಗೆ ಹೋಟೆಲ್‌ನ ವ್ಯವಸ್ಥಾಪಕ ಆತಂಕಕ್ಕೀಡುಮಾಡುವ ಒಂದು ಸುದ್ದಿ ಹೇಳಿದ.

ಅವನಿಗೆ ಬಂದ ಮಾಹಿತಿಯ ಪ್ರಕಾರ ಮರುದಿನ ಕೇದಾರನಾಥದಲ್ಲಿ ಕುದುರೆಯವರು, ಡೋಲಿಯವರು ಮುಷ್ಕರ ಹೂಡಲಿದ್ದರು. ಗೌರಿಕುಂಡದಿಂದ ಕೇದಾರನಾಥದ ದಾರಿಯಲ್ಲಿರುವ ಅಂಗಡಿಗಳ ಮಾಲೀಕರು ಸಹ ಅವರೊಂದಿಗೆ ಕೈಜೋಡಿಸಿದ್ದರಂತೆ. ಕಾರಣ, ಗುಪ್ತಕಾಶಿಯ ಸಮೀಪದ ಫಾಟಾದಿಂದ ಕೇದಾರನಾಥ ಸನ್ನಿಧಿಗೆ ಓಡಿಸುತ್ತಿರುವ ಖಾಸಗಿ ಹೆಲಿಕಾಪ್ಟರ್‌ಗಳಿಂದ ಅವರುಗಳ ಆದಾಯಕ್ಕೆ ಧಕ್ಕೆ ಬರುತ್ತಿರುವುದು. ಆದ್ದರಿಂದ ದೇವಾಲಯವು ತೆರೆದಿರುವುದಾದರೂ, ಬೇರೆ ಯಾವ ಸೌಲಭ್ಯವೂ ದೊರೆಯುವುದಿಲ್ಲವೆಂದು ಪೋಲಿಸರು ಅವನಿಗೆ ತಿಳಿಸಿ ಹೋಗಿದ್ದರಂತೆ. ಕೊಂಚ ಧೈರ್ಯಗೆಟ್ಟರೂ ಸಹ, ಕುದುರೆಯಿಲ್ಲದಿದ್ದರೇನಂತೆ, ಕಾಲ್ನಡಿಗೆಯಲ್ಲೇ ಹೋಗೋಣವೆಂದು ತೀರ್ಮಾನಿಸಿಕೊಂಡೆವು. ಹೋಟೆಲ್‌ನವ ನಮಗಾಗಿ ತಯಾರಿಸಿಕೊಟ್ಟ ಸ್ಯಾಂಡ್‌ವಿಚ್‌ಗಳನ್ನು ನಮ್ಮ ಬ್ಯಾಕ್‌ಪ್ಯಾಕ್‌ಗೆ ಸೇರಿಸಿ

ಮಲಗುವಾಗ ಮಧ್ಯರಾತ್ರಿಯ ವೇಳೆಯಾಗಿತ್ತು. ಕನಿಷ್ಠ ಎರಡೂವರೆ ತಾಸುಗಳ ನಿದ್ರೆಯಾದರೂ ತೆಗೆಯುವ ಆಸೆಯಿಂದ ಕಣ್ಮುಚ್ಚಿದೆವು.

ಮಲಗಿದರೂ ನೆಮ್ಮದಿಯ ನಿದ್ರೆ ತೆಗೆಯುವುದು ಕೊಂಚ ಕಷ್ಟವೇ ಆಗಿತ್ತು. ಮರುದಿನದ ೧೪ ಕಿ.ಮೀ. ಚಾರಣ ಅದೆಷ್ಟು ಕಷ್ಟಕರವಾಗಿರುತ್ತದೋ, ಜೊತೆಗೆ, ಸ್ಥಳೀಯ ಜನರು ನಿಜಕ್ಕೂ ಮುಷ್ಕರ ಹೂಡಿರುವವರಾದರೆ, ಹಾದಿಯಲ್ಲಿ ಕುಡಿಯುವ ನೀರು ಸಹ ಸಿಗುವುದೋ ಇಲ್ಲವೋ, ಇನ್ನೂ ಏನೇನು ಅನಿರೀಕ್ಷಿತ ತೊಂದರೆಗಳು ಎದುರಾಗುವವೋ ಎಂಬ ಆತಂಕ ಮನೆಮಾಡಿತ್ತು. ಏನೇ ಆದರೂ ಎದುರಿಸೋಣವೆಂಬ ದಿಟ್ಟವಾದ ನಿರ್ಧಾರ ಕೈಗೊಂಡು ಪ್ರಯಾಸದಿಂದ ಕಣ್ಣಿಗೆ ನಿದ್ದೆ ತುಂಬಿಕೊಂಡೆವು.

# "ಹಿಮಾ"ಲಯದ ಮೊದಲ ಅನುಭವ

೧೦ ಜೂನ್ ೨೦೧೩, ಸೋಮವಾರ... ಮುಂಜಾನೆ ಎರಡಕ್ಕೆ ಹೊಡೆದುಕೊಂಡ ಅಲಾರ್ಮ್ ಆರಿಸಿ ಕೊಸರಾಡಿಕೊಂಡು ಎದ್ದರೆ, ಹೊರಗೆ ಜೋರಾಗಿ ಮಳೆ ಸುರಿಯುತ್ತಿತ್ತು. ಹೋಟೆಲ್ ಕಟ್ಟಡದ ಹೊರಗೆ ಕತ್ತಲು ಬಹಳವಾಗಿ ಇದ್ದಿದ್ದರಿಂದ ಮಳೆಯ ಅಬ್ಬರ ಕಾಣುತ್ತಿರಲಿಲ್ಲವಾದರೂ ಸದ್ದಿನಿಂದಲೇ ಮಾಡಿದ ಅಂದಾಜಿನ ಪ್ರಕಾರ ಮಳೆಯ ತೀವ್ರತೆ ಹೆಚ್ಚೇ ಆಗಿದ್ದು, ಕಡಿಮೆಯಾಗುವಂತೇನೂ ಕಾಣುತ್ತಿರಲಿಲ್ಲ. ಆದರೇನಂತೆ, ಧೈರ್ಯಗೆಟ್ಟರೆ ಕೆಲಸ ಕೆಡುವುದೆಂದು ತಿಳಿದು ಹೊರಡಲು ತಯಾರಾದೆವು. ಸ್ನಾನ ಮಾಡಿ, ಬೆಚ್ಚಗಿನ ಬಟ್ಟೆ ತೊಟ್ಟು, ಚಾರಣಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡಿಕೊಂಡು ನಮ್ಮ ಕಾರ್ ಏರುವಷ್ಟರಲ್ಲಿ ಸಮಯ ಮೂರಾಗಿತ್ತು. ಅಷ್ಟರಲ್ಲಾಗಲೇ ಹಲವಾರು ವಾಹನಗಳು ಗೌರಿಕುಂಡದೆಡೆಗೆ ಪಯಣ ಬೆಳೆಸಿದ್ದವು.

ಚಂದ್ರಪುರಿಯಿಂದ ಸ್ವರ್ಣಪ್ರಯಾಗ ಸುಮಾರು ಎರಡು ಗಂಟೆಗಳ ಪ್ರಯಾಣ. ಆದ್ದರಿಂದ ಸ್ವರ್ಣಪ್ರಯಾಗದಲ್ಲಿ ಗೇಟ್ ತೆರೆಯುವ ಸಮಯವಾದ ೫.೦೦ಗೇ ನಾವು ಅಲ್ಲಿರಬಹುದೆಂದು ಲಗುಬಗೆಯಿಂದ ಮುನ್ನಡೆದೆವು. ರಾತ್ರಿ ಸರಿಯಾಗಿ ನಿದ್ದೆಯಾಗದಿದ್ದರೂ ಸಹ ಹಿಮಾಚ್ಛಾದಿತ ಪರ್ವತಗಳ ನಡುವಿನಲ್ಲಿರುವ ಕೇದಾರನಾಥ ಕ್ಷೇತ್ರವನ್ನು ನೋಡಬೇಕೆನ್ನುವ ಉತ್ಸಾಹವೇ ನಮ್ಮನ್ನು ಜಡಿಮಳೆಯಿಂದ ಧೃತಿಗೆಡದಂತೆ ತಡೆಯಿತು. ಕತ್ತಲಿನಲ್ಲೇ ನಮ್ಮ ಕಾರು ಸ್ವರ್ಣಪ್ರಯಾಗದೆಡೆಗೆ ಹೊರಟಿತು.

ರಸ್ತೆಯ ಪಕ್ಕದಲ್ಲೇ ಭೋರ್ಗರೆಯುತ್ತಿದ್ದ ಮಂದಾಕಿನಿ ನದಿ, ತಾನೇನು ಕಡಿಮೆಯೆಂಬಂತೆ ಮಳೆಯ ಸುರಿಸುತ್ತಿದ್ದ ವರುಣದೇವ, ಇವುಗಳ ಮಧ್ಯೆ ಭಯ ಹುಟ್ಟಿಸುವ ಕತ್ತಲೆ – ಇವೆಲ್ಲದರ ನಡುವೆ ನಮ್ಮ ಗಾಡಿ ಏಕಾಕಿಯಾಗಿ ಸಾಗುತ್ತಿತ್ತು. ಹಿಂದಾಗಲೀ ಮುಂದಾಗಲೀ ಮತ್ತೊಂದು ಗಾಡಿಯ ಸುದ್ದಿಯಿರಲಿಲ್ಲ. ನಮಗಿಂತ ಮುಂಚೆ ಹಲವಾರು ವಾಹನಗಳು ಹೋಗಿದ್ದು ನಿಜವಾದರೂ ಅವುಗಳಾವುವೂ ಕಾಣುತ್ತಿರಲಿಲ್ಲ. ಬಹಳ ಕಡಿಮೆ ಜನ ಇಂದು ಕೇದಾರನಾಥಕ್ಕೆ ಹೋಗುತ್ತಿದ್ದಾರೆ ಎಂಬ ಭಾವನೆ ಮೂಡತೊಡಗಿತ್ತು. ಅಷ್ಟರಲ್ಲಿ ಗುಪ್ತಕಾಶಿ ತಲುಪಿ, ಅಲ್ಲಿ ನೂರಾರು ವಾಹನಗಳು ಯಾತ್ರಿಕರಿಗಾಗಿ ಕಾಯುತ್ತಾ ನಿಂತಿದ್ದನ್ನು ನೋಡಿ ನಮ್ಮ ಆತಂಕ ಮರೆಯಾಯಿತು. ಜೊತೆಗೆ ಇವರೆಲ್ಲರಿಗಿಂತ ಬೇಗನೇ ನಾವು ಹೋಗುತ್ತಿದ್ದೇವಾದ್ದರಿಂದ ಅನವಶ್ಯಕವಾಗಿ ಎಲ್ಲೂ ಸಮಯ ವ್ಯರ್ಥವಾಗುವುದಿಲ್ಲವೆಂದು ಸಂತೋಷ ಕೂಡಾ ಉಂಟಾಯಿತು.

ಗುಪ್ತಕಾಶಿಯನ್ನು ಬಿಟ್ಟು ಮುನ್ನಡೆಯುವಷ್ಟರಲ್ಲಿ ಮಳೆಯು ನಿಲ್ಲುವಂತಾಗಿ, ಸೂರ್ಯ ನಿಧಾನವಾಗಿ ಮೂಡತೊಡಗಿದ್ದ. ಮೋಡಗಳು ಕರಗತೊಡಗಿದ್ದು, ರಸ್ತೆಯ ಸುತ್ತಲಿನ ಕಾಡು, ಬೆಟ್ಟಗಳು ಅತ್ಯಂತ ಸುಂದರ, ರಮಣೀಯವಾಗಿ ಕಾಣತೊಡಗಿದ್ದವು. ಸೂರ್ಯಕಿರಣಗಳು ಇಬ್ಬನಿಯ ಮೇಲೆ ಬಿದ್ದು ಅವೆಲ್ಲವೂ ಚಿನ್ನದಂತೆ ಹೊಳೆಯುತ್ತಿದ್ದವು. ಜೊತೆಗೆ ಹಕ್ಕಿಗಳ ಚಿಲಿಪಿಲಿ ನಿನಾದ ಆ ವಾತಾವರಣದ ಚೆಲುವನ್ನು ನೂರ್ಮಡಿಗೊಳಿಸಿದ್ದವು. ಜನರೇ ಓಡಾಡದ ಆ ಗುಡ್ಡ–ಕಾಡು ಪ್ರದೇಶದಲ್ಲಿ ನಾವೊಬ್ಬರೇ ಇದ್ದೇವೇನೋ ಎಂಬಂತಿತ್ತು. ತಿರುವುಗಳು ಬಹಳಷ್ಟಿದ್ದವಾದ್ದರಿಂದ ಬೇರಾವುದೇ ವಾಹನ ನಮಗೆ ತೀರಾ ಹತ್ತಿರವಿಲ್ಲದೆ ಇದ್ದಲ್ಲಿ ನಮಗೆ ಕಾಣುವ ಸಂಭವವೇ ಇರಲಿಲ್ಲ. ಪ್ರಕೃತಿಯು ಕೇವಲ ನಮಗಷ್ಟೇ ತನ್ನ ಸೌಂದರ್ಯದ ದರ್ಶನ ಮಾಡಿಸುತ್ತಿರುವಂತೆ ಭಾಸವಾಗಿ ಆನಂದದ ಭಾವನೆ ಉಂಟಾಗಿತ್ತು. ಜೊತೆಗೇ ಜೀವನದಲ್ಲಿ ಮೊದಲ ಬಾರಿಗೆ ಹಿಮಪರ್ವತವನ್ನು ನೋಡುವ ಕಾಲ ದೂರವಿಲ್ಲವೆಂಬ ಅನಿಸಿಕೆ ಕೂಡಾ ನನ್ನಲ್ಲಿ ಅತ್ಯುತ್ಸಾಹ ಉಂಟುಮಾಡಿತ್ತು.

ಗುಪ್ತಕಾಶಿಯಿಂದ ಆಚೆ ಇರುವ ಮಿಕ್ಕೆಲ್ಲ ಊರುಗಳೂ, ವರ್ಷದಲ್ಲಿ ಆರು ತಿಂಗಳು ಮಾತ್ರ ಜನಭರಿತವಾಗಿರುತ್ತವೆ. ನವೆಂಬರ್ ಮಾಸದಿಂದ ಪ್ರಾರಂಭವಾಗಿ ಏಪ್ರಿಲ್ ಮಾಸದವರೆಗೂ ತೀವ್ರ ಚಳಿಯ ಹವೆ ಹಾಗೂ ಹಿಮದ ಕಾರಣದಿಂದ ಅಲ್ಲಿ ವಾಸಿಸಲು ಸಾಧ್ಯವಿಲ್ಲ. ಹೀಗಾಗಿ ಸ್ಥಳೀಯರೆಲ್ಲ ಬೇರೆಲ್ಲೋ ಇದ್ದು, ಯಾತ್ರೆಯ ಪರ್ವ ಪ್ರಾರಂಭವಾದಾಗ ಮೇಲಿನ ಸ್ಥಳಗಳಿಗೆ ಬಂದು ತಮ್ಮ ತಮ್ಮ ಹೋಟೆಲ್, ಮನೆ ಇವುಗಳನ್ನು ಸರಿಪಡಿಸಿಕೊಂಡು ಯಾತ್ರಿಕರಿಗಾಗಿ ಕಾಯುತ್ತಾ ನಿಲ್ಲುತ್ತಾರೆ. ಈ ಜನರಿಗೆ ಏನಾದರೂ ಹೆಚ್ಚು ಹಣ ಕೈಗೆ ಬರಬೇಕಾದಲ್ಲಿ ಅದು ಯಾತ್ರಿಕರಿಂದಲೇ ಬರಬೇಕು. ಹೀಗಾಗಿ ಎಲ್ಲ ವಸ್ತುಗಳೂ ಕೊಂಚ ದುಬಾರಿಯಾಗುತ್ತವೆ.

ಮುಂದೆ ಗೌರಿಕುಂಡಕ್ಕೆ ಸುಮಾರು ಎಂಟು ಕಿ.ಮೀ. ಹಿಂದಿದ್ದ ಸ್ವರ್ಣಪ್ರಯಾಗ ತಲುಪಿದಾಗ ಮುಂದಿನ ಹಾದಿಯ ಗೇಟ್ ತೆರೆದಿದ್ದು, ವಾಹನಗಳು ಸಾಗುತ್ತಿದ್ದವು. ನಮ್ಮ ವಾಹನ ಗೇಟ್ ಮುಂದೆ ಬಂದ ತಕ್ಷಣ ಅಲ್ಲಿದ್ದ ಪೋಲಿಸ್ ತಡೆಹಿಡಿದ! ಅದರ ಅರ್ಥ, ಈಗಾಗಲೇ ಐವತ್ತು ವಾಹನಗಳು ಒಳಹೋಗಿವೆ, ಅವೆಲ್ಲವೂ ಹೊರಬಂದ ನಂತರ ನಮ್ಮ ಸರದಿ ಎಂದು. ನಮ್ಮ ಸರದಿ ಬರಲು ಕನಿಷ್ಠ ಒಂದು ಗಂಟೆ ಕಾಯಬೇಕಾಗಿತ್ತು. ಆದರೆ ಅವನಿಗೆ ಅದೇನು ಅನ್ನಿಸಿತೋ ಏನೋ, ಪಕ್ಕಕ್ಕೆ ಸರಿದು ನಮ್ಮ ಪುಟ್ಟ ಕಾರಿಗೆ ಹೋಗುವಂತೆ ಸೂಚಿಸಿದ. ಹಿಂದಿದ್ದ ಬಸ್‌ಗೆ ಆ ಅದೃಷ್ಟವಿರಲಿಲ್ಲ. ನಮ್ಮ ಸಂತೋಷಕ್ಕೆ ಪಾರವೇ ಇರಲಿಲ್ಲ. ಕೆಲಕ್ಷಣ ಚಕಿತಗೊಂಡ ನಮ್ಮ ಕಾರಿನ ಚಾಲಕ ಸಹ ಬಹು ಆನಂದದಿಂದ ಮುನ್ನಡೆಸಿದ.

ಗೇಟ್ ವ್ಯವಸ್ಥೆಯ ಬಗ್ಗೆ ನಮಗಿದ್ದ ಎಲ್ಲಾ ಕೋಪ ಆ ಇಕ್ಕಟ್ಟಾದ ರಸ್ತೆಯನ್ನು ನೋಡಿದೊಡನೆ ಮಾಯವಾಯಿತು. ವಿರುದ್ಧ ದಿಕ್ಕಿನಲ್ಲಿ ಎರಡು ವಾಹನಗಳು ಜೊತೆಗೆ ಸಾಗಲು ಅವಕಾಶವೇ ಇಲ್ಲವಲ್ಲಿ. ರಸ್ತೆಯ ಅಡಿಪಾಯವಾಗಿರುವ ಮಣ್ಣಿನ ಬಗ್ಗೆಯೂ ಏನೂ ಹೇಳುವಂತಿಲ್ಲ. ಮಳೆ ಬಂದು ಮಣ್ಣು ಸಡಿಲವಾಗಿದ್ದರೆ, ಭಾರೀ ವಾಹನ ಸಾಗಿದಾಗ ದೇವರೇ ಗತಿ! ಸ್ವರ್ಣಪ್ರಯಾಗದಿಂದ ಗೌರಿಕುಂಡದವರೆಗಿನ ಇಡೀ ರಸ್ತೆ ಹೀಗೇ ಇದ್ದು, ಭಯ ಹುಟ್ಟಿಸುವುದು.

ಮುಂಚೆಯೇ ಒಳಹೋಗಿದ್ದ ವಾಹನಗಳು ಯಾತ್ರಿಕರನ್ನು ಇಳಿಸಲು ಬಹಳ ಸಮಯ ತೆಗೆದುಕೊಳ್ಳುತ್ತಿದ್ದರಿಂದ ಮುಂದೆ ಸಾಗುವುದು ನಿಧಾನವಾಗಿತ್ತು. ಗೌರಿಕುಂಡಕ್ಕೆ ಅರ್ಧ ಕಿ.ಮೀ. ಇದೆ ಎಂದಾಗ ನಾವು ಅಲ್ಲಿಂದ ನಡೆದೇ ಹೋಗುವೆವೆಂದು ಚಾಲಕನಿಗೆ ಹೇಳಿದೆವು. ಅದಕ್ಕೊಪ್ಪಿದ ಅವನು, ಸ್ವರ್ಣಪ್ರಯಾಗಕ್ಕೆ ಮರಳಿ ಅಲ್ಲಿ ನಿಂತಿರುತ್ತೇನೆ, ನೀವು ಕೇದಾರನಾಥದಿಂದ ಇಳಿದು ಬರುವಾಗ, ಮಧ್ಯದಲ್ಲಿ ಸಿಗುವ ರಾಮಬಾಡಾ ಎಂಬ ಊರಿನಿಂದ ಕರೆ ಮಾಡಿದಲ್ಲಿ ನೀವು ಗೌರಿಕುಂಡ ತಲುಪುವಷ್ಟರಲ್ಲಿ ವಾಹನಸಮೇತನಾಗಿ ನಾನೂ ಅಲ್ಲಿಗೆ ಬರುವೆನೆಂದು ತಿಳಿಸಿದ. ಇದಕ್ಕೊಪ್ಪಿದ ನಾವು ಕಾರ್‌ನಿಂದ ಕೆಳಗಿಳಿದೆವು. ಜಿಟಿಜಿಟಿ ಮಳೆ ಮಾತ್ರ ಬೀಳುತ್ತಲೇ ಇತ್ತು. ಆದರೆ ಕುದುರೆಗಳು, ಅವುಗಳ ಒಡೆಯರು ಕಣ್ಣಿಗೆ ಬಿದ್ದುದರಿಂದ ನಾವು ಚಾರಣಕ್ಕೆ ಬೇಕಾದ ಕೋಲನ್ನು ತೆಗೆದುಕೊಳ್ಳದೆ ಕೇವಲ ಸ್ಯಾಂಡಿವಿಚ್ ಇದ್ದ ಬ್ಯಾಕ್‌ಪ್ಯಾಕನ್ನಷ್ಟೇ ಹೆಗಲಿಗೇರಿಸಿಕೊಂಡು ಸಾಗಿದೆವು.

ಅಸ್ತವ್ಯಸ್ತವಾಗಿ ಕಟ್ಟಿರುವ ಕಟ್ಟಡಗಳಿಂದ ತುಂಬಿರುವ ಗೌರಿಕುಂಡದಿಂದ ಕೇದಾರನಾಥಕ್ಕೆ ೧೪ ಕಿ.ಮೀ.ಗಳ ಪಯಣ. ನಡುವೆ ೭ ಕಿ.ಮೀ. ನಂತರ ರಾಮಬಾಡಾ ಎಂಬ ಸಣ್ಣ ಊರಿದೆ. ಊರು ಎಂದರೆ ಇನ್ನೂರು ಅಂಗಡಿಗಳಿರುವ ತಾತ್ಕಾಲಿಕ ತಂಗುದಾಣವಷ್ಟೇ. ಯಾತ್ರಿಕರಿಗೆ, ಕುದುರೆಗಳಿಗೆ, ಮಾರ್ಗದರ್ಶಕರಿಗೆ ಕೊಂಚ ಹೊತ್ತು ದಣಿವಾರಿಸಿಕೊಳ್ಳಲು ಅನುಕೂಲವಾಗುವಂತೆ ಕುರ್ಚಿಗಳು, ತಿಂಡಿ–ಪಾನೀಯ ವ್ಯವಸ್ಥೆಯಿರುವ ಜಾಗ ರಾಮಬಾಡಾ. ಕಾಲ್ನಡಿಗೆ ಅಥವಾ ಕುದುರೆಯ ಮೇಲೆ ಹೋಗುವ ಜನರು ಬಹಳ. ಇದು ಬಿಟ್ಟು ಡೋಲಿ (ಪಲ್ಲಕ್ಕಿಯಂತಿರುತ್ತದೆ) ಮತ್ತು ಪಿಟ್ಟೂ ಎಂಬ ವ್ಯವಸ್ಥೆಗಳಿವೆ.

ಎರಡು ಕುದುರೆಗಳಿಗೆ ಒಬ್ಬ ಮೇಲ್ವಿಚಾರಕನಿದ್ದು, ಅವನು ಕುದುರೆಗಳ ವೇಗಕ್ಕೆ ಸಮನಾಗಿ ನಡೆಯುತ್ತಾನೆ. ಕುದುರೆಗಳೋ, ತರಬೇತಿ ನೀಡಿದವುಗಳಾಗಿದ್ದು, ಅವಕ್ಕೆ ನಿಗದಿಪಡಿಸಿದ ಸ್ಥಳದಲ್ಲೇ ನಿಗದಿಪಡಿಸಿದ ಸಮಯವಷ್ಟೇ ನಿಲ್ಲುತ್ತವೆ. ಕುದುರೆಗಳಿಗೆ ನೀರು ದೊರೆಯಲು ಸಾಧ್ಯವಾಗುವಂತೆ ಅಲ್ಲಲ್ಲಿ ಕಟ್ಟೆಗಳನ್ನು ಕಟ್ಟಿ ಗುಡ್ಡದಿಂದ ಬರುವ ನೀರು ಅದರಲ್ಲಿ ಬೀಳುವಂತೆ ವ್ಯವಸ್ಥೆ ಮಾಡಿದ್ದಾರೆ.

ರಾಮಬಾಡಾದಲ್ಲಿ ಮೇಲ್ವಿಚಾರಕನು ಕುದುರೆಗಳಿಗೆ ಮತ್ತಷ್ಟು ಶಕ್ತಿ ಬರಲು ಬೆಲ್ಲ ತಿನ್ನಿಸುತ್ತಾನೆ. ಮೇಲೇರುವಾಗ, ಕೆಳಗಿಳಿಯುವಾಗ – ಎರಡೂ ಬಾರಿ ಈ ಕಾರ್ಯಕ್ರಮ ನಡೆಯುತ್ತದೆ.

ಡೋಲಿ ಮತ್ತು ಪಿಟ್ಟೂ ವಿಭಿನ್ನ ರೀತಿಯ ಅನುಕೂಲಗಳು. ಡೋಲಿಯು ಸಣ್ಣ ಕುರ್ಚಿಯಂತಹ ಆಸನವಾಗಿದ್ದು, ಅದಕ್ಕೆ ಹಿಂದೆ–ಮುಂದೆ ಮರದ ಹಿಡಿಗಳಿರುತ್ತವೆ. ನಾಲ್ಕು ಜನ ತೆಳ್ಳಗೆ ಕಾಣುವ, ಆದರೆ ಕಟ್ಟುಮಸ್ತಾದ ಯುವಕರು ಅವನ್ನು ಹಿಡಿದು ಒಂದೇ ವೇಗದಲ್ಲಿ ನಡೆಯುತ್ತಾರೆ. ಕೆಲವೊಮ್ಮೆ ಸುಮಾರಾಗಿ ಓಡುತ್ತಾರೆ ಕೂಡ! ಅಶಕ್ತರು, ಸ್ಥೂಲಕಾಯದವರು, ವೃದ್ಧರು, ಮಕ್ಕಳು, ಧನಿಕರು ಮತ್ತು ಸೋಮಾರಿಗಳಿಗೆಂದೇ ಮೀಸಲಾದ ಈ ಸೇವೆಗೆ ಹಣ ಅತ್ಯಂತ ಹೆಚ್ಚು. ಪಿಟ್ಟೂ ಇನ್ನೂ ವಿಚಿತ್ರ! ಬುಟ್ಟಿಯೊಂದರಲ್ಲಿ ಮನುಷ್ಯನೊಬ್ಬನನ್ನು ಕೂರಿಸಿಕೊಂಡು ಅದರ ಪಟ್ಟಿಯನ್ನು ಹಣೆಯ ಮೇಲೆ ಕಟ್ಟಿಕೊಂಡು ಸಮತೋಲನವನ್ನು ಗಳಿಸುವ ಸಲುವಾಗಿ ಕೊಂಚ ಬಗ್ಗಿಕೊಂಡು ಪರ್ವತವನ್ನೇರುವ ಆ ಪಿಟ್ಟೂ ಹೊರುವವನನ್ನು ಕಂಡರೆ ಯಾರಿಗಾದರೂ ಮನಸ್ಸು ಕರಗದಿರದು. ಸಾಮಾನ್ಯವಾಗಿ ಪಿಟ್ಟೂ ೫೦ ಕಿಲೋಗಿಂತ ಕಡಿಮೆಯಿರುವ ವ್ಯಕ್ತಿಗಳಿಗೆ ಮಾತ್ರ ಮೀಸಲು. ಮಕ್ಕಳು, ಡೋಲಿಗೆ ಹಣವಿಲ್ಲದ ಕೃಶಕಾಯದ ವೃದ್ಧರು ಇವುಗಳ ಉಪಯೋಗ ಪಡೆಯುವರು.

ಎಲ್ಲಕ್ಕೂ ಸರ್ಕಾರದಿಂದ ದರ ನಿಗದಿಪಡಿಸಲಾಗಿದೆ. ದೊಡ್ಡದೊಂದು ಫಲಕದಲ್ಲಿ ಸಮಸ್ತ ವಿವರಗಳನ್ನೂ ಸಂದೇಹಕ್ಕೆ ಆಸ್ಪದವಿಲ್ಲದಂತೆ ಬರೆದಿದ್ದಾರೆ. ಹಾಗೆಂದು, ನಮಗೆ ಅಪಾಯವಾಗದಂತೆ ಕರೆದೊಯ್ಯುವ ಆ ಕಷ್ಟಜೀವಿಗಳಿಗೆ ಇನ್ನೊಂದಷ್ಟು ಹಣ ಕೊಡಬಾರದೆಂದು ಯಾವ ನಿಯಮವೂ ಇಲ್ಲ. ವಾಸ್ತವವಾಗಿ ಅವರೊಡನೆ ಚೆನ್ನಾಗಿ ಮಾತನಾಡಿ, ಅವರ ತಿಂಡಿ–ತೀರ್ಥಗಳನ್ನು ನಾವು ಪ್ರಾಯೋಜಿಸಿದರೆ ನಮಗೆ ಸಿಗುವ ಸೇವೆಯ ಗುಣಮಟ್ಟ ಇನ್ನೂ ಹೆಚ್ಚಿನದು. ಅವರು ಸಂತೋಷವಾಗಿದ್ದರಷ್ಟೇ ನಾವು ಕ್ಷೇಮ! ಎಲ್ಲಕ್ಕಿಂತ ಮಿಗಿಲಾಗಿ, ಎಲ್ಲೆಲ್ಲೋ ಅನವಶ್ಯಕವಾಗಿ ಖರ್ಚು ಮಾಡುವ ಬದಲು ಇವರಿಗೆ ಕೊಟ್ಟರೆ ಆ ಹಣ ಒಂದು ಒಳ್ಳೆಯ ಕೆಲಸಕ್ಕಾಗಿ ಬಳಕೆಯಾಗುವುದೆಂಬ ನಂಬಿಕೆ ಕೂಡಾ ಪ್ರೇರಣೆಯಾಗಿ ನಿಲ್ಲುತ್ತದೆ. ಇಷ್ಟಾಗಿಯೂ ಮೂರು ಕಾಸಿನ ಮುಖ ನೋಡಿಕೊಂಡು ಅವರೊಡನೆ ಜಗಳವಾಡುವ ಜನಕ್ಕೇನೂ ಕಡಿಮೆಯಿಲ್ಲ. ಅವರವರ ದೃಷ್ಟಿಕೋನ!

ಗೌರಿಕುಂಡದಲ್ಲಿ ಬಿಸಿನೀರಿನ ಬುಗ್ಗೆಯೂ ಉಂಟು. ಇದು ಧಾರ್ಮಿಕವಾಗಿ ಮಹತ್ವವಾದದ್ದಾಗಿದ್ದರೂ ಸಹ ನಮಗೆ ಅದನ್ನು ಕಾಣುವ ಇಚ್ಛೆಯಿರಲಿಲ್ಲ. ಜೊತೆಗೆ ಮುಂಜಾನೆಯೇ ಸ್ನಾನಮಾಡಿದ್ದರಿಂದ ಮತ್ತೊಮ್ಮೆ ಸ್ನಾನ ಮಾಡಬೇಕೆನ್ನುವ ಅವಶ್ಯಕತೆಯಾಗಲೀ, ಅಲ್ಲಿ ಮಿಂದು ಪುಣ್ಯ ಗಳಿಸೋಣವೆಂಬ ಆಧ್ಯಾತ್ಮಿಕ ಆಸಕ್ತಿಯಾಗಲೀ ನಮ್ಮಲ್ಲಿರಲಿಲ್ಲ. ನಮಗಿದ್ದ ಆಸೆ ಒಂದೇ – ಕೇದಾರನಾಥ ದೇವಾಲಯ,

ಸುತ್ತಮುತ್ತಲಿನ ಪರಿಸರದ ಸೌಂದರ್ಯದ ಆಸ್ವಾದನೆ. ಹೀಗಾಗಿ ಕುಂಡದೆಡೆಗಿನ ದಾರಿ ಬಿಟ್ಟು, ಚಾರಣದ ರಸ್ತೆಯೆಡೆಗೆ ಸಾಗುವ ಪುಟಾಣಿ ಓಣಿಯಲ್ಲಿ ಹೋದೆವು.

ಈ ನಡುವೆ ಜಯರಾಮನಿಗೆ ಕುದುರೆಯವನೊಬ್ಬ ಪರಿಚಯವಾಗಿ, ವ್ಯವಹಾರ ಕುದುರಿ, ಇಬ್ಬರು ಸವಾರರಿಗೆ ವ್ಯವಸ್ಥೆಯಾಗಿತ್ತು. ನಮಗೆ ಮೂರು ಕುದುರೆ ಬೇಕೆಂದು ಅರಿತ ಕುದುರೆಯವನು ತಾನೇ ಮತ್ತೊಬ್ಬನನ್ನು ಕರೆತಂದ. ಅವನ ಎರಡು ಕುದುರೆಗಳಲ್ಲಿ ಒಂದನ್ನು ವೃದ್ಧರೊಬ್ಬರು ಆಗಲೇ ಗೊತ್ತುಮಾಡಿಕೊಂಡಿದ್ದು, ಮತ್ತೊಬ್ಬ ಗಿರಾಕಿಗೆ ಹುಡುಕಾಟ ನಡೆಸಿದ್ದ. ನಿಗದಿತ ದರಕ್ಕಿಂತ ಕೇವಲ ನೂರು ರೂಪಾಯಿ ಹೆಚ್ಚಿಗೆ ಕೇಳಿದ ಅವನ ಕೋರಿಕೆ ನಮಗೆ ಸಮಂಜಸವಾಗೇ ಕಂಡು ಮುಂದುವರಿದೆವು. ಸರ್ಕಾರಿ ರಸೀತಿ ಚೀಟಿ ಪಡೆಯಲು ಜಯರಾಮ್ ಕುದುರೆಯವನೊಂದಿಗೆ ಹೋಗಲು, ನಾನು ಮತ್ತು ಶ್ರೀಧರ್ ಮತ್ತೊಂದೆಡೆ ಕಾಯುತ್ತಾ ಮಂದಾಕಿನಿ ನದಿಯ ಭೋರ್ಗರೆತವನ್ನು ನೋಡುತ್ತಾ ನಿಂತಿದ್ದೆವು. ತುಂತುರು ಮಳೆ ಮಾತ್ರ ತನ್ನ ಕಾರ್ಯ ಮುಂದುವರಿಸುತ್ತಲೇ ಇತ್ತು.

ಸಾವಿರಾರು ಪಯಣಿಗರು, ಅವರಿಗಾಗಿ ಕಾಯುತ್ತಿರುವ – ಅವರು ಕೊಡುವ ಹಣದಿಂದಲೇ ಬದುಕು ಸಾಗಿಸುವ ಕುದುರೆಯ ಮಾಲೀಕರು, ಮೇಲ್ವಿಚಾರಕರು, ತಮ್ಮ ಕಷ್ಟವನ್ನು ಲೆಕ್ಕಿಸದೆ ನಮ್ಮ ಸುಖಕ್ಕಾಗಿ ಶ್ರಮಿಸುವ ಡೋಲಿ, ಪಿಟ್ಟೂ ಅವರುಗಳು... ದೇವರೆಡೆಗೆ ನಂಬಿಕೆ, ಶ್ರದ್ಧೆಗಳು ಅದೆಷ್ಟು ಜೀವಗಳಿಗೆ ವರದಾನವಾಗಿದೆಯೋ ಎಂಬ ಅನಿಸಿಕೆ ಬಿಡದೆ ಕಾಡುತ್ತಿತ್ತು.

ರಸೀತಿಯನ್ನು ತಂದ ಜಯರಾಮ್ ಒಂದನ್ನು ನನ್ನ ಕೈಗಿಟ್ಟು ನನ್ನನ್ನು ವೃದ್ಧರ ಸಹಪಯಣಿಗನನ್ನಾಗಿ ಮಾಡಿ, ಶ್ರೀಧರ್ ಜೊತೆಯಲ್ಲಿ ಮತ್ತೊಂದು ಜೋಡಿ ಕುದುರೆಯನ್ನೇರಿದನು. ನನ್ನ ಸಹಪಯಣಿಗ ಜಾರ್ಖಂಡ್ ರಾಜ್ಯದ ಬೊಕಾರೋ ನಗರದವರು. ಅವರ ಪತ್ನಿ, ಸೊಸೆ ಕಾಲ್ನಡಿಗೆಯಲ್ಲಿ ಮುಂದೆ ಸಾಗಿದ್ದರು. ಮಗ ಮಾತ್ರ ಕುದುರೆ ಸಿಗುವವರೆಗೂ ಕಾದಿದ್ದು ನನ್ನೊಡನೆ ಕೊಂಚ ಮಾತನಾಡಿ ಮುಂದುವರಿದರು. ಪರಿಚಯ, ಉಭಯಕುಶಲೋಪರಿಯ ನಂತರ ಇಬ್ಬರೂ ನಮ್ಮ ನಮ್ಮ ಕುದುರೆಗಳನ್ನೇರಿ ಕುಳಿತೆವು. ಜಯರಾಮ್ ಮತ್ತು ಶ್ರೀಧರ್ ತಮ್ಮ ಪ್ರಯಾಣವನ್ನು ಆಗಲೇ ಪ್ರಾರಂಭಿಸಿದ್ದರು.

ಎತ್ತರವಾದ ನನ್ನ ಕುದುರೆಯ ಹೆಸರು "ಬಸಂತಿ". ಕುದುರೆಯ ಉಸ್ತುವಾರಿ ಕೆಲನಿಮಿಷಗಳ ಕಾಲ ಒಡೆಯನದ್ದಾಗಿದ್ದು, ನಂತರ ಅವನು ಮರೆಯಾದನು. ಉಸ್ತುವಾರಿ ಈಗ ಮೇಲ್ವಿಚಾರಕನದಾಗಿತ್ತು. ವೃದ್ಧರು ಇದ್ದಿದ್ದರಿಂದ ಅವನು ನನಗೆ ನನ್ನ ಕುದುರೆಯ ಲಗಾಮನ್ನು ಹಿಡಿದು ನಿಯಂತ್ರಣ

ತೆಗೆದುಕೊಳ್ಳುವುದನ್ನು ಹೇಳಿಕೊಟ್ಟು ಹಿಂದೆ ನಡೆಯತೊಡಗಿದನು. ಒಂದೆಡೆ ಗುಡ್ಡ, ಇನ್ನೊಂದೆಡೆ ಪ್ರಪಾತ, ನಡುವಿನ ಇಕ್ಕಟ್ಟಾದ ಮಾರ್ಗದಲ್ಲಿ ವೇಗವಾಗಿ ಬೆಟ್ಟವನ್ನೇರುತ್ತಿದ್ದ ಕುದುರೆ – ಇವೆಲ್ಲ ಸೇರಿ ನನ್ನೊಳು ಭಯ ಮೂಡಿಸಿದ್ದವು. ಕುದುರೆಯ ಲಗಾಮನ್ನು ಅದು ಹೇಗೆ ಹಿಡಿದಿದ್ದೆನೋ ಗೊತ್ತಿಲ್ಲ, ಕುದುರೆಯ ವೇಗವಂತೂ ತೀವ್ರವಾಗೇ ಇತ್ತು. ತನ್ನ ಸುರಕ್ಷತೆಯ ಬಗ್ಗೆಯಷ್ಟೇ ಗಮನ ಹರಿಸುತ್ತಿದ್ದ ಕುದುರೆ, ಸವಾರನೆಂಬೊಬ್ಬ ಬಡಪಾಯಿ ಕುಳಿತಿರುವನೆಂಬ ವಿಷಯವನ್ನು ಗಣನೆಗೇ ತೆಗೆದುಕೊಳ್ಳದೆ ಮುನ್ನಡೆಯುತ್ತಿರುವಂತಿತ್ತು. ನನ್ನ ಕಾಲು ಅದೆಷ್ಟು ಪಾದಚಾರಿಗಳಿಗೆ, ಡೋಲಿಯವರಿಗೆ ತಾಗಿತ್ತೋ ಯಾರಿಗೆ ಗೊತ್ತು! ಡೋಲಿಯವರಿಗೆ ತಾಗಿದರಂತೂ ಅಪಾಯ ಕಟ್ಟಿಟ್ಟ ಬುತ್ತಿ. ನಾಲ್ವರೂ ಸಮನಾಗಿ ಭಾರ ಹೊತ್ತು ಓಡುತ್ತಿರುವಾಗ ಒಬ್ಬ ಆಯ ತಪ್ಪಿದನೆಂದರೆ ಏನು ಬೇಕಾದರೂ ಆಗಬಹುದು. ಆದರೂ ಅದೃಷ್ಟವಶಾತ್ ಹಾಗೇನೂ ಅಪಾಯ ಸಂಭವಿಸಲಿಲ್ಲ. ಪ್ರಾಯಶಃ ಅವರುಗಳಿಗೆ ಇವೆಲ್ಲದರ ಅಭ್ಯಾಸವಾಗಿದೆಯೋ ಏನೋ!

ಮೊದಲ ಒಂದು ಕಿ.ಮೀ. ದೂರದವರೆಗೂ ಕುದುರೆಗಳ ನಿಲುಗಡೆ ಸ್ಥಳ. ಅಲ್ಲಿ ಅವುಗಳ ಮೂತ್ರವಿಸರ್ಜನೆ ನಡೆದು ನಡುನಡುವೆ ಚಿಕ್ಕ ಕೆರೆಗಳಾಗಿದ್ದವು. ವಾಸನೆ ಮಾತ್ರ ಘೋರ. ಮೂಗನ್ನು ಮುಚ್ಚಿಹಿಡಿದು ಬಾಯಿಯಿಂದ ಉಸಿರಾಡಬೇಕಾದ ಪರಿಸ್ಥಿತಿ. ಜೊತೆಗೆ ಮೊದಲ ಬಾರಿ ಕುದುರೆ ಸವಾರಿಯು ಉಂಟುಮಾಡಿದ್ದ ಭಯ ಬೇರೆ. ಆದರೆ ಬಹುಬೇಗ ಈ ಭಯಗಳೆಲ್ಲವೂ ಮರೆಯಾಗಿ ಸವಾರಿ ಆನಂದದಾಯಕವೆನ್ನಿಸತೊಡಗಿತು.

ಮಳೆ ಈಗ ಪೂರ್ತಿಯಾಗಿ ನಿಂತಿತ್ತು. ಬೆಳಕು ಕೂಡಾ ಚೆನ್ನಾಗಿ ಹರಿದು, ಕೊರೆಯುವ ಚಳಿಯಿರದೆ ಹವೆ ಆಹ್ಲಾದಕರವಾಗಿತ್ತು. ಸುತ್ತಮುತ್ತಲಿನ ಹಸಿರು ಪರಿಸರದ ಚೆಲುವನ್ನು ತುಂಬಿಕೊಳ್ಳುವುದಷ್ಟೇ ಕಣ್ಣಿಗೆ ಕೆಲಸವಾಗಿತ್ತು. ಹಾಡು ಗುನುಗುನಿಸುತ್ತಾ "ಬಸಂತಿ"ಯ ಜೊತೆಗೆ ಚಾರಣ ಮುಂದುವರಿಸಿದ್ದೆ. ತಿರುವೊಂದರಲ್ಲಿ ಆಕಸ್ಮಿಕವಾಗಿ ಕತ್ತೆತ್ತಿ ನೋಡಿದಾಗ ನನ್ನ ಜೀವನದಲ್ಲಿ ಒಂದು ಹೊಸ, ಅತ್ಯದ್ಭುತವಾದಂತಹ ಅನುಭವವುಂಟಾಯಿತು. ಕಣ್ಣಿಗೆ ಕಂಡಿದ್ದು ದೂರದಲ್ಲಿದ್ದ ಹಿಮಾಚ್ಛಾದಿತ ಶಿಖರ!

ಮೊಟ್ಟಮೊದಲ ಬಾರಿಗೆ ಹಿಮಪರ್ವತದ ದರ್ಶನ ಪ್ರಥಮ ಚುಂಬನದಂತಿತ್ತು! (ನನಗದರ ಪ್ರತ್ಯಕ್ಷ ಅನುಭವವಿಲ್ಲ, ಕೇವಲ ಅಲ್ಲಿ–ಇಲ್ಲಿ ಕೇಳಿ, ಓದಿ ತಿಳಿದದ್ದು!) ಮೈಮರೆಸುವಂತಿದ್ದ ಆ ನೋಟವು, ನನ್ನ ಭಾವನೆಗಳೆಲ್ಲವೂ ಅಂಕೆ ಮೀರಿ ಹೋಗುವಷ್ಟು ಆನಂದ ತಂದಿತು. ನೀಲಾಕಾಶದ ಹಿನ್ನೆಲೆಯಲ್ಲಿ, ಹಸಿರು ಚೌಕಟ್ಟನ್ನು ಹೊಂದಿದ್ದ ಶ್ವೇತವರ್ಣದ ಪರ್ವತದ ಆ ದೃಶ್ಯ ನೋಡಲದೆಷ್ಟು ಅದ್ಭುತವಾಗಿತ್ತೆಂದರೆ ಕೆಲಕಾಲ ಭಾವಪರವಶತೆಯಲ್ಲಿ ತೇಲಾಡುತ್ತಿದ್ದೆ. ಜಯರಾಮ್ ಹೇಳಿದ್ದು ನಿಜ – ಒಂದು ಬಾರಿ

ಹಿಮಾಲಯವನ್ನು ಕಂಡರೆ ಅದು ಮತ್ತೆಮತ್ತೆ ಸೆಳೆಯುವುದು. ಮೊದಲ ನೋಟಕ್ಕೇ ಸಂಪೂರ್ಣವಾಗಿ ಮೋಡಿ ಮಾಡಿ, ಅದನ್ನು ಆ ಕ್ಷಣದಿಂದಲೇ ಪ್ರೀತಿಸಲು ಪ್ರಾರಂಭಿಸುವಂತೆ ಮಾಡಿದ ಆ ಹಿಮಾಚ್ಛಾದಿತ ಗಿರಿಶಿಖರ ಎಂದೆಂದಿಗೂ ನನ್ನ ಮನದಿಂದ ಮಾಯವಾಗಲು ಸಾಧ್ಯವಿಲ್ಲ! ಆ ದೃಶ್ಯ ಹೇಗಿತ್ತೆಂದರೆ ಅಪ್ಸರೆಯೊಬ್ಬಳು ಕೈಬೀಸಿ ನನ್ನನ್ನು "ಬಾ ಬೇಗ ನೀನಿಲ್ಲಿ" ಎಂದು ಕರೆಯುತ್ತಾ ನನ್ನ ಮನಸ್ಸನ್ನು ಪೂರ್ತಿಯಾಗಿ ತನ್ನ ಅಂಕೆಗೆ ತೆಗೆದುಕೊಂಡಂತಿತ್ತು. ಅದೊಂದು ಭಾವಪೂರ್ಣವಾದ ಪ್ರಣಯಭರಿತ ಅನುಭವ!

ಲಂಗುಲಗಾಮಿಲ್ಲದ ನನ್ನ ಕಲ್ಪನಾಲಹರಿಗೆ ಲಗಾಮು ಹಾಕಿದ್ದು ಆ ಹುಚ್ಚು ಕುದುರೆ ಮಾತ್ರ. ಮತ್ತೊಮ್ಮೆ ಭಯ ಹುಟ್ಟಿಸುವಂತೆ ಓಡತೊಡಗಿದ ಕುದುರೆಯನ್ನು ಹಿಂದಿನಿಂದ ಮೇಲ್ವಿಚಾರಕ ಹೊಡೆದು ನಿಯಂತ್ರಿಸಿದ. ನಾನು ನನ್ನದೇ ಲೋಕದಲ್ಲಿದ್ದುಕೊಂಡು ಲಗಾಮನ್ನೆಳೆದು ಕುದುರೆಗೆ ವೇಗವಾಗಿ ಹೋಗುವಂತೆ ಸೂಚಿಸುತ್ತಿದ್ದೇನೆ ಎಂಬ ಆಕ್ಷೇಪ ಅವನದು. ವೃದ್ಧರು ಕೂಡಾ ಅವನೊಡನೆ ದನಿಗೂಡಿಸಿದರು. ನಾನು ಮಾತ್ರ ತೆಪ್ಪಗಿದ್ದೆ.

ಹಿಮಪರ್ವತ ಮತ್ತೆಮತ್ತೆ ಕಣ್ಣಿಗೆ ಬೀಳುತ್ತಲೇ ಇತ್ತು. ಇದರ ಜೊತೆಗೆ ಮತ್ತೊಂದು ಸೋಜಿಗ ಕಾಣುತ್ತಲಿತ್ತು. ಹಲವಾರು ಬೆಟ್ಟಗಳ ಮೇಲೆ ನಡುನಡುವೆ ಬಿಳಿ ಮತ್ತು ಕಂದು ಬಣ್ಣಗಳಿಂದ ಕೂಡಿದ್ದ ತೆಳ್ಳಗಿನ ಹೊದಿಕೆಯಂತಹ ವಸ್ತುವೊಂದು ಗೋಚರಿಸುತ್ತಿತ್ತು. ಹಿಮವು ಸದಾ ಶಿಖರದ ಮೇಲೆಯೇ ಇರುವುದೆಂಬ ಭಾವನೆಯಲ್ಲಿದ್ದ ನನಗೆ ಆ ವಸ್ತು ಹೆಪ್ಪುಗಟ್ಟಿದ್ದ ನೀರ್ಗಲ್ಲು (Glacier) ಎಂದು ತಿಳಿಯಲು ಬಹಳ ಸಮಯ ಹಿಡಿಯಿತು. ಚಳಿಗಾಲ ಮುಗಿದು ಸುಮಾರು ೨ ತಿಂಗಳುಗಳಾಗಿದ್ದರೂ ಕೂಡಾ ತಾಪಮಾನ ಹೆಚ್ಚಾಗದ ಕಾರಣ ಹಲವಾರು ನೀರ್ಗಲ್ಲುಗಳು ಕರಗದೆ ಉಳಿದಿದ್ದವು. ಅವು ಕರಗಿದ್ದ ಕಡೆಯೆಲ್ಲ ನೀರು ಕೆಳಗೆ ಹರಿದು ಹೋಗಿರುವ ಹಾದಿ ಸ್ಪಷ್ಟವಾಗಿ ಕಾಣುತ್ತಿತ್ತು. ಜುಲೈ ಮಾಸದಲ್ಲಿ ಪ್ರಾರಂಭವಾಗುವ ಮಳೆಗಾಲದಲ್ಲಿ ಅವೆಲ್ಲದ ಮೇಲೆ ಬೆಚ್ಚಗಿನ ಮಳೆನೀರು ಬಿದ್ದು ಅವು ಕರಗಿಹೋಗುತ್ತವಂತೆ. ಮಾನವನ ಚಟುವಟಿಕೆಗಳಿರುವುದರಿಂದ ಹಿಮದ ಶ್ವೇತವರ್ಣ ಕೆಲವೆಡೆ ಕಂದು ಬಣ್ಣಕ್ಕೆ ತಿರುಗಿತ್ತು.

ಆಗಸವು ಮೋಡವನ್ನು ತೊರೆದು ಸ್ಫಟಿಕಶುಭ್ರವಾಗಿದ್ದರಿಂದ ಹೆಲಿಕಾಪ್ಟರ್‌ಗಳು ಹಾರತೊಡಗಿದ್ದವು. ಗೌರಿಕುಂಡದಿಂದ ಹದಿನೈದು ಕಿ.ಮೀ ಹಿಂದಿರುವ "ಫಾಟಾ" ಎಂಬ ಸಣ್ಣ ಹಳ್ಳಿಯಿಂದ ಕೇದಾರನಾಥ ದೇವಾಲಯದ ಸಮೀಪದವರೆಗೂ ಹೆಲಿಕಾಪ್ಟರ್ ಸೇವೆ ಇದೆ. ಸುಮಾರು ೨೫ ಕಿ.ಮೀ ಹಾದಿಯ ಹಾರಾಟವಾಗಿದ್ದು, ಇಡೀ ಪ್ರಯಾಣಕ್ಕೆ ತಗಲುವ ಸಮಯ ಸುಮಾರು ೧೫–೨೦ ನಿಮಿಷಗಳು.

ಕೆಳಗಿಳಿಯಲು ಬೇಕಾಗುವ ಸಮಯ ಇನ್ನೂ ಕಡಿಮೆ! ಕೇದಾರನಾಥದ ದೇವಾಲಯದಿಂದ ೧ ಕಿ.ಮೀ ದೂರದಲ್ಲಿರುವ ದೇವಾಲಯಕ್ಕೆ ದೂರದಲ್ಲಿ ಹೆಲಿಪ್ಯಾಡ್ ಇದ್ದು, ವೃದ್ಧರು ಮತ್ತು ಅಶಕ್ತರಿಗೆ ತುಂಬಾ ಅನುಕೂಲವಾಗಿದೆ. ಜೊತೆಗೆ ಚಾರಣದ ಹಾದಿ ಕಠಿಣವಾದದ್ದರಿಂದ ಹೆಲಿಕಾಪ್ಟರ್‌ನಲ್ಲಿ ತೆರಳುವ ಜನರ ಸಂಖ್ಯೆ ಸ್ವಲ್ಪ ಹೆಚ್ಚೇ ಆಗಿದ್ದು, ಅದರ ಸಲುವಾಗಿ ಸುಮಾರು ನಾಲ್ಕು ಕಂಪೆನಿಗಳ ಹೆಲಿಕಾಪ್ಟರ್‌ಗಳಿಗೆ ಪರವಾನಗಿ (Licence) ದೊರೆತಿವೆ. ದರ ಮಾತ್ರ ಬಲು ದುಬಾರಿ. ಸುಖವಾಗಿ ಯಾತ್ರೆ ಹೋಗಬೇಕೆನ್ನುವವರು ಹೆಚ್ಚು ಹಣ ಕೊಡಲು ತಯಾರಾಗೇ ಇರಬೇಕಾಗುತ್ತದೆ.

ಹೆಲಿಕಾಪ್ಟರ್ ಸದ್ದು ಮೇಲಿಂದ ಮೇಲೆ ಕೇಳಿ ಬರುತ್ತಲೇ ಇತ್ತು. ಐದು ನಿಮಿಷಕ್ಕೊಂದರಂತೆ ನಿರಂತರವಾಗಿ ಹಾರಾಟ ನಡೆದೇ ಇತ್ತು. ಹೀಗಾಗಿ ಕುದುರೆ–ಡೋಲಿಯವರ ಅಸಂತೋಷಕ್ಕೆ ಕಾರಣ ಖಂಡಿತ ಇತ್ತು. ತಮ್ಮ ಆದಾಯ ಕೈತಪ್ಪಿ ಹೋಗುತ್ತದೆಂಬ ಚಿಂತೆ ಅವರೆಲ್ಲರನ್ನು ಬಲವಾಗಿ ಕಾಡುತ್ತಲಿತ್ತು. ಜೊತೆಗೆ ಇದರಿಂದ ಸುತ್ತಲಿನ ಕಾಡು ಪ್ರಾಣಿಗಳಿಗೂ ತೊಂದರೆ ತಪ್ಪಿದ್ದಲ್ಲ. ವಿಪರೀತವಾದ ಹೆಲಿಕಾಪ್ಟರ್ ಶಬ್ದದಿಂದ ಅವುಗಳ ನೆಮ್ಮದಿ ಹಾಳಾಗುವುದು ಖಂಡಿತ. ಪರಿಸರದ ನೈರ್ಮಲ್ಯಕ್ಕೂ ಧಕ್ಕೆ. ಆದರೆ ತಾನೊಬ್ಬನೇ ದೊಡ್ಡವ ಎಂದು ತಿಳಿದಿರುವ ಮಾನವ ಪ್ರಕೃತಿಯ ಈ ಸೂಕ್ಷ್ಮಗಳನ್ನು ಅರ್ಥಮಾಡಿಕೊಳ್ಳುವನೇ! ಅವನಿಗೆ ಬೇಕಿರುವುದು ತನ್ನ ಸುಖ–ಸಂತೋಷ ಮಾತ್ರ.

# ಶಿವನ ಸನ್ನಿಧಿಯಲ್ಲಿ

ಕುದುರೆ ಸವಾರಿ ಮುಂದುವರಿದಿತ್ತು. ಜಯರಾಮ್ ಮತ್ತು ಶ್ರೀಧರ್ ಮುಂದೆಲ್ಲೋ ಕಾಣದಷ್ಟು ದೂರ ಹೋಗಿದ್ದರು. ಜನಜಂಗುಳಿಯಲ್ಲಿ ಅವರು ಕಣ್ಣಿಗೆ ಬೀಳುವುದು ಅಸಾಧ್ಯವಾಗಿತ್ತು. ಕೊಂಚ ಆಯಾಸವೂ ಅಗತೊಡಗಿತ್ತು. ಕುದುರೆಯ ಮೇಲೆ ಕುಳಿತ ನನಗೇ ಆಯಾಸವೆಂದ ಮೇಲೆ ಮೇಲ್ವಿಚಾರಕನಿಗೆ ಹೇಗನ್ನಿಸಿತ್ತೋ ಏನೋ! ಅಷ್ಟರಲ್ಲಿ ರಾಮಬಾಡಾ ತಲುಪಿ, ವಿಶ್ರಮಿಸಿಕೊಳ್ಳಲು ಕುದುರೆಯಿಂದ ಇಳಿದೆವು. ವೃದ್ಧರಿಗಂತೂ ಬಹಳವೇ ಆಯಾಸವಾಗಿತ್ತು. ನನಗೂ ಮೇಲ್ವಿಚಾರಕನಿಗೂ ಚಹಾ ಕೊಡಿಸಿದ ಅವರು, ಹೊಟ್ಟೆ ತುಂಬಿಸಿಕೊಳ್ಳಲು ಪರೋಟಾ ಕೊಂಡರು. ನನ್ನಲ್ಲಿದ್ದ ದ್ರಾಕ್ಷಿ–ಗೋಡಂಬಿ–ಬಾದಾಮಿಗಳನ್ನು ನಾನೂ ಬಾಯಿಗೆ ಹಾಕಿಕೊಂಡು ಅವರಿಗೂ ಕೊಟ್ಟೆ.

ರಾಮಬಾಡಾದಲ್ಲಿ ಸುಮಾರು ಇನ್ನೂರು ಅಂಗಡಿಗಳಿವೆ. ಎಲ್ಲೆಡೆಯೂ ಅವೇ ತಿನಿಸುಗಳೇ ಸಿಗುವವು. ಆದರೆ ಕುದುರೆ–ಡೋಲಿಯವರು ಅಂಗಡಿಯವರನ್ನು ಪರಸ್ಪರ ಗೊತ್ತುಮಾಡಿಟ್ಟುಕೊಂಡಿರುತ್ತಾರೆ. ಹೀಗಾಗಿ ಯಾತ್ರಿಕರಿಗೆ ತಾವು ಬಯಸಿದ ಅಂಗಡಿಯೆದುರು ಕುದುರೆಯನ್ನು ನಿಲ್ಲಿಸೆಂದು ಕೇಳಲು ಸಾಧ್ಯವಿಲ್ಲ. ಎಲ್ಲ ಅಂಗಡಿಗಳಲ್ಲೂ ಅವೇ ಪದಾರ್ಥಗಳೇ ಸಿಗುವುದರಿಂದ ಯಾತ್ರಿಕರಿಗಂತೂ ಏನೂ ನಷ್ಟವಿಲ್ಲ. ಕುರ್ಚಿ–ಮಂಚಗಳನ್ನು ಹಾಕಿ, ದಣಿದ ಯಾತ್ರಿಕರಿಗೆ ಅನುಕೂಲ ಒದಗಿಸಿರುತ್ತಾರೆ. ಮಕ್ಕಳು, ಹಿರಿಯರು, ಪುರುಷರು, ಮಹಿಳೆಯರೆಂಬ ಭೇದಭಾವವಿಲ್ಲದೆ ಎಲ್ಲರೂ ಅಂಗಡಿಗಳಲ್ಲಿ ಕೆಲಸ ಮಾಡುತ್ತಾರೆ. ದುಡಿಮೆಯನ್ನು ನಂಬಿ ಬದುಕುವ ಕಷ್ಟಜೀವಿಗಳಾದ ಗುಡ್ಡಗಾಡು ಜನರ ಒಂದು ಸಮುದಾಯವೇ ಯಾತ್ರೆಯ ವೇಳೆಯಲ್ಲಿ ರಾಮಬಾಡಾಕ್ಕೆ ಬಂದು ಠಿಕಾಣಿ ಹೂಡುತ್ತದೆ.

ಅರ್ಧ ಗಂಟೆಯ ನಂತರ ವಿಶ್ರಾಂತಿಯ ಸಮಯ ಮುಗಿದು, ಮತ್ತೊಮ್ಮೆ ನಮ್ಮ ಕುದುರೆಸವಾರಿ ಮುಂದುವರಿಯಿತು. ಎತ್ತರೆತ್ತರಕ್ಕೆ ಹೋಗುತ್ತಿದ್ದೆವಾದ್ದರಿಂದ ಕೆಳಗಿನ ದೃಶ್ಯ ಮನೋಹರವಾಗಿ ಕಾಣುತ್ತಿತ್ತು. ಜೊತೆಗೆ, ಈಗ ಇನ್ನೂ ಅನೇಕ ಹಿಮಪರ್ವತಗಳು ಕಾಣತೊಡಗಿದ್ದವು. ಸೂರ್ಯನ ಬೆಳಕು ಅವುಗಳ ಮೇಲೆ ಚೆಲ್ಲಿ ಸ್ವಚ್ಛವಾದ ಬಿಳಿಯ ಬಣ್ಣ ಮತ್ತಷ್ಟು ಹೊಳೆಯುತ್ತಿತ್ತು. ನಡುನಡುವೆ ನೀರ್ಗಲ್ಲುಗಳು ಕರಗಿ, ಅದರಿಂದ ಹುಟ್ಟಿದ್ದ ಚಿಕ್ಕಪುಟ್ಟವಾದರೂ ಚಂದವಾದ ಅನೇಕ ಜಲಪಾತಗಳೂ ಇದ್ದವು.

ಚಾರ್‌ಧಾಮ್ ಎಂದು ಕರೆಯುವ ಯಾತ್ರೆಯು ಗಂಗೋತ್ರಿ–ಯಮುನೋತ್ರಿ–ಕೇದಾರನಾಥ–ಬದರಿನಾಥ ಕ್ಷೇತ್ರಗಳನ್ನು ಒಳಗೊಂಡಿದೆ. (ವಾಸ್ತವವಾಗಿ ಶಂಕರಾಚಾರ್ಯರು ತಿಳಿಸಿರುವ ಚಾರ್‌ಧಾಮ್ ಯಾತ್ರೆ

ಬದರಿನಾಥ–ದ್ವಾರಕೆ–ಪುರಿ–ರಾಮೇಶ್ವರ ಕ್ಷೇತ್ರಗಳನ್ನು ಒಳಗೊಂಡಿದ್ದು, ಉತ್ತರಾಖಂಡದ ಈ ಯಾತ್ರೆ ಛೋಟಾ ಚಾರ್‌ಧಾಮ್ ಎಂದಾಗಿದೆ. ಆದರೆ ಜನರ ಆಡುಭಾಷೆಯಲ್ಲಿ ಇದು ಚಾರ್‌ಧಾಮ್ ಎಂದೇ ಪ್ರಸಿದ್ಧ.) ಗಂಗೋತ್ರಿ–ಯಮುನೋತ್ರಿಗಳು ಉತ್ತರಾಖಂಡದ ಉತ್ತರಕಾಶಿ ಜಿಲ್ಲೆಯಲ್ಲಿದ್ದು, ಅವುಗಳಿಗೆ ಹೋಗುವ ಹಾದಿಯು ಋಷಿಕೇಶದಲ್ಲೇ ಬೇರೆಯಾಗುತ್ತದೆ. ಗಂಗೋತ್ರಿಯಲ್ಲಿ ಗಂಗೆಯ (ಭಾಗೀರಥಿ) ಉಗಮಸ್ಥಾನವೂ, ಯಮುನೋತ್ರಿಯಲ್ಲಿ ಯಮುನೆಯ ಉಗಮಸ್ಥಾನವೂ ಇರುವುದರಿಂದ ಅವು ಪವಿತ್ರ ಕ್ಷೇತ್ರಗಳು. ಕೇದಾರನಾಥ ಶಿವನ ಸನ್ನಿಧಿಯಾಗಿದ್ದು, ಅದರ ದರ್ಶನ ಈ ನಾಲ್ಕು ಕ್ಷೇತ್ರಗಳಲ್ಲಿ ಅತ್ಯಂತ ಕಷ್ಟಕರವಾಗಿದೆ. ಅತ್ಯಂತ ಸುಲಭವಾಗಿ ಹೋಗಬಹುದಾದ ಬದರಿನಾಥ ಕ್ಷೇತ್ರ ಮಹಾವಿಷ್ಣುವಿನ ದೇವಾಲಯವನ್ನು ಹೊಂದಿದೆ.

ಕೆಳಗಿರುವ ಗೌರಿಕುಂಡ ಸಮುದ್ರಮಟ್ಟದಿಂದ ೧೯೦೦ ಮೀಟರ್ ಎತ್ತರದಲ್ಲಿದ್ದು, ಕೇದಾರನಾಥ ೩೫೦೦ ಮೀಟರ್ ಎತ್ತರದಲ್ಲಿದೆ. ಗೌರಿಕುಂಡದಿಂದ ಕೇದಾರನಾಥಕ್ಕೆ ಒಟ್ಟು ಹದಿನಾಲ್ಕು ಕಿ.ಮೀ. ದೂರ. ಅದನ್ನು ಸುಮಾರು ನಾಲ್ಕೂವರೆ ಗಂಟೆಗಳಲ್ಲಿ ಕ್ರಮಿಸಿದೆವು. ಕುದುರೆಯಿಂದಿಳಿಯುವ ಜಾಗದಿಂದ ದೇವಾಲಯಕ್ಕೆ ಸುಮಾರು ಅರ್ಧ ಕಿ.ಮೀ. ದೂರವಿದೆ. ಆದರೆ ಆಮ್ಲಜನಕದ ಕೊರತೆ ಕೊಂಚ ಕಾಡುವುದರಿಂದ ಅಷ್ಟು ದೂರ ನಡೆಯಲೂ ಸಹ ಆಯಾಸವಾಗಬಹುದು. ಆಮ್ಲಜನಕದ ಪುಟ್ಟಪುಟ್ಟ ಸಿಲಿಂಡರ್‌ಗಳನ್ನು ಅಲ್ಲಲ್ಲಿ ಮಾರುವುದನ್ನು ಕಾಣಬಹುದು.

ಕೇದಾರನಾಥವು ಮಂದಾಕಿನಿ ನದಿಯ ಉಗಮಸ್ಥಾನವೂ ಹೌದು. ಹಿಂದೆ ವಿವರಿಸಿದಂತೆ ರುದ್ರಪ್ರಯಾಗದಲ್ಲಿ ಮಂದಾಕಿನಿಯು, ಬದರಿನಾಥದಿಂದ ಬರುವ ಅಲಕನಂದೆಯನ್ನು ಸೇರಿ, ಮುಂದೆ ದೇವಪ್ರಯಾಗದಲ್ಲಿ ಭಾಗೀರಥಿಯನ್ನು ಸೇರಿ ಅಲ್ಲಿಂದಾಚೆಗೆ ಗಂಗೆಯೆಂಬ ಹೆಸರು ಪಡೆಯುತ್ತಾಳೆ. ಮಂದಾಕಿನಿ ಎಂದರೆ ಮಂದವಾಗಿ–ಸೌಮ್ಯವಾಗಿ ಹರಿಯುವವಳು ಎಂದರ್ಥ. ಆದರೆ ಹೆಸರಿಗೆ ತಕ್ಕಂತೆ ಇರದ ಅವಳು ಭೋರ್ಗರೆಯುತ್ತಾ ಜೋರಾಗಿ ಸದ್ದುಮಾಡುತ್ತಾ ಧುಮ್ಮಿಕ್ಕುತ್ತಾ ಆನಂದವಾಗಿ ಹರಿಯುತ್ತಾಳೆ. ಸ್ವಚ್ಛವಾದ ಬಿಳಿಯ ಬಣ್ಣದ ನೀರನ್ನು ನೋಡುತ್ತಿದ್ದರೆ ಮನಸ್ಸಿಗೆ ಆನಂದವಾಗುತ್ತದೆ. ಕುದುರೆಯಿಂದಿಳಿದು ದೇವಾಲಯಕ್ಕೆ ನಡೆಯುವ ಹಾದಿಯಲ್ಲಿರುವ ಮಂದಾಕಿನಿ ನದಿಯನ್ನು ದಾಟಲು ಕಟ್ಟಿರುವ ಲೋಹದ ಸೇತುವೆಯಿಂದ ನದಿಯನ್ನು ನೋಡುವುದು ಕಣ್ಣಿಗೆ ಹಬ್ಬ. ಜೊತೆಗೆ ತಣ್ಣಗಿರುವ ಹವೆಯಿಂದ ಸೇತುವೆಯ ಹಿಡಿಗಳೆಲ್ಲವೂ ಕೊರೆಯುವಂತಿದ್ದು, ಅದನ್ನು ಹಿಡಿದು ನಿಂತಲ್ಲಿ ಆಯಾಸವೆಲ್ಲ ಮರೆಯಾಗುವುದು ನಿಶ್ಚಿತ.

ಶಿವನ ಆಲಯ ಬಹು ರಮಣೀಯವಾಗಿದ್ದು ಹಿನ್ನೆಲೆಯಲ್ಲಿ ಅಸಂಖ್ಯಾತ ಹಿಮಪರ್ವತಗಳನ್ನು ಕಾಣಬಹುದು. ಕೇದಾರನಾಥ ಶ್ರೀ ಶಂಕರಾಚಾರ್ಯರು ದೇಹತ್ಯಾಗ ಮಾಡಿದ ಸ್ಥಳವೂ ಆದ್ದರಿಂದ ದೇವಾಲಯದ ಪಕ್ಕದಲ್ಲೇ ಅವರ ಸಮಾಧಿ ಮಂದಿರವಿದೆ. ಹಲವಾರು ಸಾಧು–ಸಂತರನ್ನೂ ಅಲ್ಲಿ ಕಾಣಬಹುದು. ಎತ್ತರೆತ್ತರಕ್ಕೆ ಕಾಣುವ ಪರ್ವತಶ್ರೇಣಿಗಳಲ್ಲಿ ಇನ್ನೂ ಅದೆಷ್ಟು ಸಾಧುಗಳು ಹೊಕ್ಕಿಕೊಂಡು ಧ್ಯಾನ ಮಾಡುತ್ತಿರುವರೋ ಎಂದು ಹೇಳಲು ಅಸಾಧ್ಯ.

(೧೫ ಜೂನ್ ೨೦೧೩ ಅಂದು ಉಂಟಾದ ಮೇಘಸ್ಫೋಟದಲ್ಲಿ ಕೇದಾರನಾಥ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಅಪಾರ ಜೀವಹಾನಿ, ನಷ್ಟವುಂಟಾಗಿದೆ. ಕೇದಾರನಾಥ ದೇವಾಲಯದ ಸುತ್ತಮುತ್ತಲಿನ ಎಲ್ಲ ಕಟ್ಟಡಗಳೂ ನೆಲಸಮವಾಗಿದ್ದು, ದೇವಾಲಯ ಮಾತ್ರ ಉಳಿದುಕೊಂಡಿದೆ. ಇವುಗಳ ವಿವರಣೆ ಮುಂದೆ ಬರುತ್ತದೆ.)

ದೇವರ ದರ್ಶನಕ್ಕಾಗಿ ಉದ್ದವಾದ ಸಾಲಿತ್ತು. ಸರದಿಯಲ್ಲಿ ನಿಂತಾಗ ಕ್ಯಾಮೆರಾಗಳಿಗೆ ಕೆಲಸ ಹಚ್ಚಿದೆವು. ಸುತ್ತಮುತ್ತಲಿನ ಪರಿಸರ, ಬೆಟ್ಟಗುಡ್ಡಗಳು, ಪರ್ವತಶ್ರೇಣಿ, ನೀರ್ಗಲ್ಲುಗಳು – ಯಾವುವೂ ಕ್ಯಾಮೆರಾ ಕಣ್ಣಿನಿಂದ ತಪ್ಪಿಸಿಕೊಳ್ಳಲಿಲ್ಲ. ತಂಪಾದ ಗಾಳಿ ಬೀಸಿ ಕೊಂಚ ಒದ್ದೆಯಾಗಿದ್ದ ಬಟ್ಟೆಗಳನ್ನು ಧರಿಸಿದ್ದ ನಮ್ಮ ದೇಹಗಳಿಗೆ ಚಳಿಯ ಅನುಭವ ನೀಡುತ್ತಿತ್ತಾದರೂ ಮಂದ ಬಿಸಿಲು ತತ್ಕ್ಷಣ ಅದನ್ನು ಸರಿದೂಗಿಸಿಬಿಡುತ್ತಿತ್ತು.

ಹೀಗೇ ಕ್ಯಾಮೆರಾ ಕ್ಲಿಕ್ಕಿಸುತ್ತಿದ್ದಾಗ ಒಮ್ಮೆಲೇ ಜಯರಾಮ್ ತಲೆಯೆತ್ತಿ ನೋಡುವಂತೆ ಹೇಳಿದ. ನೋಡಿದರೆ ಆಕಾಶದಲ್ಲಿ ಪ್ರಭಾವಳಿಯೊಂದು (Halo) ಮೂಡಿತ್ತು. ಸ್ವಲ್ಪ ಮೋಡವೂ ಇದ್ದಿದ್ದರಿಂದ ಎಲ್ಲ ಬಣ್ಣಗಳನ್ನೂ ಪ್ರತ್ಯೇಕವಾಗಿ ಕಾಣಲು ಸಾಧ್ಯವಿರಲಿಲ್ಲವಾದರೂ ಕೆಂಪು, ಹಸಿರು, ಹಳದಿ ಬಣ್ಣಗಳು ಸ್ಫುಟವಾಗಿ ಗೋಚರಿಸುತ್ತಿದ್ದವು. ನಾನು ಅದು ಕಾಮನಬಿಲ್ಲೆಂದೂ ಜಯರಾಮ್ ಇಂದ್ರಧನುಷ್ ಎಂದೂ ವಾದ ಮಾಡುತ್ತಿರಲು, ನಮ್ಮ ಸಂದೇಹವನ್ನು ನಿವಾರಿಸುವ ಸಲುವಾಗಿ, ಶ್ರೀಧರ್ ತಮ್ಮ ಮೊಬೈಲ್ ಕ್ಯಾಮೆರಾದಿಂದ ಅದರ ಚಿತ್ರ ತೆಗೆದು ಅಂತರ್ಜಾಲದ ಸಹಾಯದಿಂದ ಮಿತ್ರರೊಬ್ಬರಿಗೆ ಕಳುಹಿಸಿದರು. ಮಿತ್ರರಿಂದ ಉತ್ತರ ಬರುವುದರಲ್ಲಿ ಅಂತರ್ಜಾಲದ ಸಂಪರ್ಕ ಮುರಿದಿತ್ತು.

(ಎಷ್ಟೋ ದಿನಗಳ ನಂತರ ನಾನು ಮರಳಿ ಬೆಂಗಳೂರಿಗೆ ಬಂದ ನಂತರ ತಿಳಿದುಬಂದಿದ್ದೇನೆಂದರೆ, ಆ ಪ್ರಭಾವಳಿಯು ಪ್ರಕೃತಿ ನಮಗೆ ಮಳೆಯ ಮುನ್ಸೂಚನೆ ನೀಡುವ ವಿಧಾನ ಎಂಬುದಾಗಿ. ಅಂತರ್ಜಾಲದಲ್ಲಿ ಹುಡುಕಾಟ ನಡೆಸಿದಾಗ ಆದ ಅರಿವು ಇದು. ಮುಂದೆ ಬರಲಿರುವ ಆಪತ್ತಿನ

ಮುನ್ಸೂಚನೆಯನ್ನು ಪ್ರಕೃತಿ ಆಗಲೇ ಕೊಟ್ಟಿತ್ತೋ ಇಲ್ಲವೋ ಎಂದು ಗೊತ್ತುಮಾಡಿಕೊಳ್ಳುವುದಂತೂ ಅಸಾಧ್ಯ.)

ಸಾಲಿನ ನಡುವೆ ತೂರಿಕೊಳ್ಳುವ ಜನಗಳಿದ್ದರೂ ಸಹ ಸುಮಾರು ಒಂದೂವರೆ ಗಂಟೆಗಳಲ್ಲಿ ದೇವರ ದರ್ಶನವಾಯಿತು. ದೇವಾಲಯದ ಅಂತರಂಗ ಬಹಳ ಇಕ್ಕಟ್ಟಾದ ಜಾಗ, ಹೆಚ್ಚು ಹೊತ್ತು ಒಳಗಿರಲು ಸಾಧ್ಯವೇ ಇಲ್ಲ. ಬೇಗನೇ ದೇವರಿಗೆ ನಮಸ್ಕರಿಸಿ ಹೊರಗೆ ಬಂದುಬಿಟ್ಟೆವು. ಅನೇಕರು ಒಳಗೆ ಪೂಜೆ–ಪುನಸ್ಕಾರ ನಡೆಸುವುದರಲ್ಲಿ ಮಗ್ನರಾಗಿದ್ದರು. ನಮಗೆ ದರ್ಶನ ಮಾತ್ರ ಸಾಕಾಗಿತ್ತಾಗಿ ನಮ್ಮ ಕೆಲಸ ಮುಗಿದಿತ್ತು.

ಹಸಿವು ನಿರಂತರವಾಗಿ ಬಾಧಿಸುತ್ತಲೇ ಇತ್ತು. ಸ್ವಾಮಿಕಾರ್ಯ ಮುಗಿದಿತ್ತಾದ್ದರಿಂದ ಸ್ವಕಾರ್ಯ ನಡೆಸಲು ಎದುರಿನ ಓಣಿಯಲ್ಲಿನ ಸಣ್ಣ ಹೋಟೆಲ್‌ಗೆ ಹೋದೆವು. ಬಿಸಿಬಿಸಿಯಾದ ಜಾಮೂನ್, ಪರೋಟಾಗಳು ಸ್ವರ್ಗಸಮಾನವಾಗಿದ್ದವು. ಆ ಶೀತಲ ಹವೆಯಲ್ಲಿ ಬಿಸಿ ಏನೇ ಸಿಕ್ಕರೂ ಹಿತವಾಗಿರುತ್ತದೆ. ಚೆನ್ನಾಗಿ ಜಾಮೂನುಗಳನ್ನು ಮುಕ್ಕಿ, ಹಿಂತಿರುಗಿ ಹೊರಡಲು ಅಣಿಯಾದೆವು.

ಮೇಲೆ ಬಂದಾಗಲೇ, ಕೆಳಗಿಳಿಯಲು ಸಹ ಅವೇ ಕುದುರೆಗಳನ್ನು ಕಾಯ್ದಿರಿಸಿದ್ದೆವಾದ್ದರಿಂದ ಮೇಲ್ವಿಚಾರಕ ನಮ್ಮನ್ನು ಕಾಯುತ್ತಿದ್ದ. ವೃದ್ಧರು ಈಗಲೂ ಸಹ ನನ್ನೊಡನೆ ಬರುವವರಿದ್ದರು. ಈ ಬಾರಿ ಕುದುರೆ ಸವಾರಿ ಚೆನ್ನಾಗಿ ಹೊಂದಿಕೆಯಾಗಿತ್ತು. ಅಳುಕಿಲ್ಲದೆ ಆರಾಮವಾಗಿ ಕುಳಿತು "ಬಸಂತಿ"ಯ ಜೊತೆಗಿನ ಪಯಣದ ಸವಿಯಾದ ಅನುಭವವನ್ನು ಪಡೆದೆ. ರಾಮಬಾಡಾದ ಮತ್ತದೇ ಅಂಗಡಿಯಲ್ಲಿ ವಿಶ್ರಮಿಸಿಕೊಂಡು, ಅಲ್ಲಿಂದ ನಮ್ಮ ಚಾಲಕನಿಗೆ ದೂರವಾಣಿ ಕರೆ ಮಾಡಿ, ಇನ್ನೊಂದು ತಾಸಿನಲ್ಲಿ ಗೌರಿಕುಂಡ ತಲುಪುವೆವೆಂದು ತಿಳಿಸಿದೆ. ಯಥಾಪ್ರಕಾರ ಜಯರಾಮ್ ಮತ್ತು ಶ್ರೀಧರ್ ಕಣ್ಮರೆಯಾಗಿದ್ದರು. ಈ ಬಾರಿಯಂತೂ ಅವರು ಹಿಂದಿದ್ದರೋ ಅಥವಾ ಮುಂದೆ ಹೋಗಿದ್ದರೋ ಒಂದೂ ತಿಳಿಯಲಿಲ್ಲ! ದುರದೃಷ್ಟವಶಾತ್ ಕುದುರೆಯ ಮಾಲೀಕನಿಗೆ ಕೊಡಬೇಕಾಗಿದ್ದ ಸರ್ಕಾರಿ ರಸೀತಿ ಚೀಟಿ ಸಹ ಜಯರಾಮನ ಬಳಿಯಲ್ಲೇ ಉಳಿದುಬಿಟ್ಟಿತ್ತು. ಗುಡ್ಡಗಾಡು ಪ್ರದೇಶವಾದ್ದರಿಂದ ಅಲ್ಲಿ ಮೊಬೈಲ್ ಸಂಪರ್ಕ ಕೂಡಾ ಸಾಧ್ಯವಿಲ್ಲ. ಹೀಗಾಗಿ ರಸೀತಿಯದೇ ಯೋಚನೆಯಲ್ಲಿ ಪ್ರಯಾಣ ಮುಂದುವರಿಸಿದೆ.

ಗೌರಿಕುಂಡ ತಲುಪಿದೊಡನೆ ವೃದ್ಧರು ಕುದುರೆಯವನಿಗೆ ಚೀಟಿಯನ್ನು ಕೊಟ್ಟು ಹೊರಟರು. ಅವರ ಕುಟುಂಬವಿನ್ನೂ ಕೇದಾರನಾಥದಲ್ಲೇ ಇದ್ದರೂ, ಗೌರಿಕುಂಡದ ಹೋಟೆಲ್ ಕೊಠಡಿಯ ಬೀಗ ವೃದ್ಧರ

ಬಳಿಯೇ ಇದ್ದಿದ್ದರಿಂದ ಅವರಿಗೆ ಏನೂ ತೊಂದರೆಯಿರಲಿಲ್ಲ. ನಾನು ಮಾತ್ರ ಇಕ್ಕಟ್ಟಿಗೆ ಸಿಲುಕಿದೆ. ಜನಜಂಗುಳಿಯಲ್ಲಿ ನನ್ನ ರಸೀತಿಯನ್ನೂ, ಅದನ್ನು ಇಟ್ಟುಕೊಂಡಿದ್ದ ಜಯರಾಮನನ್ನೂ, ಅವನೊಂದಿಗಿದ್ದ ಶ್ರೀಧರ್ ಅವರನ್ನೂ ಹುಡುಕುವುದೆಲ್ಲಿಂದು ತೋಚಲಿಲ್ಲ. ಜೊತೆಗೆ ಕುದುರೆಯ ಮೇಲ್ವಿಚಾರಕನಂತೂ ಬೆಂಬಿಡದ ಬೇತಾಳನಂತೆ ಹಿಂಬಾಲಿಸುತ್ತಿದ್ದ. ರಸೀತಿ ಇಲ್ಲದಿದ್ದಲ್ಲಿ ಅವನಿಗೆ ಸರ್ಕಾರದಿಂದ ಬರುವ ಹಣ ಬರುತ್ತಿರಲಿಲ್ಲ. ಅವನ ಆದಾಯಕ್ಕೆ ಪೆಟ್ಟು ಬೀಳುತ್ತಿತ್ತು. ಈ ಗೊಂದಲದಲ್ಲೇ ಸುಮಾರು ಅರ್ಧಗಂಟೆ ಕಳೆಯಿತು.

# ಕತ್ತಲಿನಲ್ಲಿ ಗುಡ್ಡಗಾಡಿನ ಅನುಭವ

ತಲೆಕೆಡಿಸಿಕೊಂಡು ನಿಂತಿದ್ದ ನನ್ನನ್ನು ಹಿಂದಿನಿಂದ ಯಾರೋ ಕರೆದಂತಾಯಿತು. ತಿರುಗಿ ನೋಡಿದರೆ ಶ್ರೀಧರ್ ಜೋರಾಗಿ ನಗುತ್ತಾ "ಸೂ" ಎಂದು ಕರೆಯುತ್ತಾ ನಡೆದುಬರುತ್ತಿದ್ದರು. (ಇಡೀ ಪ್ರವಾಸದಲ್ಲಿ ಒಬ್ಬೊಬ್ಬರೂ ಇನ್ನಿಬ್ಬರನ್ನು ಅವರ ಹೆಸರುಗಳ ಮೊದಲನೆಯ ಅಕ್ಷರಗಳಿಂದಲೇ ಕರೆದುಕೊಳ್ಳುತ್ತಿದ್ದೆವು.) ಅವರ ಹಿಂದೆ ಜಯರಾಮ್ ಕೂಡಾ ಬಿದ್ದುಬಿದ್ದು ನಗುತ್ತಲೇ ಇದ್ದ. ನನಗೆ ಇವರ ನಗುವಿನ ಹಿಂದಿನ ಕಾರಣಕ್ಕಿಂತ ಹೆಚ್ಚಾಗಿ ರಸೀತಿಯ ಚೀಟಿ ಬೇಕಾಗಿತ್ತು. ಕೂಡಲೇ ಅದನ್ನು ಅವನಿಂದ ಕಸಿದುಕೊಂಡು ಕುದುರೆಯವನಿಗೆ ಕೊಟ್ಟೆ. ಜೊತೆಗೆ ಭಕ್ಷೀಸೆಂದು ೧೦೦ ರೂಪಾಯಿ ಕೂಡಾ ಕೊಟ್ಟೆ. ಕೈಗೆ ಕಾಸು ಬಂದದ್ದರಿಂದ ಸಂತೃಪ್ತನಾದ ಅವನು ತನ್ನ ಕುದುರೆಯ ಬಳಿ ತೆರಳಿದ. ಜಯರಾಮ್ ಮತ್ತು ಶ್ರೀಧರ್ ಕೂಡಾ ಅವರ ಕುದುರೆಯವನಿಗೆ ಹಣ ಕೊಟ್ಟು ಕಳುಹಿಸಿದರು. ಅವರಿಬ್ಬರ ನಗು ಮತ್ತೊಮ್ಮೆ ಪ್ರಾರಂಭವಾಯಿತು. ನನಗೋ, ಮೊಬೈಲ್ ಸಂಪರ್ಕ ಇನ್ನೂ ಬಂದಿಲ್ಲವೆಂಬ ಸಿಟ್ಟು, ಅಪಾರ ಜನಸಾಗರದ ನಡುವೆ ಈ ಚಾಲಕನನ್ನು ಅದೆಲ್ಲಿ ಹುಡುಕುವುದೆಂಬ ಯೋಚನೆ, ಜೊತೆಗೆ ಈ ಇಬ್ಬರಿಗೂ ಅದೇನಾಯಿತೆಂಬ ಕುತೂಹಲ. ತಡೆಯಲಾರದೆ ಕಾರಣ ಕೇಳಿಬಿಟ್ಟೆ.

ಅವರು ಹೇಳಿದ ಸಂಗತಿಗಳೆಲ್ಲವೂ ನಮ್ಮ ಪ್ರವಾಸದ ಮುಂದಿನ ಎಲ್ಲ ಹಂತಗಳಲ್ಲೂ ನಮ್ಮನ್ನು ನಕ್ಕು ನಗಿಸುವ ಸಾಧನಗಳಾಗಿದ್ದವು. ಕುದುರೆಸವಾರಿಯ ಸಮಯದಲ್ಲಿ ಅವರಿಬ್ಬರೂ ಪಟ್ಟ ಪಾಡು ಹೇಳತೀರದು. ಅವೆಲ್ಲವನ್ನೂ ಮತ್ತೆಮತ್ತೆ ನೆನಪಿಸಿಕೊಂಡು ಹುಚ್ಚರಂತೆ ನಗುತ್ತಲೇ ಇದ್ದೆವು. ಆ ಕುದುರೆಗಳು ಮಾಡಿದ್ದ ಅವಾಂತರಗಳು ಅದೆಷ್ಟು ತಮಾಷೆಯಾಗಿತ್ತೆಂದರೆ ಬೆಂಗಳೂರಿಗೆ ಬಂದ ನಂತರವೂ, ಎಷ್ಟೋ ತಿಂಗಳುಗಳು ಕಳೆದ ನಂತರವೂ ಕುದುರೆಗಳ ಹೆಸರನ್ನು ನೆನೆದರೂ ಸಹ ನಗು ಉಕ್ಕಿಬರುತ್ತಿತ್ತು.

ಗೌರಿಕುಂಡದಿಂದ ಹೊರಟಾಗ ಜಯರಾಮ್ ಮತ್ತು ಶ್ರೀಧರ್ ಕ್ರಮವಾಗಿ "ಕಮಲಿ" ಮತ್ತು "ಬಸಂತಿ" ಎಂಬ ಕುದುರೆಗಳನ್ನೇರಿದ್ದರು. (ಪ್ರಾಯಶಃ ಆ ಜನಕ್ಕೆ ಕುದುರೆಗಳಿಗೆ ವಿಭಿನ್ನವಾದ ಹೆಸರಿಡುವ ಅಭ್ಯಾಸವಿರಲಿಲ್ಲವೇನೋ!.) ಬಸಂತಿ ಶಾಂತಪ್ರಾಣಿಯಾಗಿದ್ದು ಶ್ರೀಧರ್ ಅವರ ಪ್ರಯಾಣ ಸುಖಕರವಾಗಿತ್ತು. ಆದರೆ "ಕಮಲಿ" ತುಂಟ ಕುದುರೆಯಾಗಿದ್ದು ಕೆಲವೊಮ್ಮೆ ಹುಚ್ಚೆದ್ದು ಓಡತೊಡಗುತ್ತಿತ್ತು. ಜೊತೆಗೆ "ಕಮಲಿ"ಗೆ ಇನ್ನೊಂದು ಚಟ – ಗುಡ್ಡದ ಬದಿಯಲ್ಲಿ ನಡೆಯುವ ಬದಲು ಪ್ರಪಾತದ ಅಂಚಿನಲ್ಲೇ ಹೋಗುವ ಬಯಕೆ. ಮೇಲ್ವಿಚಾರಕ ಪದೇ ಪದೇ "ಕಮಲೀ, ಅಂದರ್!" ಎಂದು ಕೂಗುಹಾಕಿ ಅದನ್ನು ಗುಡ್ಡದೆಡೆಗೆ ಎಳೆಯಲು ಯತ್ನಿಸಿದರೂ ಅದು ಮತ್ತೆಮತ್ತೆ ಪ್ರಪಾತದೆಡೆಗೇ

ಹೋಗುತ್ತಿತ್ತು. ಹಾಗೆಂದು ಈ ಕುದುರೆಗಳು ದಡ್ಡ ಜೀವಿಗಳೆಂದು ಭಾವಿಸಬೇಕಿಲ್ಲ. ಅವಕ್ಕೆ ಕೆಳಗೆ ಬೀಳಬಾರದೆಂದು ಗೊತ್ತು, ಅವುಗಳಿಗೆ ಆ ರೀತಿಯಾಗಿ ತರಬೇತಿ ನೀಡಿರುತ್ತಾರೆ. ಆದರೆ ನಾವು ಸವಾರರು ಹೆದರಿಕೆಯಿಂದ ಚೀರಾಡಿ ಗಾಬರಿಗೊಳ್ಳುತ್ತೇವಷ್ಟೇ. ಜಯರಾಮ್ ಕೂಡಾ ಹಾಗೇ ಗಾಬರಿಗೊಂಡಿದ್ದನೆಂದು ಮೊದಲು ಭಾವಿಸಿದೆ. ಆದರೆ ಅವರ ಕಥೆಗಳು ರಸವತ್ತಾಗಿದ್ದವು.

ಗುಡ್ಡದೆಡೆಗೆ ನಡೆಯುವಾಗ "ಕಮಲಿ" ಬಂಡೆಯ ಸಮೀಪಕ್ಕೇ ಹೋಗುತ್ತಿದ್ದು, ಜಯರಾಮ್ ಬಗ್ಗದಿದ್ದರೆ ಬಂಡೆಗೆ ಬಡಿದು ಅವನ ತಲೆಯೇ ಹೋಳಾಗುವಂತಹ ಕಂಟಕವನ್ನು ತಂದಿಡುತ್ತಿತ್ತು. ಪ್ರಪಾತವಂತೂ ನೋಡಲೂ ಹೆದರಿಕೆಯುಂಟುಮಾಡುವಂತಹದ್ದು. ನಡುವೆ ಚಲಿಸುವಾಗ ಡೋಲಿಯವರ ಹಾದಿಗೆ ಅಡ್ಡವಾಗಿ ನಿಂತು, ಅದರ ಮರದ ಹಿಡಿಕೆಗಳು ಜಯರಾಮ್ ಕಾಲಿಗೆ ಜೋರಾಗಿ ತಾಗುವಂತೆ ಮಾಡುತ್ತಿತ್ತು. ಒಮ್ಮೆ ಅಂಚಿನಲ್ಲಿ ಹೋಗುವಾಗ ವೃದ್ಧನೊಬ್ಬನನ್ನು ತಳ್ಳಿ, ಅವನು ಪ್ರಪಾತಕ್ಕೆ ಬೀಳುವಂತೆ ಮಾಡಿತು! ಪುಣ್ಯದಿಂದ ಆ ವೃದ್ಧ ಬೇಲಿಯ ಕಂಬಿಯನ್ನು ಹಿಡಿದು ಪಾರಾದನು! ಅದೆಷ್ಟು ಜನ ಜಯರಾಮನಿಗೆ ಶಾಪ ಹಾಕಿದ್ದರೋ ಪರಮಾತ್ಮನಿಗೂ ಗೊತ್ತಿಲ್ಲ. ಹಾಗೇ, ಜಯರಾಮ್ ಕೂಡಾ ಅದೆಷ್ಟು ಜನರ ಪ್ರಾಣಕ್ಕೆ ಸಂಚಕಾರ ತಂದಿದ್ದನೋ ಅದೂ ಗೊತ್ತಿಲ್ಲ! ಮೇಲೇರುವಾಗಲೇ ಜಯರಾಮನಿಗೆ "ಕಮಲಿ"ಯ ಆಟ ಸಾಕಾಗಿ ಕಡೆಯ ಅರ್ಧ ಕಿ.ಮೀ. ನಡೆದು ಬಂದಿದ್ದ.

ಕೆಳಗಿಳಿಯುವಾಗ ಶ್ರೀಧರ್‌ರ ಮನವೊಲಿಸಿ ಅವರನ್ನು "ಕಮಲಿ"ಯ ಸುಪರ್ದಿಗೆ ಒಪ್ಪಿಸಿ ಹಾಯಾಗಿರಬಹುದೆಂದು ಜಯರಾಮನ ಆಸೆಯಾಗಿತ್ತು. ಆದರೆ ಶ್ರೀಧರ್ ಅರ್ಧದೂರ ಕ್ರಮಿಸಿದ ನಂತರ ಮರಳಿ "ಬಸಂತಿ"ಯನ್ನೇ ಏರಿದರು. "ಕಮಲಿ"ಯ ಆಟವು ಪಯಣದ ಕೊನೆಯ ಹಂತದಲ್ಲಿ ಪರಾಕಾಷ್ಠೆ ತಲುಪಿತು. ತಲೆಕೆಟ್ಟು ಯಾವುದೋ ಗುಡ್ಡವನ್ನೆಲ್ಲಾ ಏರಲು ಹೋಗುತ್ತಿದ್ದ "ಕಮಲಿ"ಯಿಂದ ಹಾರಿಕೊಳ್ಳಲು ಸಿದ್ಧವಾಗಿ ಜಯರಾಮ್ ಕಾಲನ್ನು ಸಡಿಲಿಸಿಕೊಂಡೇ ತಯಾರಾಗಿದ್ದ. ಒಂದು ಹಂತದಲ್ಲಿ "ಕಮಲಿ" ಗುಡ್ಡವೇರಲು ಹೋಗಿ ವಕ್ರವಾಗಿ ನಿಂತು ಸವಾರನನ್ನು ಕೆಳಗೆ ಬಿಸಾಡಿತು! ಇನ್ನಿದರ ಸಹವಾಸ ಸಾಕೆಂದು ಅವರಿಬ್ಬರೂ ಕಡೆಯ ಒಂದು ಕಿ.ಮೀ. ನಡೆದೇ ಬಂದಿದ್ದರು.

ಮೊದಲೇ ನಗು ಸಾಂಕ್ರಾಮಿಕ. ಅದರಲ್ಲೂ ಇಂತಹ ಕಥೆ ಕೇಳಿದ ಮೇಲೆ ನಗದೆ ಇರಲು ಸಾಧ್ಯವೇ! ನಕ್ಕುನಕ್ಕು ಸುಸ್ತಾಗಿ ಚಾಲಕ ನಮ್ಮನ್ನು ಭೇಟಿಮಾಡಬೇಕಿದ್ದ ಜಾಗವಾದ ಗೌರಿಕುಂಡದ ಬಸ್ ನಿಲ್ದಾಣಕ್ಕೆ ಬಂದೆವು. ಅಲ್ಲಿಂದ ಕರೆ ಮಾಡಿದರೆ, ಹೊರಗೆ ಗೇಟ್‌ನಿಂದ ಹೊರಗೆ ಬಹಳ ಉದ್ದದ ಸಾಲಿರುವುದರಿಂದ ತಡವಾಗುವುದೆಂದು ಹೇಳಿದ. ತಿಂಡಿ ತಿಂದು ಚಹಾ ಕುಡಿದು ಒಂದು ಗಂಟೆ ಕಾದರೂ ಅವನು ಬರಲಿಲ್ಲವಾದ್ದರಿಂದ ಕರೆ ಮಾಡಿದರೆ ಮತ್ತದೇ ಕಥೆ! ಕಡೆಗೆ ಬೇಸತ್ತು ನಡೆದುಕೊಂಡೇ

ಸ್ವರ್ಣಪ್ರಯಾಗಕ್ಕೆ ಹೋಗೋಣವೆಂದು ನಿರ್ಧರಿಸಿದೆವು. ಆದರೆ ಬಹಳ ಆಯಾಸವಾಗಿದ್ದರಿಂದ ತುಸು ದೂರ ಹೋಗುವಷ್ಟರಲ್ಲೇ ಕಾಲು ಮುಷ್ಕರ ಹೂಡಿತು.

ಕಾರೊಂದು ಯಾತ್ರಿಕರನ್ನು ಗೌರಿಕುಂಡಕ್ಕೆ ಬಿಟ್ಟು ಮರಳುತ್ತಿತ್ತು. ಕೈಯೊಡ್ಡಿ ನಿಲ್ಲಿಸಿ ಚಾಲಕನನ್ನು ಸ್ವರ್ಣಪ್ರಯಾಗಕ್ಕೆ ತಲುಪಿಸಲು ಕೇಳಿಕೊಂಡೆವು. ಒಪ್ಪಿಕೊಂಡ ಆತ ನೂರು ರೂಪಾಯಿ ಕೇಳಿದ. ಸರಿಯೆಂದು ಒಪ್ಪಿ ಹತ್ತಿದೆವು.

ಸ್ವರ್ಣಪ್ರಯಾಗದ ಗೇಟ್‌ನಿಂದಾಚೆಗೆ ನಮ್ಮನಿಳಿಸಿ ದುಡ್ಡು ಪಡೆದು ಕಾರ್‌ನವ ಮಾಯವಾದ. ಅಲ್ಲಿನ ಸಾಲು ನಿಜಕ್ಕೂ ಬಲು ಉದ್ದವಿತ್ತು. ಕಾದಿದ್ದ ಜನರು ಯಾರೂ ಅಂದೇ ಗೌರಿಕುಂಡವನ್ನು ತಲುಪಲು ಸಾಧ್ಯವೇ ಇರಲಿಲ್ಲ. ಹತ್ತು–ಹದಿನೈದು ನಿಮಿಷ ಕಷ್ಟಪಟ್ಟು ಹುಡುಕಿ ಸಾಲಿನಲ್ಲಿ ನಿಂತಿದ್ದ ನಮ್ಮ ಕಾರನ್ನು ಪತ್ತೆಹಚ್ಚಿ ನಾವು ಉಳಿದುಕೊಂಡಿದ್ದ ಚಂದ್ರಪುರಿಯತ್ತ ಹೊರಟೆವು. ಸಮಯ ಅಷ್ಟರಲ್ಲಿ ರಾತ್ರಿ ೮.೩೦ ಆಗಿತ್ತು.

ಸ್ವರ್ಣಪ್ರಯಾಗದಿಂದ ಸುಮಾರು ನಾಲ್ಕು ಕಿ.ಮೀ. ದೂರದವರೆಗೂ ವಾಹನಗಳು ಸಾಲುಗಟ್ಟಿ ನಿಂತಿದ್ದವು. ಅಲ್ಲಿಂದ ಬೇಗನೇ ಹೊರಬಂದ ನಾವು ಅದೃಷ್ಟವಂತರೆಂದು ಭಾವಿಸಿಕೊಂಡೆವು. ನಿಧಾನವಾಗಿ ವಾಹನದಟ್ಟಣೆ ಕರಗತೊಡಗಿ, ಕೆಲದೂರದ ನಂತರ ರಸ್ತೆಯಲ್ಲಿ ನಮ್ಮದೊಂದೇ ವಾಹನ ಉಳಿದುಕೊಂಡಿತು. ಸಮಯ ವೇಗವಾಗಿ ಸರಿಯುತ್ತಿದ್ದು, ಊಟಕ್ಕೆ ಏನು ಮಾಡುವುದೆಂಬ ಯೋಚನೆ ಪ್ರಾರಂಭವಾಯಿತು. ಕಡೆಗೆ ಬೇರೆಲ್ಲೂ ಹೋಗದೆ ನಮ್ಮದೇ ಹೋಟೆಲ್‌ಗೆ ಹೋಗಿ ತಿನ್ನೋಣ ಎಂದು ನಿರ್ಧರಿಸಿ ಹೋಟೆಲ್‌ನವನಿಗೆ ಕರೆ ಮಾಡಿ ನಾವು ೧೦ ಗಂಟೆಗೆ ಬರುವೆವೆಂದು ಹೇಳಿ ಅಡುಗೆ ಮಾಡಿಟ್ಟಿರಲು ವಿನಂತಿಸಿದೆವು.

ಹೀಗೇ ಪಯಣ ಮುಂದುವರಿಯುತ್ತಿರಲು, ಗುಪ್ತಕಾಶಿ ತಲುಪಿದೆವು. ದೂರದಿಂದಲೇ ರಸ್ತೆಯಲ್ಲಿ ಪೋಲಿಸರಿದ್ದುದನ್ನು ಕಂಡ ನಮ್ಮ ಚಾಲಕ ಅವರೊಂದಿಗೆ ರಾಜಿ ನಡೆಸಲು ಸಿದ್ಧನಾದ. ಪರ್ವತಪ್ರಾಂತ್ಯದಲ್ಲಿ ರಾತ್ರಿ ೧೦ ಗಂಟೆಯ ನಂತರ ವಾಹನಸಂಚಾರ ನಿಷಿದ್ಧ. ಸಮೀಪದ ಊರಿನಲ್ಲೇ ರಾತ್ರಿ ಕಳೆದು ಬೆಳಗಾದ ನಂತರ ಮುಂದುವರಿಯಬೇಕು. ರಾತ್ರಿಯ ಸಮಯದಲ್ಲಿ ವಾಹನಚಾಲನೆ ಅಪಾಯಕರವಾದದ್ದೆಂದು ಈ ನಿರ್ಬಂಧ. ಪೋಲಿಸರು ಈ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಆಜ್ಞೆ ಮಾಡುತ್ತಾರೆ. ಸಮಯ ಮೀರಿ ಬಂದ ನಮ್ಮ ವಾಹನವನ್ನು ಪೋಲಿಸರು ರಸ್ತೆಗಡ್ಡವಾಗಿ ಹಾಕಿದ್ದ ತಡೆಗಟ್ಟಿನ ಬಳಿ ತಡೆಹಿಡಿದರು.

ಹಿರಿಯ ಪೋಲಿಸ್ ಅಧಿಕಾರಿಯೊಬ್ಬ ಅಂದು ಅಲ್ಲೇ ಇದ್ದು ಮರುದಿನ ಹೊರಡಬೇಕೆಂದು ಸೂಚಿಸಿದನು. ನಾವು ಕಾಡಿ ಬೇಡಿ ಅಂಗಲಾಚಿದೆವು. ನಮ್ಮ ಮಿಕ್ಕೆಲ್ಲ ವಸ್ತುಗಳೂ ಚಂದ್ರಪುರಿಯಲ್ಲೇ ಇವೆ, ಮಾರ್ಗದಲ್ಲಿ ವಾಹನದಟ್ಟಣೆಯಲ್ಲಿ ಸಿಲುಕಿ ತಡವಾಯಿತು, ನಾವು ಬೇಕೆಂದೇ ತಡಮಾಡಿಕೊಂಡು ಬಂದಿಲ್ಲ ಎಂದು ವಿನಂತಿಸಿಕೊಂಡೆವು. ಹಿರಿಯ ಅಧಿಕಾರಿಗೆ ನಮ್ಮ ಮಾತು ಕೇಳುವ ವ್ಯವಧಾನವಿರಲಿಲ್ಲ. ಕಿರಿಯವನೊಬ್ಬನಿಗೆ ನಮ್ಮೊಡನೆ ಮಾತಾಡಲು ಆದೇಶಿಸಿ ಅಲ್ಲಿಂದ ಹೊರನಡೆದ.

ಪುನಃ ಮತ್ತೊಬ್ಬನೆದುರು ನಮ್ಮೆಲ್ಲ ಕಥೆ ಹೇಳಿದೆವು. ನನ್ನನ್ನೂ ಚಾಲಕನನ್ನೂ ಮೊದಲು ದೂರ ಹೋಗುವಂತೆ ಸೂಚಿಸಿದ ಆ ಕಿರಿಯ ಅಧಿಕಾರಿ, ಶ್ರೀಧರ್ ಮತ್ತು ಜಯರಾಮ್ ಅವರಿಗಷ್ಟೇ ಮಾತಾಡುವಂತೆ ಆದೇಶಿಸಿದ. ಅವನ ಮಾತು ಮೀರಿ ಸಹ ನಾನು ಅಲ್ಲೇ ನಿಂತಿರುವುದನ್ನು ಕಂಡು ಕೋಪದಿಂದ ಕೆಂಗಣ್ಣು ಬೀರಿದ. ಬಹುಶಃ ಅವನಿಗೆ ಹಿಂದಿ ಭಾಷೆ ಸರಿಯಾಗಿ ಬರದ ಈ ಜನರಿಂದ ಹೆಚ್ಚು ಹಣ ವಸೂಲಿ ಮಾಡಬಹುದೆಂಬ ಕಲ್ಪನೆ ಮೂಡಿತ್ತು, ಮತ್ತು ನನ್ನ ಹಾಗೂ ಚಾಲಕನ ಹಿಂದಿ ಅವನ ಇಚ್ಛೆಗೆ ಕಲ್ಲು ಹಾಕುವಂತೆ ಕಂಡಿದ್ದವು. ಅಂತೂ ಇನ್ನೂರು ರೂಪಾಯಿ ಪಡೆದು ತಡೆಗಟ್ಟನ್ನು ಸರಿಸಿ ನಮ್ಮ ಕಾರು ಹೋಗಲು ಅವಕಾಶ ಮಾಡಿಕೊಟ್ಟ. ಹಿರಿಯ ಅಧಿಕಾರಿಯು ನೋಡಿಯೂ ನೋಡದಂತೆ ಸುಮ್ಮನಿದ್ದ. ನಿರುಮ್ಮಳವಾಗಿ, ಆದರೆ ವೇಗವಾಗಿ ಮುಂದಕ್ಕೆ ಹೊರಟೆವು.

ನಿಶೆಯ ಕತ್ತಲು ಭಯ ಹುಟ್ಟಿಸುವಂತೆಯೇ ಇತ್ತು. ಕಾರ್ಗತ್ತಲು, ನೀರವ ಮೌನ ದಿಗಿಲುಗೊಳಿಸುವಂತಿದ್ದರೂ ಸುಂದರವಾಗಿತ್ತು. ಮಂದಾಕಿನಿ ನದಿ ಗುಪ್ತಕಾಶಿಯಿರುವ ಗುಡ್ಡದಿಂದ ಕೆಳಗೆ ಹರಿಯುತ್ತದೆ. ನದಿಯ ಇನ್ನೊಂದು ಬದಿಗೆ ಇರುವ ಗುಡ್ಡದ ಮೇಲೆ "ಉಖೀಮಠ" ಎಂಬ ಮತ್ತೊಂದು ಪಟ್ಟಣವಿದೆ. ರಾತ್ರಿಯ ಕತ್ತಲೆಯನ್ನು ತೊಲಗಿಸಲು ಮಿನುಗುತಿದ್ದ ಉಖೀಮಠದ ದೀಪಗಳು ಚಿಕ್ಕ ನಕ್ಷತ್ರಗಳಂತೆ ಭಾಸವಾಗುತ್ತಿದ್ದವು. ಕಡುಕಪ್ಪು ಆಗಸ, ಮಧ್ಯೆಮಧ್ಯೆ ಬಿಂದುವಿನಂತಹ ದೀಪಗಳು, ಈ ದೃಶ್ಯ ಬಲು ಮೋಹಕವಾಗಿತ್ತು.

ಮಾನವನ ಆಸೆಗೆ ಮಿತಿಯೇ ಇಲ್ಲ. ಬೆಂಗಳೂರಿನ ಆಗಸದಲ್ಲಿ ಒಂದೇ ಒಂದು ನಕ್ಷತ್ರ ಕಾಣಲು, ಕಪ್ಪು ಆಗಸವನ್ನೊಮ್ಮೆ ಕಣ್ತುಂಬ ನೋಡಲು ಕಾತರಿಸುವ ಮನಸ್ಸು ಪರ್ವತಪ್ರಾಂತ್ಯದ ಕಾಡುಪ್ರದೇಶದಲ್ಲಿ ಕೊಂಚವಾದರೂ ಬೆಳಕನ್ನು ಕಾಣಬಾರದೇ ಎಂದು ಹಂಬಲಿಸುತ್ತದೆ. ಕತ್ತಲನ್ನು ಭೇದಿಸಿಕೊಂಡು ಬರುವ ಆ ಬೆಳಕು ಇಲ್ಲೆಲ್ಲೋ ಮನುಷ್ಯಜೀವಿಗಳಿವೆಯೆಂಬುದನ್ನು ಸೂಚಿಸಿ ಬೆದರಿದ ಮನಸ್ಸಿಗೆ ಕೊಂಚ

ಧೈರ್ಯ, ಸಾಂತ್ವನ ಹೇಳುತ್ತವೆ. ಉಖೀಮಠದ ದೀಪಗಳೂ ಈ ಭಾವನೆಗಳನ್ನು ಮೂಡಿಸುವಲ್ಲಿ ಹಿಂದುಳಿಯಲಿಲ್ಲ.

ಮುಂದಿನ ದಾರಿಯಲ್ಲಿ ಬೇರಾವುದೇ ಅಡೆತಡೆಗಳಿರಲಿಲ್ಲ. ಲಗುಬಗೆಯಿಂದ ಚಂದ್ರಪುರಿ ತಲುಪಿದಾಗ ರಾತ್ರಿ ಹನ್ನೊಂದಾಗಿದ್ದು, ಹೋಟೆಲ್‌ನವ ಊಟ ತಯಾರಿಸಿ ನಮಗಾಗಿ ಕಾದಿದ್ದ. ಹಸಿದ ಹೊಟ್ಟೆಗೆ ಏನು ಸಿಕ್ಕಿದರೂ ರುಚಿಸುವುದು. ಜೊತೆಗೆ ದೇಹ ದಣಿದಿದ್ದರಂತೂ ತಿನಿಸುಗಳು ಇನ್ನೂ ರುಚಿಕರ. ಊಟ ಮುಗಿಸಿ ಮಲಗುವಷ್ಟರಲ್ಲಿ ಮಧ್ಯರಾತ್ರಿಯಾಗಿತ್ತು. ನಾನು ಸತತ ೨೨ ಗಂಟೆಗಳ ಕಾಲ ಎಚ್ಚರವಾಗಿದ್ದು ಇದೇ ಮೊದಲು!

# ಇದುವೇ ಸ್ವರ್ಗ!

೧೧ ಜೂನ್ ೨೦೧೩, ಮಂಗಳವಾರ... ಹಿಂದಿನ ರಾತ್ರಿ ಕೇದಾರನಾಥದಿಂದ ಮರಳಿ ಚಂದ್ರಪುರಿಗೆ ಬಂದಾಗಲೇ ಚಾಲಕ ಹೇಳಿದ್ದ, ನಾಳೆಯ ದಿವಸ ನಿಧಾನವಾಗಿ ಎದ್ದು ತಯಾರಾಗಿ ಹೋಗಬಹುದು, ಬರಿಯ ಕಾರ್ ಪ್ರಯಾಣವಾದ್ದರಿಂದ ಏನೇನೂ ಅವಸರವಿಲ್ಲವೆಂದು. ಜೊತೆಗೆ ದಾರಿ ಕೂಡ ಚೆನ್ನಾಗಿದ್ದು, ನಿಸರ್ಗದ ಸೌಂದರ್ಯವನ್ನು ಅದೆಷ್ಟು ಸವಿದರೂ ಇನ್ನೂ ಕೆಲಸಮಯ ಅಲ್ಲೇ ಇರುವಂತೆ ಮನ ಬಯಸುವುದೆಂದೂ ಸಹ ಹೇಳಿದ್ದ. ಹೀಗಾಗಿ ಬೆಳಿಗ್ಗೆ ಆರಾಮವಾಗಿ ಎದ್ದು ಹೋಟೆಲ್‌ನ ಪಕ್ಕದಲ್ಲೇ ಹರಿಯುತ್ತಿದ್ದ ಮಂದಾಕಿನಿ ನದಿಯ ಒನಪು-ವಯ್ಯಾರಗಳನ್ನು ದಣಿವಾಗುವವರೆಗೂ ನೋಡಿ ಆನಂದಿಸಿ ತಯಾರಾಗಿ ಹೊರಡಲು ಅಣಿಯಾದೆವು. ಕೊಠಡಿಯ ಬೀಗವನ್ನು ಸ್ವೀಕರಿಸಿದ ಹೋಟೆಲ್‌ನ ಹುಡುಗ ಮುಂದೆಲ್ಲಿಗೆ ಹೋಗುತ್ತೇವೆಂದು ಕೇಳಿದ. ಪುಷ್ಪಗಳ ಕಣಿವೆಗೆ ಎಂದೊಡನೆ ಖುಶಿಯಿಂದ "ಓಹ್! ಫೂಲೋಂ ಕೀ ಘಾಟೀ!" ಎಂದು ಉದ್ಗರಿಸಿದ. ನಮ್ಮ ಉತ್ಸಾಹ ಹೆಚ್ಚಾಗಲು ಅಷ್ಟು ಸಾಕಾಗಿತ್ತು. ಕಾರನ್ನು ಚಾಲೂ ಮಾಡಿ ಹೊರಟೆವು.

ಚಂದ್ರಪುರಿಯಿಂದ ಮುಂದೆ ಕುಂಡ್ (ಗೌರಿಕುಂಡವಲ್ಲ, ಹಳ್ಳಿಯ ಹೆಸರು ಕುಂಡ್ ಎಂದೇ!) ಎಂಬ ಹಳ್ಳಿಯಲ್ಲಿ ರಸ್ತೆ ಕವಲೊಡೆಯುತ್ತದೆ. ಒಂದೆಡೆ ತಿರುಗಿದರೆ, ನದಿಗಡ್ಡವಾಗಿರುವ ಸೇತುವೆ ದಾಟಿ ಗುಪ್ತಕಾಶಿಗೆ ಹೋಗಬಹುದು. ಮತ್ತೊಂದು ರಸ್ತೆ ಉಖೀಮಠದೆಡೆಗೆ ಹೋಗುತ್ತದೆ. ಅಲ್ಲಿಂದ ಮುಂದಕ್ಕೆ ಚೋಪತಾ, ಗೋಪೇಶ್ವರ ಮಾರ್ಗವಾಗಿ ಹೋಗಿ, ಚಮೋಲಿ ಎಂಬಲ್ಲಿ ಹೆದ್ದಾರಿಯನ್ನು ಸೇರಿ ಮುಂದಕ್ಕೆ ಬದರಿನಾಥಕ್ಕೆ ಹೋಗಬಹುದು. ಆದರೆ ಆ ರಸ್ತೆ ಚಿಕ್ಕದಾಗಿರುವುದರಿಂದ ಭಾರೀ ವಾಹನಗಳಾವುವೂ ಅತ್ತ ಹೋಗುವುದಿಲ್ಲ. ಬದಲಿಗೆ ರುದ್ರಪ್ರಯಾಗಕ್ಕೆ ಮರಳಿ ಅಲ್ಲಿಂದ ಹೆದ್ದಾರಿ ಹಿಡಿದು ಸಾಗುತ್ತವೆ. ಚಾರ್‌ಧಾಮ್ ಯಾತ್ರೆಗೆ ಸಾಮಾನ್ಯವಾಗಿ ಬರುವವರೆಲ್ಲರೂ ದೊಡ್ಡ ಗುಂಪಿನಲ್ಲಿ ಬರುವುದರಿಂದ ಚಿಕ್ಕ ವಾಹನಗಳ ಸಂಖ್ಯೆ ಕಡಿಮೆಯೇ. ಹಾಗಾಗಿ, ಚೋಪತಾ ಮಾರ್ಗವಾಗಿ ಹೋಗುವುವರು ತೀರಾ ವಿರಳ.

ಉಖೀಮಠಕ್ಕೆ ಸಾಗುವಾಗ ಒಂದು ಸ್ಥಳದಲ್ಲಿನ ಡಾಂಬರು ರಸ್ತೆ ಇದ್ದಕ್ಕಿದ್ದಂತೆ ಮಾಯವಾದಂತಿತ್ತು. ಬದಲಿಗೆ, ಮಣ್ಣಿನ ತಾತ್ಕಾಲಿಕ ರಸ್ತೆಯೊಂದನ್ನು ಮಾಡಿದ್ದರು. ಚಾಲಕ ಒಂದೆಡೆ ಕೈತೋರುತ್ತಾ ಹೇಳಿದ ವಿಷಯ ನಿಜಕ್ಕೂ ಗಾಬರಿ ಹುಟ್ಟಿಸುವಂತದ್ದಾಗಿತ್ತು.

ಮೂರು ವರ್ಷಗಳ ಹಿಂದೆ ಅಲ್ಲೊಂದು ಹಳ್ಳಿಯಿತ್ತಂತೆ! ಈಗಿಲ್ಲ! ಹಳ್ಳಿಯಿತ್ತೆಂಬ ಕುರುಹೂ ಇಲ್ಲ! ೨೦೧೦ ರಲ್ಲಿ ಮೇಘಸ್ಫೋಟವಾಗಿ, ಇಡೀ ಹಳ್ಳಿಯೇ ಭೂಕುಸಿತದಿಂದ ನಾಶವಾಗಿ ಹೋಗಿತ್ತು. ಈ

ಘೋರ ಕಥೆಯನ್ನು ಹೇಳಲು ಒಬ್ಬನೇ ಒಬ್ಬನೂ ಉಳಿಯಲಿಲ್ಲವಂತೆ. ಒಂದು ಮಗು, ಒಂದು ಪ್ರಾಣಿಯೂ ಉಳಿಯದೆ ಎಲ್ಲ ಜೀವಿಗಳೂ ಕೊಚ್ಚಿಕೊಂಡು ಹೋಗಿ ಮಂದಾಕಿನಿಯ ಪಾಲಾಗಿದ್ದವು! ಅಲ್ಲೊಂದು ಊರು ಇತ್ತೆಂದು ಹೇಳುವ ಏಕೈಕ ಗುರುತೆಂದರೆ ಅರ್ಧಕ್ಕೆ ಮರೆಯಾಗಿದ್ದ ಡಾಂಬರು ರಸ್ತೆ ಮಾತ್ರ!

ಕಥೆ ನಿಜಕ್ಕೂ ಘೋರವಾಗಿತ್ತು. ಎಷ್ಟೋ ಹೊತ್ತು ಯಾರೂ ಮಾತಾಡದೆ ಮೌನವಾಗಿ ಕುಳಿತಿದ್ದೆವು. ಮನದೊಳಗೆ ನೂರಾರು ಆಲೋಚನೆಗಳು ಮಂದಾಕಿನಿಯಷ್ಟೇ ವೇಗವಾಗಿ ಹರಿದಾಡುತ್ತಿದ್ದವು. ಹಳ್ಳಿಗೆ ಹಳ್ಳಿಯೇ ನಾಶವಾಗುವುದೆಂದರೆ ಏನರ್ಥ! ಪ್ರಕೃತಿಮಾತೆ ತನ್ನ ಮಕ್ಕಳ ಮೇಲೆ ಈ ರೀತಿಯಾಗಿ ಮುನಿಯುವಳೇ ಎಂದೆನ್ನಿಸಿ ಬೇಸರವಾಯಿತು. ಕನಸುಮನಸ್ಸಿನಲ್ಲಿಯೂ ಇದಕ್ಕಿಂತ ಭಯಂಕರವಾದ ವಿಪತ್ತನ್ನು ಮುಂದಿನ ಕೆಲವೇ ದಿನಗಳಲ್ಲಿ ಕಾಣುತ್ತೇವೆಂಬ ಚಿಕ್ಕ ಕಲ್ಪನೆಯೂ ಇರಲಿಲ್ಲ!

ಉಖೀಮಠ ಬಂದಿದ್ದೂ ಆಯಿತು, ಹೋದದ್ದೂ ಆಯಿತು. ನಾವು ಹೊರಡುವಾಗ ನಿರ್ಮಲವಾಗಿದ್ದ ಆಗಸದಲ್ಲೀಗ ಈಗ ಮೋಡ ಮುಸುಕಿ, ವಾತಾವರಣ ಮಬ್ಬಾಗಿತ್ತು. ನೂರು ಮಾರುಗಳಿಗಿಂತ ದೂರದ ಯಾವ ವಸ್ತುವೂ ಕಣ್ಣಿಗೆ ಕಾಣುತ್ತಿರಲಿಲ್ಲ. ಚಾಲಕ ಬಹಳ ಬೇಸರಗೊಂಡ. ಸ್ವರ್ಗಸದೃಶವಾದ ಜಾಗವಿದು, ಮೋಡ ಮುಸುಕಿ ಪ್ರಕೃತಿಸೌಂದರ್ಯ ಕಾಣದಂತಾಯಿತಲ್ಲ ಎಂಬುದು ಅವನ ಬೇಸರಕ್ಕೆ ಕಾರಣ. ಪದೇಪದೇ ಈ ಮಾತನ್ನು ಹೇಳುತ್ತಲೇ ಇದ್ದ. ಉತ್ಪ್ರೇಕ್ಷೆ ಮಾಡುತ್ತಿದ್ದರೂ ಮಾಡುತ್ತಿರುವನೆಂದು ತಿಳಿದು ಸುಮ್ಮನಿದ್ದೆವು.

ಮುಸುಕಿದ ಮೋಡಕ್ಕೆ ಮಾಡಲು ಕೆಲಸವಿರಲಿಲ್ಲವೆಂದು ತೋರುತ್ತದೆ, ತುಂತುರು ಮಳೆಯನ್ನು ಸಹ ಸುರಿಸಲು ಪ್ರಾರಂಭ ಮಾಡಿತು. ನಾವು ದುರದೃಷ್ಟಶಾಲಿಗಳೆಂದೇ ಚಾಲಕನಿಗೆ ಅನ್ನಿಸಿದ್ದರೂ ಕೂಡಾ ಜಿಟಿಜಿಟಿ ಮಳೆ, ಪೂರ್ತಿಯಾಗಿ ಹಸಿರಿನ ಛಾವಣಿ ಹೊದ್ದಿಸಿದ ಕಿರಿದಾದ ರಾಜಮಾರ್ಗ, ನಾವೊಬ್ಬರೇ ಇಡೀ ಜಗತ್ತಿನಲ್ಲಿರುವೆವೆಂಬಂತಿದ್ದ ಸುತ್ತಲಿನ ವಾತಾವರಣ, ಪ್ರಪಂಚದಲ್ಲಿ ಜನರ ಇರುವಿಕೆಯನ್ನೇ ಮರೆಸುವ ಏಕಾಂತ, ಸದ್ದು ಮಾಡುತ್ತಾ ಸುರಿಯುತ್ತಿರುವ ಮಳೆ – ಇವೆಲ್ಲದರ ಹದವಾದ ಮಿಶ್ರಣ ಅಪೂರ್ವವಾದ ಅನುಭವವನ್ನೇ ಉಂಟುಮಾಡಿತು. ಸ್ವರ್ಗಕ್ಕೆ ಮೂರೇ ಗೇಣು ಎನ್ನುವ ನುಡಿಗಟ್ಟಿಗೆ ಕೂಡ ನಮ್ಮ ಮನಸ್ಥಿತಿಯನ್ನು ವಿವರಿಸಲು ಸಾಧ್ಯವಾಗದು, ಅಂತಹ ಚೆಲುವು! ನಾವು ಸ್ವರ್ಗದಲ್ಲೇ ಇದ್ದೆವು!

ಇದ್ದಕ್ಕಿದಂತೆ ರಸ್ತೆಯಲ್ಲಿ ಜೋರಾದ ಸದ್ದು ಕೇಳತೊಡಗಿತು. ಎಲ್ಲೋ ನದಿಯೊಂದು ಭೋರ್ಗರೆದು ಹರಿಯುತ್ತಿದ್ದ ಸದ್ದು ಅದು. ಎದುರಿಗೆ ಸಂಕವೊಂದು (Bridge) ಕಣ್ಣಿಗೆ ಬೀಳುತ್ತಿದ್ದಂತೆ ನದಿಯು ಅಲ್ಲೇ ಇರುವುದೆಂದು ಖಾತರಿಯಾಯಿತು. ಮಳೆ ಜೋರಾಗಿ ಬರುತ್ತಿದ್ದರೂ ಲೆಕ್ಕಿಸದೆ ಕ್ಯಾಮೆರಾ ಹಿಡಿದು ಕಾರಿನಿಂದಿಳಿದು ಸಂಕದತ್ತ ಓಡಿದೆವು.

ಗುಡ್ಡದ ಮಣ್ಣನ್ನೆಲ್ಲಾ ಬಸಿದು ತನ್ನೊಡಲಲ್ಲಿ ತುಂಬಿಸಿಕೊಂಡು ತನ್ನ ನೀರಿನ ಬಣ್ಣವನ್ನೇ ಬದಲಿಸಿಕೊಂಡಿದ್ದ ನದಿಯೊಂದು ರಭಸದಿಂದ ಹರಿಯುತ್ತಿತ್ತು. ಅದರ ವೇಗ ಯಾವ ದೊಡ್ಡ ನದಿಗೂ ಕಡಿಮೆಯಿರಲಿಲ್ಲ. ಸುತ್ತಲಿನ ಕಾಡಿನೊಳಗೆ ಹರಿಯುವ ಎಲ್ಲ ತೊರೆ, ಝರಿಗಳೂ ತಮ್ಮ ನೀರನ್ನು ಧಾರೆಯೆರೆದು ಈ ನದಿಗೆ ಮೆರುಗು ನೀಡಿದ್ದವು. ಶಬ್ದದ ತೀವ್ರತೆ ಅದೆಷ್ಟಿತ್ತೆಂದರೆ ಒಬ್ಬರ ಮಾತು ಮತ್ತೊಬ್ಬರಿಗೆ ಕೇಳಲು ಗಟ್ಟಿಯಾಗಿ ಕೂಗಬೇಕಿತ್ತು. ಕೇವಲ ನೂರಿನ್ನೂರು ಅಡಿಗಳ ದೂರದಲ್ಲೇ ದಟ್ಟ ಕಾಡು ಪ್ರಾರಂಭವಾಗಿದ್ದು, ಕಾಡಿನ ಅಂತರಾಳವನ್ನು ಸೀಳಿಕೊಂಡು ಬರುತ್ತಿದ್ದ ನದಿಯನ್ನು ಬಣ್ಣಿಸಲು ಸಾಧ್ಯವೇ ಇಲ್ಲ! ಮೂಕವಿಸ್ಮಿತರಾಗಿ ಮಳೆಯ ಪರಿವೆಯೇ ಇಲ್ಲದೆ ನೆನೆಯುತ್ತಾ ಪ್ರಕೃತಿಯ ಈ ವೈಚಿತ್ರ್ಯವನ್ನು ನೋಡುತ್ತಿದ್ದ ನಮ್ಮನ್ನು ಕಾರಿನ ಹಾರ್ನ್ ಎಚ್ಚರಿಸಿತು. ಮಳೆಯಲ್ಲಿ ನೆನೆಯುತ್ತಿದ್ದೇವೆಂದು ಚಾಲಕ ನೆನಪಿಸಿದ. ಒಲ್ಲದ ಮನಸ್ಸಿನಿಂದ ಕಾರ್ ಏರಿದೆವು. ಅದು ಯಾವ ನದಿಯೆಂದು ಅವನನ್ನು ಕೇಳಿದಾಗ ಅದಕ್ಕೆ ಹೆಸರಿಲ್ಲವೆಂದೂ, ಹೀಗೆ ಸಾವಿರಾರು ನದಿಗಳು ಅರಣ್ಯದಲ್ಲಿ ಹರಿಯುತ್ತವೆಂದೂ ಹೇಳಿದನು. ಅಷ್ಟು ನೀರು ಬೇಸಿಗೆಯಲ್ಲಿ ನಮ್ಮ ಸೀಮೆಯ ದೊಡ್ಡ ನದಿಯಾದ ಕಾವೇರಿಯಲ್ಲೂ ಹರಿಯುವುದಿಲ್ಲ! ನೀರಿಗಾಗಿ ಪ್ರತಿವರ್ಷವೂ ಜಗಳವಾಡುವ ರಾಜ್ಯದ ಪಕ್ಕದಲ್ಲಿರುವ ನಾವು ಹೀಗೆ ನೀರು ಹೇಳಹೆಸರಿಲ್ಲದಂತೆ ಹರಿಯುತ್ತಿದ್ದುದನ್ನು ಕಂಡು ಅಸೂಯೆಪಟ್ಟೆವು.

ಪ್ರಕೃತಿದೇವಿಯ ಚೆಲುವಿಗೆ, ರಮ್ಯತೆಗೆ ಬೇರೇನೂ ಹೋಲಿಸಲು ಸಾಧ್ಯವಿಲ್ಲ. ಕಾಲ ಬದಲಾದಂತೆ ವಿಧವಿಧವಾದ ರೂಪವನ್ನು ಧರಿಸಿ ಹುಲುಮಾನವನನ್ನು ತನ್ನತ್ತ ಸೆಳೆದು ಮೈಮರೆತು ಭಾವಪರವಶನಾಗುವಂತೆ ಮಾಡುವ ಪ್ರಕೃತಿದೇವಿ ಹೊಸತನ್ನರಸಿ ಬರುವ ಎಲ್ಲರಿಗೂ ತನ್ನ ಒಡಲಲ್ಲಿ ಬಚ್ಚಿಟ್ಟುಕೊಂಡಿರುವ ವಿವಿಧ ರಹಸ್ಯಗಳು, ಬಣ್ಣಗಳು, ಸೋಜಿಗಗಳನ್ನು ಅವರವರ ತಿಳುವಳಿಕೆಗೆ ತಕ್ಕಂತೆ ದರ್ಶನ ಮಾಡಿಸುತ್ತಾಳೆ. ಒಮ್ಮೆ ಈಕೆಯಲ್ಲಿ ಅನುರಕ್ತನಾದವನು ಮತ್ತೆಮತ್ತೆ ಹೊಸತನ ಅರಸಿ ಬರುತ್ತಲೇ ಇರುತ್ತಾನೆ. ದೊಡ್ಡ ನಗರಗಳಲ್ಲಿನ ಜೀವನದ ಜಂಜಡ, ಏಕತಾನತೆಗಳನ್ನು ಮರೆಸುವ ಶಕ್ತಿ ಪ್ರಕೃತಿದೇವಿಗೆ ಬಿಟ್ಟು ಬೇರೆ ಯಾರಿಗಿದೆ! ನಿಸರ್ಗದ ಈ ಮನಮೋಹಕ ಸೊಬಗನ್ನು ತುಂಬಿಕೊಳ್ಳಲು ಎರಡು ಕಣ್ಣು ಸಾಲದು. ಕಲ್ಲು ಹೃದಯದವನನ್ನೂ ಕವಿಯನ್ನಾಗಿ, ರಸಿಕನನ್ನಾಗಿ ಮಾಡುವಂತಹ

ಸಾಮರ್ಥ್ಯ ಹೊಂದಿರುವ ಪ್ರಕೃತಿದೇವಿ, ನನ್ನನ್ನಂತೂ ಸಂಪೂರ್ಣವಾಗಿ ಆವರಿಸಿಕೊಂಡು ಮನಸ್ಸನ್ನು ಅಪಹರಿಸಿಬಿಟ್ಟಿದ್ದಳು.

ಮಳೆ ಹೆಚ್ಚಾಗುತ್ತಲೇ ಇತ್ತು. ಈಗ ಸ್ವಲ್ಪ ಚಳಿಯೂ ಆಗತೊಡಗಿ, ಎಲ್ಲರಿಗೂ ಚಹಾ ಕುಡಿಯಬೇಕೆನ್ನುವ ಬಯಕೆ ಉಂಟಾಯಿತು. ಮುಂದಿನ ಚಹಾ ಅಂಗಡಿಯಲ್ಲಿ ನಿಲ್ಲಿಸುವಂತೆ ಚಾಲಕನಿಗೆ ಹೇಳಿದೆವು. ಜನಸಂಚಾರ ಹೆಚ್ಚಿಲ್ಲದ ಕಾರಣ ಬೀದಿಬದಿಯ ಅಂಗಡಿಗಳೂ ಹೆಚ್ಚಾಗೇನಿರಲಿಲ್ಲ. ಒಂದಷ್ಟು ದೂರ ಹೋದ ನಂತರ ಎದುರುಬದುರಾಗಿ ಎರಡು ಅಂಗಡಿಗಳು ಕಂಡು, ಜನರೇ ಇರದಿದ್ದ ಎರಡನೆಯ ಅಂಗಡಿಗೆ ಹೋದೆವು.

ಪುಟ್ಟ ಸಂಸಾರವೊಂದು ಜೀವನೋಪಾಯಕ್ಕಾಗಿ ನಡೆಸುತ್ತಿದ್ದ ರಸ್ತೆಬದಿಯ ಹೋಟೆಲ್ ಅದು. ಪತಿ–ಪತ್ನಿ ಮತ್ತು ಎರಡು ಮುದ್ದಾದ ಮಕ್ಕಳಿದ್ದ ತುಂಬುಸಂಸಾರವದು. ಮಕ್ಕಳಿಬ್ಬರಿಗೂ ವಯಸ್ಸು ಐದು ವರ್ಷಗಳೂ ಆಗಿರಲಿಲ್ಲ. ಮಗ ಹಿರಿಯವನು ನಮ್ಮೊಡನೆ ಬೇಗ ಬೆರೆತರೂ ಅವನ ತಂಗಿ ಗೋಡೆಯ ಹಿಂದೆಯೇ ಅವಿತುಕೊಂಡು ನಮ್ಮತ್ತ ನೋಡುತ್ತಿದ್ದಳು. ಅದೆಷ್ಟು ಕರೆದರೂ ಅವಳು ಹೊರಗೆ ಬರಲಿಲ್ಲ. ಚಳಿಗೆ ಬಿಸಿಬಿಸಿ ಈರುಳ್ಳಿ ಪಕೋಡಾ, ಚಹಾ ಹಿತಕರವಾಗಿದ್ದವು. ಗಿರಾಕಿ ಸಿಕ್ಕಿದ್ದರಿಂದ ಮಕ್ಕಳ ತಾಯಿ ನಮಗೆ ಬೇಯಿಸಲು ಹಾಕಿದ್ದ ಬೆಂಕಿಯಲ್ಲೇ ಕುಟುಂಬಕ್ಕೂ ಅಡುಗೆ ಮಾಡಿಟ್ಟುಕೊಂಡದ್ದು ಕಂಡುಬಂತು. ಶೀತಲಪ್ರದೇಶದಲ್ಲಿ, ಅದರಲ್ಲೂ ಮಳೆ ಬರುತ್ತಿದ್ದರೆ, ಬೆಂಕಿಯುರಿಸುವುದೊಂದು ಸಾಹಸವೇ ಸರಿ. ಆದ್ದರಿಂದ ಒಟ್ಟಿಗೆ ಕೆಲಸ ಮುಗಿಸಿಕೊಂಡು ಮಕ್ಕಳಿಗೂ ಗಂಡನಿಗೂ ಉಣಬಡಿಸುವ ಧಾವಂತವಿದ್ದಿರಬೇಕು ಆ ತಾಯಿಯದು. ಪ್ರವಾಸಿಗಳ ಸಂಖ್ಯೆ ಕಡಿಮೆಯಿದ್ದರೂ, ಬರುವ ಆದಾಯ ಹೆಚ್ಚಲ್ಲದಿದ್ದರೂ ಸಂತೃಪ್ತ ಬಾಳು ನಡೆಸುತ್ತಿರುವ ಲಕ್ಷಣ ಅವರೆಲ್ಲರ ಮುಖಗಳಲ್ಲಿ ಮನೆಮಾಡಿತ್ತು. ಚಹಾ, ಪಕೋಡಾಗಳಿಗೆ ಅವರು ಪಡೆದ ಹಣ ಅವರು ಪಡುವ ಕಷ್ಟದೆದುರು ಹೆಚ್ಚೇನಲ್ಲ ಎಂದೆನ್ನಿಸಿತು.

ಮತ್ತೊಮ್ಮೆ ಪ್ರಯಾಣ ಮುಂದುವರಿಸಿದೆವು. ಈಗ ವರುಣದೇವನಿಗೂ ನಮ್ಮ ಮೇಲೆ ಕರುಣೆ ಬಂದಿತೇನೋ, ಮಳೆ ನಿಧಾನವಾಗಿ ನಿಲ್ಲಲಾರಂಭಿಸಿತು. ಮೋಡ ಕೂಡ ತೊಲಗಿ, ಸುತ್ತಲಿನ ವರ್ಣಸಲಸದಳ ರಮಣೀಯ ನಿಸರ್ಗದ ನಿತ್ಯನೂತನ ಚೆಲುವು ಗೋಚರಿಸತೊಡಗಿತು. ಎಲ್ಲೆಡೆ ಚಾಚಿರುವ ಹರಿದ್ವರ್ಣದ ಕಾಡು, ಬೆಟ್ಟ–ಗುಡ್ಡಗಳು, ದೂರದಲ್ಲಿ ನಿಂತಿರುವ ಹಿಮಗಿರಿಗಳು, ನಡುವೆ ಪುಟ್ಟದಾಗಿ ಕಾಣುವ ಹಳ್ಳಿಗಳು, ಬೆಟ್ಟದ ಮೇಲೆಲ್ಲೋ ಇರುವ ಒಂಟಿ ಮನೆಗಳು, ಪ್ರಕೃತಿಯೊಡನೆ ಒಂದಾಗಿ ಬಾಳುತ್ತಿರುವ ಜನ, ಸಾಕುಪ್ರಾಣಿಗಳು – ಹೀಗೆ ಕಣ್ಣಿಗೆ ಬೀಳುವ ಎಲ್ಲ ಚರಾಚರ ವಸ್ತುಗಳಲ್ಲೂ ಸೌಂದರ್ಯ ರಾರಾಜಿಸುತ್ತಿತ್ತು. ತಳವೇ ಕಾಣದ ಪ್ರಪಾತ, ಹಾವಿನಂತಿರುವ ರಸ್ತೆ,

ನಡುವೆ ಗುಡ್ಡದಿಂದ ಹರಿದು ಬರುತ್ತಿರುವ ತಿಳಿನೀರಿನ ಅಸಂಖ್ಯಾತ ಝರಿಗಳು – ಹಿಂದಿನ ದಿನದ ಆಯಾಸವು ನೆನಪಿನಲ್ಲಿ ಉಳಿಯದಂತೆ ಮಾಡಿ ಹೊಸದೊಂದು ಲೋಕಕ್ಕೆ ಕರೆದೊಯ್ದವು. ಕ್ಯಾಮೆರಾಗಳಿಗಂತೂ ನಿರಂತರ ಕೆಲಸ. ಮೂವರೂ ಬಿಡದೇ ಕ್ಲಿಕ್ಕಿಸುತ್ತಲೇ ಇದ್ದೆವು. ಆದರೆ ಕಣ್ಣಿನಿಂದ ಕಂಡ ದೃಶ್ಯವು ಅದೆಷ್ಟು ವಿಸ್ಮಯಕಾರಿಯಾಗಿತ್ತೆಂದರೆ ಜಗತ್ತಿನ ಅತ್ಯಂತ ಸುಧಾರಿತ ಕ್ಯಾಮೆರಾಗಳೂ ಆ ದೃಶ್ಯವನ್ನು ಸಮರ್ಥವಾಗಿ ಚಿತ್ರಿಸಿ ನ್ಯಾಯ ಒದಗಿಸಲು ಸಾಧ್ಯವಿರಲಿಲ್ಲ.

ಮುಂದೆ ಚೋಪತಾ ಹಳ್ಳಿ ಸಿಕ್ಕಿತು. ಚೋಪತಾದಿಂದ ತುಂಗನಾಥ ಎಂಬಲ್ಲಿಗೆ ನಾಲ್ಕು ಕಿ.ಮೀ. ಚಾರಣದ ಹಾದಿಯಿದ್ದು, ತುಂಗನಾಥದ ಶಿವದೇವಾಲಯ ಪ್ರಪಂಚದಲ್ಲೇ ಅತಿ ಎತ್ತರದಲ್ಲಿರುವ ಶಿವದೇವಾಲಯವಾಗಿದೆ. ತುಂಗನಾಥದಿಂದ ಮುಂದಕ್ಕೆ ಸುಮಾರು ೨ ಕಿ.ಮೀ ಚಾರಣ ಮುಂದುವರಿಸಿದರೆ ಸಮುದ್ರಮಟ್ಟದಿಂದ ೧೩೦೦೦ ಅಡಿ ಎತ್ತರವಿರುವ ಚಂದ್ರಶಿಲಾ ಪರ್ವತದ ತುದಿಯನ್ನು ತಲುಪುವೆವು. ಚಂದ್ರಶಿಲೆಯಿಂದ ಸುತ್ತಮುತ್ತಲಿನ ಎಲ್ಲ ಶಿಖರಗಳೂ ಕಾಣುತ್ತವಂತೆ. ಚಳಿಗಾಲದಲ್ಲಿ ಹಿಮದ ಮೇಲೂ ಚಾರಣ ಸಾಧ್ಯವಿಲ್ಲಿ. ಈ ಸೀಮೆ ಭಾರತದ ಸ್ವಿಟ್ಜರ್ಲೆಂಡ್ ಎಂದೇ ಪ್ರಸಿದ್ಧ. ಅದಕ್ಕಿಂತಲೂ ಸುಂದರವಾಗಿದೆಯೆಂದರೂ ಅತಿಶಯೋಕ್ತಿಯಲ್ಲ. ಆದರೆ ಪ್ರಚಾರದ ಕೊರತೆಯಿಂದಲೂ, ಉತ್ತಮ ರಸ್ತೆ, ವಾಹನಗಳ ಸಂಪರ್ಕಗಳ ಕೊರತೆಯಿಂದಲೂ ಪ್ರವಾಸಿಗರ ಕಣ್ಣಿನಿಂದ ದೂರ ಉಳಿದಿದೆ. ಪ್ರವಾಸದ ಯೋಜನೆಯನ್ನು ರೂಪಿಸುವ ಸಮಯದಲ್ಲಿ ನನಗೆ ಮಿತ್ರರು ಈ ಸ್ಥಳಕ್ಕೂ ಹೋಗಬಹುದೆಂದು ಸೂಚಿಸಿದ್ದರಿಂದಷ್ಟೇ, ಅಂತರ್ಜಾಲದಲ್ಲಿ ಇದರ ಬಗ್ಗೆ ತಡಕಾಡಿದ್ದೆ. ಹಾಗಾಗಿ ಒಂದಷ್ಟು ವಿಷಯಗಳು ತಿಳಿದಿತ್ತೇ ಹೊರತು ತುಂಗನಾಥವಾಗಲೀ, ಚಂದ್ರಶಿಲೆಯ ಹೆಸರನ್ನಾಗಲೀ ಮುಂಚೆ ಕೇಳಿರಲೇ ಇಲ್ಲ.

ಚೋಪತಾ ತಲುಪಿದಾಗ ಮಳೆ ಮತ್ತೊಮ್ಮೆ ಸುರಿಯಲಾರಂಭಿಸಿತು. ತುಂಗನಾಥಕ್ಕೆ ಅಲ್ಲಿಂದ ಚಾರಣದ ಮೂಲಕ ಕೇವಲ ೩ ಗಂಟೆಯ ಹಾದಿಯಾಗಿದ್ದು, ಅದನ್ನು ನೋಡಿಕೊಂಡು ನಮ್ಮ ಪ್ರಯಾಣ ಮುಂದುವರಿಸಿದ್ದರೂ ಗಮ್ಯಸ್ಥಾನವಾದ ಜೋಶೀಮಠವನ್ನು ರಾತ್ರಿಯೊಳಗೆ ತಲುಪುವ ಸಾಧ್ಯತೆ ಇತ್ತು. ಚಾಲಕ ಸಹ ಒಪ್ಪುವ ಸಾಧ್ಯತೆ ಹೆಚ್ಚಾಗಿಯೇ ಇತ್ತು. ಆದರೆ ಮಳೆಯ ಅಬ್ಬರ ಇದ್ದಕ್ಕಿದ್ದಂತೆ ಹೆಚ್ಚಿದ್ದರಿಂದ ಮರುಮಾತಿಲ್ಲದೆ ಚಾರಣದ ಆಸೆಯನ್ನು ಅದುಮಿಟ್ಟು ಕಾರನ್ನು ಮುನ್ನಡೆಸಿದೆವು. ಹಲವಾರು ಮನಮೋಹಕ ಚಿತ್ರಗಳನ್ನು ಕಂಡಿದ್ದರಿಂದ ಈ ಜಾಗಗಳನ್ನು ಕಣ್ಣಾರೆ ನೋಡಲೇಬೇಕೆಂಬ ಇಚ್ಛೆ ಬಲವಾಗೇ ಇದ್ದು, ಕನಸು ಕೈಗೂಡದ್ದರಿಂದ ಬೇಸರವಾಯಿತು.

ಪರ್ವತದ ಈ ಪ್ರಾಂತ್ಯ ಕೊಂಚ ಎತ್ತರದಲ್ಲಿದ್ದು ಸಮತಟ್ಟಾಗಿದೆ. ಪ್ರಪಾತಗಳಲ್ಲಿ ಇಣುಕಿ ನೋಡಿದರೂ ತಳ ಕಾಣುವುದೇ ಇಲ್ಲ. ಆದರೆ ಎತ್ತರದ ಮರಗಳು ಪ್ರಪಾತದ ತಳದಿಂದ ಬೆಳೆದಿದ್ದು, ಅವುಗಳ ತುದಿ ಕೆಲವೆಡೆ ಕೈಗೆಟುಕುವಷ್ಟು ಹತ್ತಿರದವರೆಗೂ ಬೆಳೆದಿರುತ್ತವೆ. ಪ್ರವಾಸಿಗರ ಸಂಖ್ಯೆ ತೀರಾ ಕಡಿಮೆಯಿದ್ದು, ದೊಡ್ಡ ಗುಂಪಿನವರು ಯಾರೂ ಬರುವುದೇ ಇಲ್ಲವಾದ್ದರಿಂದ ಪರಿಸರ ಸ್ವಚ್ಛ, ಶುಭ್ರವಾಗಿದ್ದು, ಬೇರೆಡೆ ಹರಡಿರುವ ಪ್ಲಾಸ್ಟಿಕ್, ಗಾಜು ಇತ್ಯಾದಿ ತ್ಯಾಜ್ಯಗಳಿಂದ ಮುಕ್ತವಾಗಿದೆ. ತಣ್ಣಗೆ ಬೀಸುವ ಗಾಳಿ ದೇಹಕ್ಕೆ ತಾಜಾ ಆಮ್ಲಜನಕವನ್ನು ಸರಬರಾಜು ಮಾಡಿ ಮನಸ್ಸು-ಹೃದಯಗಳನ್ನು ಉಲ್ಲಸಿತವಾಗಿ ಮಾಡುತ್ತದೆ. ಶಬ್ದಮಾಲಿನ್ಯದ ಸುಳಿವೇ ಇಲ್ಲ. ಗಾಳಿಯ ಸದ್ದು, ದೂರದಲ್ಲೆಲ್ಲೋ ಕಾಡಿನಿಂದ ಕೇಳುವ ಹಕ್ಕಿಗಳ ಚಿಲಿಪಿಲಿ ಗಾನ, ಮರಗಳು ತೊನೆದಾಡಿದಾಗ ಉಂಟುಮಾಡುವ ಸಪ್ಪಳ ನಮ್ಮನ್ನು ಪ್ರಫುಲ್ಲಗೊಳಿಸುತ್ತವೆ. ಜೀವಮಾನದಲ್ಲೊಮ್ಮೆ ಖಂಡಿತ ನೋಡಲೇಬೇಕಿರುವ ಈ ಸ್ಥಳವನ್ನು ಕಂಡಾಗ ಧನ್ಯತಾಭಾವವುಂಟಾಗುತ್ತದೆ, ಬದುಕಿದ್ದು ಸಾರ್ಥಕ ಎನ್ನುವ ಭಾವನೆ ಮೂಡುತ್ತದೆ.

ಚೋಪತಾದಿಂದ ಮುಂದಿನ ರಸ್ತೆಯು ತಗ್ಗುಪ್ರದೇಶದತ್ತ ಸಾಗುತ್ತದೆ. ಮೇಲಿನಿಂದ ಕಂಡ ಕಾಡುಗಳೊಳಗೆಲ್ಲಾ ರಸ್ತೆ ಮುಂದುವರಿಯುತ್ತದೆ. ಅದೆಷ್ಟೋ ಕಡೆ ಬಿಸಿಲೇ ಬೀಳದೆ ವರ್ಷಗಳೇ ಆದಂತಿದೆ. ಹಚ್ಚಹಸಿರಿನ ಅರಣ್ಯಪ್ರದೇಶ, ಅಸಂಖ್ಯಾತ ಜಲಪಾತಗಳು, ಎಲೆಗಳ ಸಂದಿಗೊಂದಿಗಳಿಂದ ಇಣುಕಿ ನೋಡುತ್ತಾ ಬಿಸಿಲುಕೋಲನ್ನು ಸೃಷ್ಟಿಸಿರುವ ಸೂರ್ಯರಶ್ಮಿ, ಹಲವಾರು ಬಣ್ಣಗಳ ಚಿಕ್ಕ-ದೊಡ್ಡ ಹೂಗಳು, ಕಾರಿನ ಸದ್ದು ಕೇಳಿದೊಡನೆ ಓಡಿಹೋಗುವ ಹೆದರುಪುಕ್ಕಲ ಮಂಗಗಳು – ಮನದ ಪರದೆಯ ಮೇಲೆ ಪ್ರಕೃತಿ ಎಂದಿಗೂ ಅಳಿಸಲಾರದಂತಹ ಚಿತ್ರಗಳನ್ನು ರಚಿಸಿ ನಮ್ಮ ಕಣ್ಣುಗಳ ಅಸ್ತಿತ್ವದ ಪರಮೋದ್ದೇಶವನ್ನು ಈಡೇರಿಸುತ್ತದೆ.

ಹೊಟ್ಟೆಯ ಹಸಿವಿನ ಬದಲು ಈಗ ಮಾತಿನ ಹಸಿವು ಮೂಡಿತ್ತು. ನಿರಂತರವಾಗಿ ಹರಟೆ ಕೊಚ್ಚುತ್ತಲೇ ನಿಸರ್ಗಸೌಂದರ್ಯದ ಸವಿಯನ್ನು ಆಸ್ವಾದಿಸುತ್ತಿದ್ದೆವು. ಕನ್ನಡ ಅರ್ಥವಾಗದ ನಮ್ಮ ಚಾಲಕ ಕೂಡಾ ಮಂದಸ್ಮಿತನಾಗಿ ಓಡಿಸುತ್ತಿದ್ದ. ಹೀಗೇ ಹೋಗುತ್ತಾ ಬೆಟ್ಟವನ್ನು ಅರ್ಧ ಇಳಿದಿದ್ದಾಗ ಹೋಟೆಲ್‌ವೊಂದು ಕಂಡಿತು. ಮುಂದಿನ ಊರು ದೂರವಿದ್ದಿತಾದ್ದರಿಂದ ಇಲ್ಲೇ ಊಟ ಮುಗಿಸಿ ಮುಂದುವರಿಯೋಣವೆಂದು ನಿಶ್ಚಯಿಸಿದೆವು. ಯಥಾಪ್ರಕಾರ ರೋಟಿ! ಪರ್ವತದಲ್ಲಿ ಆಹಾರದ ವಿಚಾರ ಬಂದಾಗ ಆಯ್ಕೆಗಳು ವಿರಳ. ಕೊಟ್ಟಿದ್ದು ತಿಂದು ಎದ್ದು ಹೋಗುತ್ತಿರಬೇಕು ಎಂಬ ಮನಸ್ಥಿತಿಯಲ್ಲೇ ಇರಬೇಕಾಗಿ ಬರುತ್ತದೆ ಒಮ್ಮೊಮ್ಮೆ. ಪಾಲಿಗೆ ಬಂದದ್ದೇ ಪಂಚಾಮೃತ!

ಊಟ ಮುಗಿಸಿ ಮತ್ತೆ ಹೊರಟ ನಮಗೆ ಮುಂದಿನ ಊರಾದ ಗೋಪೇಶ್ವರ ಸಿಕ್ಕಿದ್ದು ಸುಮಾರು ಒಂದು ಗಂಟೆಯ ನಂತರ. ಅಷ್ಟು ಹೊತ್ತು ಹಸಿವನ್ನು ತಡೆಯಲು ಖಂಡಿತ ಸಾಧ್ಯವಾಗುತ್ತಿರಲಿಲ್ಲ. ಆದರೀಗ ಹೊಟ್ಟೆಗೆ ಸರಿಯಾಗಿ ಬಿದ್ದಿತ್ತಾದ್ದರಿಂದ ಭುಕ್ತಾಯಾಸ ಜೋರಾಗಿತ್ತು. ಜೊತೆಗೆ ಬಿಸಿಲು ಪ್ರಖರವಾಗಿಯೂ ಇದ್ದು, ಕಡಿಮೆ ಎತ್ತರಕ್ಕೆ ಬಂದಿದ್ದೆವಾದ್ದರಿಂದ ಸೆಖೆಯೂ ಸಾಕಷ್ಟಿತ್ತು. ಮಾತು ಕಡಿಮೆಯಾಗಿ ತೂಕಡಿಕೆ ಹೆಚ್ಚಾಗಿತ್ತು.

ಮುಂದೆ ಚಮೋಲಿ ಎಂಬಲ್ಲಿ ಹೆದ್ದಾರಿಯನ್ನು ಸೇರಿದೆವು. ರಾಷ್ಟ್ರೀಯ ಹೆದ್ದಾರಿ ೫೮ರ ಬಹುಭಾಗ ಉತ್ತರಾಖಂಡದಲ್ಲೇ ಇದ್ದು, ಪರ್ವತಪ್ರದೇಶದ ವ್ಯಾಪ್ತಿಯಲ್ಲಿರುವುದರಿಂದ, ಮತ್ತು ಬದರಿನಾಥ ಸಮೀಪದ ಮಾನಾ ಗ್ರಾಮದಲ್ಲಿ ಭಾರತೀಯ ಸೇನೆಯ ಛಾವಣಿಯಿರುವುದರಿಂದ ಈ ಹೆದ್ದಾರಿಯ ಬಹುಪಾಲು Border Roads Organisation (BRO) ಸಂಘಟನೆಯ ಮೇಲುಸ್ತುವಾರಿಗೆ ಒಳಪಡುತ್ತದೆ. ಕಡಿದಾದ ಬೆಟ್ಟಗುಡ್ಡಗಳ ನಡುವೆ ರಸ್ತೆ ನಿರ್ಮಿಸಿರುವುದು ನಿಬ್ಬೆರಗುಗೊಳಿಸುವ ಸಂಗತಿಯೇ ಸರಿ. ಪ್ರಕೃತಿಯೊಡ್ಡುವ ಸವಾಲುಗಳಿಗೆ ಮಾನವನು ತನ್ನ ನಿರಂತರ ಪ್ರಯತ್ನ, ಸಂಶೋಧನೆಗಳಿಂದ, ಧೈರ್ಯ–ಸಾಹಸಗಳಿಂದ ಉತ್ತರ ಕೊಟ್ಟೇ ಕೊಡುತ್ತಾನೆಂಬುದು ನಿಜ. ಅದಕ್ಕೆ ತಕ್ಕಂತೆಯೇ ಪ್ರಕೃತಿ ಸಹ ಇನ್ನೂ ಕಠಿಣವಾದ ಸವಾಲುಗಳನ್ನು ಒಡ್ಡುತ್ತಲೇ ಇರುತ್ತದೆ. ಭೂಕುಸಿತಗಳು ಪದೇಪದೇ ಉಂಟಾಗುವ ಈ ಪ್ರಾಂತ್ಯದಲ್ಲಿ ವಾಹನಗಳು ಅಲ್ಲಲ್ಲಿ ಸಿಲುಕಿಕೊಂಡು ಪ್ರಯಾಣಿಕರಿಗೆ ತೊಂದರೆಯುಂಟಾಗುವುದು. BRO ಅದಕ್ಕೆ ಸದಾ ಸಿದ್ಧವಾಗಿದ್ದು, ಹಾನಿಯನ್ನು ಕಡಿಮೆಗೊಳಿಸಿ ರಸ್ತೆಯಲ್ಲಿ ಸಂಚಾರವನ್ನು ಸುಗಮಗೊಳಿಸಲು ಕಾರ್ಯನಿರ್ವಹಿಸುತ್ತದೆ. ಚಮೋಲಿಯಿಂದ ಜೋಶೀಮಠದವರೆಗಿನ ರಸ್ತೆಯು ಮನುಷ್ಯ ಮನಸ್ಸು ಮಾಡಿದರೆ ಏನು ಬೇಕಾದರೂ ಸಾಧಿಸಬಲ್ಲನೆಂಬುದಕ್ಕೆ ಒಂದು ನಿದರ್ಶನ.

ಬದರಿನಾಥಕ್ಕೆ ಹೋಗುವವರ ಯಾತ್ರಿಕರು ಬಹಳವೇ ಇದ್ದರು. ಅವರಷ್ಟೇ ಅಲ್ಲದೆ ಸಿಖ್ಖರ ಪವಿತ್ರ ಕ್ಷೇತ್ರವಾದ ಹೇಮಕುಂಡ್ ಸಾಹಿಬ್‌ಗೂ ಹೋಗುವವರು ಸಾಕಷ್ಟಿದ್ದರು. ಆದ್ದರಿಂದ ವಾಹನದಟ್ಟಣೆ ವಿಪರೀತವಿತ್ತು. ಕಾಡಿನ ಮಧ್ಯದ ಹಾದಿಗಿಂತ ಅದೆಷ್ಟು ವಿಭಿನ್ನ ಈ ಹೆದ್ದಾರಿ! ಅನೇಕ ಕಡೆ ರಸ್ತೆ ತೀರಾ ಚಿಕ್ಕದಾಗಿರುವುದರಿಂದ ಅಲ್ಲಲ್ಲಿ ಪೋಲಿಸರು ನಿಂತು ಸಂಚಾರವನ್ನು ನಿಯಂತ್ರಿಸುತ್ತಾರೆ. ಹೀಗೆ ಮಾಡದ್ದಿದ್ದಲ್ಲಿ ಯಾರೂ ಮುಂದಕ್ಕೆ ಹೋಗಲು ಸಾಧ್ಯವಾಗುವುದೇ ಇಲ್ಲ.

ಟ್ರಾಫಿಕ್‌ನಲ್ಲೇ ಸುಮಾರು ಹೊತ್ತು ಕಳೆದುಹೋಗಿ, ನಾವು ಜೋಶೀಮಠ ತಲುಪಿದಾಗ ರಾತ್ರಿ ೮ ಗಂಟೆಯಾಗಿತ್ತು. ಮುಸ್ಸಂಜೆಯ ಶೀತಲಹವೆ ಇಲ್ಲಿ ಹೆಚ್ಚಾಗಿಯೇ ಇತ್ತು. ಜೋಶೀಮಠ

ಸಮುದ್ರಮಟ್ಟದಿಂದ ಸುಮಾರು ೧೯೦೦ ಮೀಟರ್ ಎತ್ತರದಲ್ಲಿದೆ (ಕರ್ನಾಟಕದ ಉನ್ನತಶಿಖರವಾದ ಮುಳ್ಳಯ್ಯನಗಿರಿಯೂ ಇಷ್ಟೇ ಎತ್ತರವಿರುವುದು). ಚಳಿಯ ವಾತಾವರಣದಲ್ಲಿ ನಮ್ಮ ಬೆಚ್ಚಗಿನ ಕೊಠಡಿ ನಮಗಾಗಿ ಸಿದ್ಧವಾಗಿತ್ತು. ಕೆಲಸಮಯ ವಿಶ್ರಮಿಸಿ, ಎಲ್ಲಿಯಾದರೂ ದಕ್ಷಿಣ ಭಾರತೀಯ ತಿನಿಸುಗಳು ಲಭ್ಯವೋ ಎಂದು ಹುಡುಕಲು ಹೋದೆವು. ಸುಮಾರಾಗಿದ್ದ ದೋಸೆ, ಇಡ್ಲಿ ದೊರೆತವು. ಏನೇ ಇದ್ದರೂ ಪರೋಟಾಕ್ಕಿಂತ ಮೇಲೆಂದು ಅವನ್ನು ತಿಂದು, ಮರುದಿನದ ತಯಾರಿಗೆ ಇಳಿದೆವು.

## ಸಾಗುತ ದೂರ ದೂರ...

೧೨ ಜೂನ್ ೨೦೧೩, ಬುಧವಾರ... ಜೋಶೀಮಠದ ಹೋಟೆಲ್‌ನ ನಮ್ಮ ಕೊಠಡಿಯಲ್ಲಿ ಚೈತನ್ಯದ ಚಿಲುಮೆ ಪುಟಿಯುತ್ತಿತ್ತು. ಪ್ರವಾಸದ ಮೊದಲ ಚಾರಣವನ್ನು ಕೈಗೊಳ್ಳುವ ಕಾತರ ಮನದಲ್ಲಿ ಮನೆಮಾಡಿತ್ತು. ತಯಾರಿಯ ಕಾವು ಹೆಚ್ಚಾಗಿತ್ತು. ಮುಂದಿನ ಮೂರು ದಿನಗಳಿಗಷ್ಟೇ ಸಾಕಾಗುವಷ್ಟು ಬಟ್ಟೆ, ಸಾಮಗ್ರಿಗಳನ್ನು ಬ್ಯಾಗೊಂದರಲ್ಲಿ ತುಂಬಿಸಿ, ಮಿಕ್ಕೆಲ್ಲ ವಸ್ತುಗಳನ್ನು ಕಾರಿನಲ್ಲೇ ಬಿಡುವುದೆಂದು ತೀರ್ಮಾನಿಸಿದೆವು.

ಇದಕ್ಕೆ ಕಾರಣ ಇಲ್ಲದಿಲ್ಲ. ನಮ್ಮ ಮುಂದಿನ ಮೂರು ದಿನಗಳ ಯೋಜನೆ ಹೀಗಿತ್ತು: ಮೊದಲ ದಿವಸ ಜೋಶೀಮಠದಿಂದ ೧೫ ಕಿ.ಮೀ ದೂರದಲ್ಲಿರುವ ಗೋವಿಂದಘಾಟ್ ಎಂಬ ಊರಿನಿಂದ ಚಾರಣವನ್ನು ಪ್ರಾರಂಭಿಸಿ ಘಾಂಘರಿಯಾ ಹಳ್ಳಿಯನ್ನು ತಲುಪುವುದು. ಮಾರನೆಯ ದಿನ ಪುಷ್ಪಗಳ ಕಣಿವೆಗೆ ಭೇಟಿ, ಮತ್ತು ಮೂರನೆಯ ದಿವಸ ಹೇಮಕುಂಡ ಸಾಹಿಬ್‌ಗೆ ಹೋಗುವುದು. ಇಷ್ಟೂ ದಿನಗಳು ಚಾಲಕ ಕಾರಿನ ಸಮೇತ ಗೋವಿಂದಘಾಟ್‌ನಲ್ಲೇ ಉಳಿಯುವುದಿತ್ತು. ನಾಲ್ಕನೆಯ ದಿನ ನಾವು ಮರಳಿ ಗೋವಿಂದಘಾಟ್‌ಗೆ ಬಂದ ನಂತರ ನಮ್ಮ ಪ್ರಯಾಣವನ್ನು ಬದರಿನಾಥದೆಡೆಗೆ ಮುಂದುವರಿಸುವುದೆಂದು ಯೋಜನೆ ಹಾಕಿಕೊಂಡಿದ್ದೆವು.

ಚಾಲಕ ಕೂಡಾ ಎಂದೂ ಹೇಮಕುಂಡವನ್ನು ನೋಡಿರಲಿಲ್ಲವಂತೆ. ಅವನನ್ನು ನಮ್ಮೊಡನೆ ಬರುವಂತೆ ಆಹ್ವಾನಿಸಿದೆವಾದರೂ ಕಾರನ್ನು ಬಿಟ್ಟು ಬರಲು ಒಪ್ಪಲಿಲ್ಲ. ಪ್ರಾಯಶಃ ಕಾರಿನ ಸುರಕ್ಷತೆಯ ಬಗ್ಗೆ ಅವನಿಗೆ ಕಾಳಜಿಯಿತ್ತೇನೋ. ನಾವೂ ಮತ್ತೆಮತ್ತೆ ಒತ್ತಾಯಪಡಿಸಲಿಲ್ಲ.

ಜೋಶೀಮಠದಿಂದ ಹೊರಟಾಗ ಯಥಾಪ್ರಕಾರ ಟ್ರಾಫಿಕ್! ಅದರಿಂದ ಪಾರಾಗಿ ಊರಿನಿಂದ ಹೊರಹೋಗಲು ಸುಮಾರು ಅರ್ಧ ಗಂಟೆಗಿಂತಲೂ ಹೆಚ್ಚು ಸಮಯ ಹಿಡಿಯಿತು. ಅಲ್ಲಿಂದ ಪ್ರಾರಂಭವಾಯಿತು ನಮ್ಮ ಪಯಣದ ಮುಂದಿನ ಘಟ್ಟ.

ಸಾಗರಮಟ್ಟದಿಂದ ಜೋಶೀಮಠ ಸುಮಾರು ೧೯೦೦ ಮೀಟರ್. ಎತ್ತರದಲ್ಲಿದೆಯೆಂದು ಹಿಂದೆ ಹೇಳಲಾಗಿದೆ. ಅಲ್ಲಿಂದ ಬದರಿನಾಥಕ್ಕೆ ಸುಮಾರು ೪೫ ಕಿ.ಮೀ. ಬದರಿನಾಥ ಜೋಶೀಮಠಕ್ಕಿಂತ ಹೆಚ್ಚಿನ ಎತ್ತರದಲ್ಲಿದ್ದರೂ (ಸುಮಾರು ೩,೨೦೦ ಮೀಟರ್) ಜೋಶೀಮಠದಿಂದ ರಸ್ತೆ ಮೊದಲು ಕೆಳಗಿಳಿಯುತ್ತದೆ. ಹನ್ನೊಂದು ಕಿ.ಮೀ. ನಂತರ ವಿಷ್ಣುಪ್ರಯಾಗ ಎಂಬ ಸ್ಥಳ ಸಿಗುತ್ತದೆ. ಇದರ ಎತ್ತರ

೧೩೦೦ ಮೀಟರ್. ಜೋಶೀಮಠದಿಂದ ವಿಷ್ಣುಪ್ರಯಾಗದ ಕಟ್ಟಡಗಳು ಪುಟ್ಟ ಚುಕ್ಕೆಗಳಂತೆ ಗೋಚರಿಸುತ್ತವೆಯಾದರೂ ವಾಸ್ತವವಾಗಿ ಆ ಕಟ್ಟಡಗಳು ದೊಡ್ಡವೇ. ಅಲ್ಲಿ ಜಲವಿದ್ಯುತ್ ಕಾರ್ಯಾಗಾರವೊಂದಿದ್ದು, ಭೋರ್ಗರೆಯುವ ಅಲಕನಂದಾ ನದಿಯ ಶಕ್ತಿಯನ್ನು ವಿದ್ಯುಚ್ಛಕ್ತಿಯನ್ನಾಗಿ ಪರಿವರ್ತಿಸುವ ಕಾರ್ಯವನ್ನು ನಿರ್ವಹಿಸುತ್ತದೆ. ವಿಷ್ಣುಪ್ರಯಾಗದಲ್ಲಿರುವ ದೊಡ್ಡ ಸೇತುವೆಯನ್ನು ದಾಟುವಾಗ ನದಿಯಲ್ಲಿ ಬಿದ್ದಿದ್ದ ಕಾರ್‌ವೊಂದರ ಅವಶೇಷಗಳನ್ನು ಕಂಡೆವು. ಅದು ಯಾವಾಗ ಬಿದ್ದಿದ್ದು ಎಂಬುದು ಗೊತ್ತಾಗದಿದ್ದರೂ ಭಯ ಹುಟ್ಟಿಸುವಂತೆಯೇ ಇತ್ತು. ಕೆಟ್ಟ ಚಾಲಕರನ್ನು ನೇರವಾಗಿ ನರಕಕ್ಕೆ ತಲುಪಿಸುವ ಕೆಲಸವನ್ನು ರಾಷ್ಟ್ರೀಯ ಹೆದ್ದಾರಿ ೫೮ ಸುಗಮವಾಗಿ ನೆರವೇರಿಸುತ್ತದೆ!

ಮುಂದೆ ಗೋವಿಂದಘಾಟ್ ಸಿಕ್ಕಿತು. ಅಲ್ಲಿಂದ ನಮ್ಮ ಚಾರಣ ಶುರುವಾಗಬೇಕು. ಗೋವಿಂದಘಾಟ್ ೧೮೦೦ ಮೀಟರ್ ಎತ್ತರದಲ್ಲಿದ್ದು, ಅಲ್ಲಿಂದ ಘಾಂಘರಿಯಾಕ್ಕೆ ೧೪ ಕಿ.ಮೀ.ಗಳ ಚಾರಣ. ಘಾಂಘರಿಯಾ ಊರು ೩೦೦೦ ಮೀಟರ್ ಎತ್ತರದಲ್ಲಿದೆ. ಅಲ್ಲಿಗೆ ೧೪ ಕಿ.ಮೀ.ಗಳಲ್ಲಿ ನಾವು ಸುಮಾರು ಒಂದೂವರೆ ಕಿ.ಮೀ.ಗಳಷ್ಟು ಎತ್ತರ ಗಳಿಸುತ್ತೇವೆ. ಪುಷ್ಪಗಳ ಕಣಿವೆ ಮತ್ತು ಹೇಮಕುಂಡ ಸಾಹಿಬ್‌ಗೆ ಹೋಗಲು ಘಾಂಘರಿಯಾ ತಂಗುದಾಣ. ನಡೆದು ಹೋಗಲು ತ್ರಾಣವಿರುವವರು ನಡೆದೇ ಹೋಗುವರು. ಅದಿಲ್ಲದಿದ್ದರೆ ಕುದುರೆ ಸವಾರಿಯಿಂದಲೂ ಹೋಗಬಹುದು. ಮಾರ್ಗವು ಸುಮಾರಾಗಿ ನಮ್ಮ ಮಲೆನಾಡಿದ ಮಣ್ಣುರಸ್ತೆಗಳನ್ನು ಹೊಂದುತ್ತದೆಯಾದರೂ, ಬಹಳಷ್ಟು ಕಲ್ಲುಗಳಿಂದ ಕೂಡಿದೆ. ಕೆಲವೆಡೆ ಕಡಿದಾಗಿದ್ದು, ಒಮ್ಮೆಲೇ ಎತ್ತರಕ್ಕೆ ಏರಿಹೋಗಬೇಕು. ಸಾಮಾನ್ಯ ಮನುಷ್ಯನ ದೈಹಿಕ ಕ್ಷಮತೆಯನ್ನು ಪರೀಕ್ಷಿಸುವುದು ಈ ಚಾರಣ.

ಕಾರ್ ನಿಲ್ಲಿಸಿ, ತಿಂಡಿ ತಿನ್ನುವಷ್ಟರಲ್ಲಿ ಬಿಸಿಲೇರಿ, ತಂಗಾಳಿ ಮಾಯವಾಗಿತ್ತು. ನಡಿಗೆ ಕೈಗೊಳ್ಳಲು ಸೂಕ್ತಸಮಯ. ಹೆದ್ದಾರಿಯಿಂದ ಕೆಳಗಿಳಿಯುವ ಪುಟ್ಟ ರಸ್ತೆ ಗೋವಿಂದಘಾಟ್‌ನ ಗುರುದ್ವಾರದವರೆಗೂ ಕೊಂಡೊಯ್ಯುತ್ತದೆ. ಅಲ್ಲಿಂದ ಸೇತುವೆಯನ್ನು ಹಾದು, ಬೆಟ್ಟದ ಬುಡದಿಂದ ಚಾರಣವನ್ನು ಪ್ರಾರಂಭಿಸಬೇಕು. ಕುದುರೆಯವರ ಕಾಟವೇನೂ ಇರಲಿಲ್ಲವಾದರೂ ಜನರು ಹೆಚ್ಚಾಗಿಯೇ ಇದ್ದರು. ಬಹುತೇಕ ಸಿಖ್ ಮಂದಿಯಾಗಿದ್ದು ಎಲ್ಲರೂ ಹೇಮಕುಂಡಕ್ಕೆ ಯಾತ್ರೆ ಹೋಗುತ್ತಿದ್ದರು. ಹಿರಿಯ-ಕಿರಿಯ, ಬಡವ-ಶ್ರೀಮಂತ, ಪುರುಷ-ಸ್ತ್ರೀ, ಸ್ಥೂಲ-ಕೃಶಕಾಯ, ತರುಣ-ವೃದ್ಧ - ಈ ಯಾವ ಭೇದಗಳೂ ಅವರಿಗೆ ಅನ್ವಯಿಸುವುದಿಲ್ಲವೇನೋ! ಶೇಕಡಾ ೯೯ ರಷ್ಟು ಜನ ನಡೆದೇ ಹೋಗುವವರು. "ಸತ್‌ನಾಮ್ ವಾಹೇ ಗುರು" ಎಂಬ ಪ್ರಾರ್ಥನೆಯನ್ನು ಹಾಡುತ್ತಾ ಉತ್ಸಾಹ ಪಡೆಯುತ್ತಾ ಗುಂಪಿನಲ್ಲಿ ಮುಂದುವರಿಯುತ್ತಾರೆ.

ಕೇದಾರನಾಥಕ್ಕೆ ಹೋಗುವ ಕಾಲುದಾರಿಗೂ ಇಲ್ಲಿಗೂ ಬಹಳಷ್ಟು ವ್ಯತ್ಯಾಸಗಳಿವೆ. ಮೊದಲನೆಯದಾಗಿ, ಕುದುರೆಗಳ ಸಂಖ್ಯೆ ಕಡಿಮೆಯೇ. ಸಿಖ್ ಜನ ಬಹಳ ಶಕ್ತಿವಂತರು, ಕಾಲುಗಳ ಬಲದಿಂದಲೇ ಮೇಲೇರುವವರು. ಕೇದಾರನಾಥಕ್ಕೆ ಹೋಗುವಾಗ ಮಧ್ಯೆ ವಿರಾಮ ಬೇಕೆಂದಲ್ಲಿ ರಾಮಬಾಡಾ ಮಾತ್ರ ಪ್ರಶಸ್ತ ಜಾಗ. ಇಲ್ಲಿ ಹೆಜ್ಜೆಹೆಜ್ಜೆಗೂ ಪುಟ್ಟ ಅಂಗಡಿಗಳು ಇದ್ದೇ ಇವೆ. ಕುಡಿಯಲು ನೀರು, ತಿನ್ನಲು ಕುರುಕಲು ತಿಂಡಿ, ಬಿಸ್ಕತ್ತು ಅಥವಾ ಪರೋಟಾ – ಮೇಲೆ ಹೋಗುತ್ತಾ ಹೋಗುತ್ತಾ ದುಬಾರಿಯಾದರೂ ಸಹ – ಖಂಡಿತ ದೊರೆಯುತ್ತದೆ. ಆದರೆ ಅಲ್ಲಿರುವಂತೆ ಘಾಂಘರಿಯಾ ಮಾರ್ಗದಲ್ಲಿ ಕುದುರೆಗಳಿಗೆ ಕುಡಿಯಲು ನೀರಿನ ವ್ಯವಸ್ಥೆಯಿಲ್ಲ! ಬೆಟ್ಟದಿಂದ ಬರುವ ನೀರನ್ನು ಶೇಖರಿಸಲಾಗಲೀ ಬಳಸಲಾಗಲೀ ಏನೇನೂ ವ್ಯವಸ್ಥೆ ಕಂಡುಬರಲಿಲ್ಲ.

ಚಾರಣದ ಮೊದಲ ಭಾಗ ಕೊಂಚ ಸುಲಭವೇ ಇದ್ದಂತಿತ್ತು. ಜಯರಾಮ್ ಮತ್ತು ಶ್ರೀಧರ್ ಜೊತೆಯಲ್ಲಿ ಬರುತ್ತಿದ್ದರು. ನಾನು ಕ್ರಮೇಣ ವೇಗ ಗಳಿಸಿ ಮುಂದುವರಿದೆ. ಬಿಸಿಲು ಈಗ ಜೋರಾಗಿದ್ದು, ಚುರುಕು ಮುಟ್ಟಿಸುತ್ತಿತ್ತು. ಪೆದ್ದನಂತೆ ನಾನು ಚಳಿಯನ್ನು ತಡೆಯುವ ಉಡುಪನ್ನು (Thermals) ಧರಿಸಿ, ಅದರ ಮೇಲೆ Jerkin ಸಹ ಧರಿಸಿದ್ದೆ! ಈಗ ಅವೆಲ್ಲ ಉಡುಪುಗಳು ಬೇಡವಾಗಿತ್ತೆಂದು ತೋರಿತು. Jerkin ಅನ್ನು ತೆಗೆದು ಚೀಲದಲ್ಲಿ ತುರುಕಿದೆನಾದರೂ ಉಡುಪಿನ ಒಳಗೆ ಧರಿಸಿದ್ದ Thermal Wear ನ್ನು ಅದೆಲ್ಲಿ ತೆಗೆಯುವುದು! ಬೆವರು ನಿರಂತರವಾಗಿ ಹರಿಯುತ್ತಲೇ ಇತ್ತು! ಏನೇನೂ ಮಾಡಲು ಸಾಧ್ಯವಿರಲಿಲ್ಲ.

ಅಲ್ಲಲ್ಲಿ ಕುಳಿತು ಸುಧಾರಿಸಿಕೊಳ್ಳುತ್ತಿರುವ ಜನರ ದೃಶ್ಯ ಸಾಮಾನ್ಯವಾಗಿತ್ತು. ದಣಿವಾಗುತ್ತಿದ್ದರೂ ಕೂಡಾ ಒಂದೊಮ್ಮೆ ಕುಳಿತರೆ ಕೆಲಸ ಕೆಡುತ್ತದೆಂದು ತಿಳಿದು ಸಾಧ್ಯವಾದಷ್ಟು ಹೊತ್ತು ನಿಧಾನವಾಗಿಯಾದರೂ ಹೆಜ್ಜೆ ಹಾಕುತ್ತಲೇ ಇದ್ದೆ. ಪಕ್ಕದಲ್ಲೇ ಪುಷ್ಪವತಿ ನದಿಯ ಹರಿವಿನ ನೋಟ ಕಾಣುತ್ತಲಿತ್ತು. ಪುಷ್ಪವತಿ ನದಿ ಹೂಗಳ ಕಣಿವೆಯಿಂದಾಚೆಗೆಲ್ಲೋ ಹುಟ್ಟಿ, ಕಣಿವೆಯ ಮೂಲಕ ಹರಿದು, ನಂತರ ಘಾಂಘರಿಯಾದಲ್ಲಿ ಹೇಮಕುಂಡದಿಂದ ಬರುವ ಲಕ್ಷ್ಮಣಗಂಗಾ ನದಿಯನ್ನು ತನ್ನೊಡಲಿನಲ್ಲಿ ಸೇರಿಸಿಕೊಂಡು ಕೆಳಗೆ ಧುಮ್ಮಿಕ್ಕುತ್ತಾ ಮುಂದೆ ಗೋವಿಂದಘಾಟ್‌ನಲ್ಲಿ ಅಲಕನಂದೆಯನ್ನು ಸೇರುವಳು. ಸ್ಫಟಿಕಶುದ್ಧ, ತಿಳಿಯ, ಬಿಳುಪಾದ ನೀರನ್ನು ನೋಡುವುದೇ ಆನಂದದಾಯಕ. ದಣಿವಾರಿಸಿಕೊಳ್ಳುತ್ತಾ ನಿಂತಿದ್ದಾಗ ನದಿಯನ್ನು ಕಾಣುತ್ತಿದ್ದರೆ ದಣಿವು ಬೇಗ ಮಾಯವಾಗುವುದು. ಆದರೆ ನೀರಡಿಕೆಯಿದ್ದರೆ ಮಾತ್ರ ದೇವರೇ ಗತಿ! ನದಿಯು ಪಕ್ಕದಲ್ಲೇ ಹರಿಯುತ್ತಿದ್ದರೂ ಕೂಡಾ ನದಿಯ ಸಮೀಪ ಹೋಗಲು ಬಹುತೇಕ ಕಡೆ ಸಾಧ್ಯವಿಲ್ಲ. ಹೋದರೂ ಕೂಡ ನೀರು ಅದೆಷ್ಟು ತಣ್ಣಗಿರುತ್ತದೆಯೆಂದರೆ ಗಂಟಲಿಗೆ ಬಿದ್ದೊಡನೆ ಪ್ರಾಣ ಹೋದಂತಾಗುತ್ತದೆ!

ಒಂದು ತಾಸಿನ ಕಾಲ ನಿರಂತರವಾಗಿ ಹೆಜ್ಜೆ ಹಾಕಿದ್ದೆ. ಜಯರಾಮ್ ಮತ್ತು ಶ್ರೀಧರ್ ಹಿಂದಿದ್ದರು ಎಂಬುದಷ್ಟೇ ಗೊತ್ತಿತ್ತು. ಏನಾದರೂ ತಿನ್ನಲಿಕ್ಕೂ ನನ್ನ ಬಳಿ ಹಣವಿರದೆ ಅವರನ್ನೇ ಆಶ್ರಯಿಸಬೇಕಾಗಿತ್ತು! (ತಿಳುವಳಿಕೆಯಿಲ್ಲದೆ ಹಣ ಇಟ್ಟುಕೊಳ್ಳುವುದು ಬಿಟ್ಟು ATM ಮೊರೆ ಹೋಗುವ ನನ್ನಂತ ಅವಿವೇಕಿಗಳಿಗೆ ಇದೊಂದು ಪಾಠ!) ಹಾದಿಯ ಬದಿಯ ಕಲ್ಲೊಂದರ ಮೇಲೆ ಕುಳಿತು ವಿಶ್ರಮಿಸಿ, ನನ್ನಲ್ಲಿದ್ದ ಒಣದ್ರಾಕ್ಷಿ, ಬಾದಾಮಿ ತಿಂದು ನೀರು ಕುಡಿದರೂ ಇವರಿಬ್ಬರೂ ಪತ್ತೆಯಿಲ್ಲ. ಅಲ್ಲೇ ಕುಳಿತಿದ್ದರೆ ಅನವಶ್ಯಕವಾಗಿ ನೀರು ಕುಡಿದು ಅದು ಸಹ ಖರ್ಚಾಗಿಬಿಟ್ಟರೆ ನಂತರ ಕಷ್ಟವೆಂದು ತಿಳಿದು ಮತ್ತೊಮ್ಮೆ ನಡೆಯಲು ಪ್ರಾರಂಭಿಸಿದೆ.

ಅರ್ಧ ತಾಸು ನಡೆದ ಮೇಲೆ ಅಂಗಡಿಯೊಂದು ಕಂಡಿತು. ಅಲ್ಲಿದ್ದ "ಲಿಮ್ಕಾ" ಕಣ್ಣಿಗೆ ಬಿದ್ದೊಡನೆ ನನ್ನೆಲ್ಲ ಶಕ್ತಿ ಉಡುಗಿಹೋಯಿತು. ಈಗ ಅದೇನೇ ಆದರೂ ಇದನ್ನು ಕುಡಿಯಲೇಬೇಕೆಂಬ ಹಠ ನನ್ನ ತಲೆಯನ್ನು ಹೊಕ್ಕಿತು. ನನ್ನಲ್ಲಿದ್ದ ಸ್ವಲ್ಪವೇ ಹಣ ಅದಕ್ಕೆ ಸಾಕಾಗಿತ್ತು. ಬ್ಯಾಗನ್ನು ಬಿಸಾಡಿ ಅಲ್ಲಿದ್ದ ಹಗ್ಗದ ಮಂಚದ ಮೇಲೆ ಕುಳಿತು "ಲಿಮ್ಕಾ" ಹೀರತೊಡಗಿದೆ.

ಕೆಲಹೊತ್ತಿನಲ್ಲಿ ಜಯರಾಮ್ ಮತ್ತು ಶ್ರೀಧರ್ ಅಲ್ಲಿಗೆ ತಲುಪಿದರು. ಅವರಿಗೂ ಸುಸ್ತಾಗಿತ್ತು. ಮಾತಿಲ್ಲದೆ ಸುಮಾರು ಹೊತ್ತು ಎಲ್ಲರೂ ಮೌನವಾಗಿ ಮಂಚದ ಮೇಲೆ ಕುಳಿತಿದ್ದೆವು. ಇಷ್ಟಕ್ಕೂ ನಾವು ಬಂದಿದ್ದು ಕೇವಲ ೩ ಕಿ.ಮೀ.! ಸುಮಾರು ಒಂದೂವರೆ ಗಂಟೆಗಳಲ್ಲಿ ಇಷ್ಟು ದೂರ ಕ್ರಮಿಸಿದ್ದೆವು. ಹೆಗಲಿಗೇರಿದ್ದ ಬ್ಯಾಗಿನ ತೂಕ ಹೆಚ್ಚೇ ಅನ್ನಿಸುತ್ತಿತ್ತು! ಜಯರಾಮ್ ನನ್ನ ಬ್ಯಾಗನ್ನು ನೋಡಿ ನಗುತ್ತಿದ್ದ. Jerkin ತುಂಬಿಸಿದ್ದರಿಂದ ಅದು ಭಾರವಾಗಿರುವಂತೆ ಕಂಡುಬರುತ್ತಿತ್ತು. "ಮೈಮೇಲಿರುವ ಬಟ್ಟೆ ಕೂಡಾ ಕೆಲವೊಮ್ಮೆ ಭಾರವಾದಂತೆ ಇರುತ್ತದೆ" ಎಂದು ಅವನು ಹಿಂದೆ ಹೇಳಿದ್ದ ಸಂಗತಿ ನೆನಪಾಗಿ ನನಗೂ ನಗುಬಂತು.

ಎಷ್ಟು ಹೊತ್ತು ಕುಳಿತರೂ ದಣಿವು ಇದ್ದೇ ಇರುವುದು, ಮುನ್ನಡೆಯೋಣ ಎಂದು ನಿರ್ಧರಿಸಿ ಹೊರಟೆವು. ಈ ಬಾರಿ ಅಪ್ಪಿತಪ್ಪಿಯೂ ಇವರಿಗಿಂತ ಮುಂದಾಗಲೀ ಹಿಂದಾಗಲೀ ಹೋಗಬಾರದೆಂದು ಸಂಕಲ್ಪಿಸಿಕೊಂಡು ಶ್ರೀಧರ್‌ರ ಒಟ್ಟಿಗೆ ನಡೆಯಲು ಪ್ರಾರಂಭಿಸಿದೆ. ಜಯರಾಮ್ ನಮ್ಮ ಹಿಂದೆಯೇ ನಡೆದು ಬರುತ್ತಿದ್ದ. ಕಿವಿಗೆ ಚುಚ್ಚಿಕೊಂಡಿದ್ದ iPod ಒಳ್ಳೊಳ್ಳೆಯ ಹಾಡುಗಳನ್ನೇ ತೇಲಿಬಿಡುತ್ತಿತ್ತು. ಅದರಿಂದ ನಡೆಯಲು ಉತ್ಸಾಹ ಕೂಡಾ ಬರುತ್ತಿತ್ತು. ಮಧ್ಯೆಮಧ್ಯೆ ಕ್ಯಾಮೆರಾಗೆ ಕೆಲಸ ಕೊಡುವ

ಸಂದರ್ಭಗಳು ಬರುತ್ತಿದ್ದವು. ಪುಷ್ಪವತಿ ನದಿಯ ವಯ್ಯಾರ, ಶುಭ್ರ ಜಲ – ಇವನ್ನೆಲ್ಲಾ ಕ್ಯಾಮೆರಾದಲ್ಲಿ ತುಂಬಿಕೊಳ್ಳುತ್ತಿದ್ದರೆ ಬಂದ ಉದ್ದೇಶವೇ ಮರೆತುಹೋಗುತ್ತಿತ್ತು.

ಪುಷ್ಪವತಿ ನದಿಯ ಒಂದೆಡೆ ಚಾರಣದ ಕಾಲುದಾರಿಯಾದರೆ ಮತ್ತೊಂದೆಡೆ ಅರಣ್ಯ. ಎತ್ತರದ ಮರಗಳು ಗಾಳಿಗೆ ತೊನೆದಾಡುತ್ತಿದ್ದವು. ಅಲ್ಲಲ್ಲಿ ಜನರು ಉಪಯೋಗಿಸಿರಬಹುದಾದ ಕಾಲುದಾರಿಯೂ ಕಣ್ಣಿಗೆ ಬೀಳುತ್ತಿತ್ತು. ಪ್ರಾಯಶಃ ಸುತ್ತಮುತ್ತಲ ಹಳ್ಳಿಯವರು ತಮ್ಮ ಜಾನುವಾರುಗಳಿಗೆ ಉತ್ತಮ ಹುಲ್ಲನ್ನು ಇಲ್ಲಿಂದ ತೆಗೆದುಕೊಂಡು ಹೋಗಲು ಮಾಡಿಕೊಂಡಿರುವ ಕಾಲುದಾರಿಯದು. ಗುಡ್ಡಗಾಡಿನ ಜನರ ಕಷ್ಟಸಹಿಷ್ಣುತೆಗೆ ಮತ್ತೊಮ್ಮೆ ಮೌನವಾಗಿ ನಮನ ಸಲ್ಲಿಸುತ್ತಾ ಮುನ್ನಡೆದೆ.

ಹೀಗೆಯೇ ಅಲ್ಲಲ್ಲಿ ನಿಲ್ಲುತ್ತಾ, ಬೆವರೊರೆಸಿಕೊಳ್ಳುತ್ತಾ, ಕ್ಯಾಮೆರಾ ಕಣ್ಣಿಂದ ಪ್ರಕೃತಿಯ ಸೊಬಗನ್ನು ಸೆರೆಹಿಡಿಯುತ್ತಾ ನಿಧಾನವಾಗಿ ಮತ್ತೆ ಮೂರು ಕಿ.ಮೀ. ನಡೆದೆವು. ನಾವಿಬ್ಬರು ವೇಗವನ್ನು ಗಳಿಸಿದೆವೋ ಅಥವಾ ಜಯರಾಮ್ ವೇಗ ಕಳೆದುಕೊಂಡನೋ ತಿಳಿಯದು, ಅಂತರ ನಮಗರಿವಿಲ್ಲದೆಯೇ ಕ್ರಮೇಣ ಹೆಚ್ಚಾಗಿತ್ತು. ಹೊಟ್ಟೆ ತಾಳ ಹಾಕುತ್ತಿತ್ತು. ಮತ್ತೇನಾದರೂ ತಿನ್ನೋಣವೆಂದು ಅಂಗಡಿಯೊಂದನ್ನು ಹೊಕ್ಕಿ ಕುಳಿತೆವು. ಜಯರಾಮ್ ಬಂದ ಮೇಲೆಯೇ ತಿನ್ನೋಣವೆಂದು ನಿರ್ಧರಿಸಿ, ಕೇವಲ ಚಹಾ ಕುಡಿದು ನಮ್ಮಲ್ಲಿದ್ದ ಬಾದಾಮಿಯನ್ನು ಮೆಲ್ಲಹತ್ತಿದೆವು. ಕಣಿವೆ ನಾವು ಕುಳಿತಿದ್ದ ಸ್ಥಳದಿಂದ ಇನ್ನೂ ರಮ್ಯವಾಗಿ ಕಾಣುತ್ತಿತ್ತು. ದಣಿವು ಬಲುಬೇಗ ನಿವಾರಣೆಯಾಯಿತು. ಅಷ್ಟರಲ್ಲಿ ಜಯರಾಮ್ ಕೂಡಾ ಬಂದು, ನಮ್ಮ ಪರೋಟಾ ತಿನ್ನುವ ಕೆಲಸ ಪ್ರಾರಂಭವಾಯಿತು. ನಿಜಕ್ಕೂ ಪರೋಟಾ ತಿನ್ನುತ್ತಿದ್ದವನು ನಾನೊಬ್ಬ ಮಾತ್ರವೇ! ಅವರಿಬ್ಬರಿಗೂ ಪರೋಟಾ, ಅದರಲ್ಲಿರುವ ಆಲೂಗಡ್ಡೆ ಎರಡೂ ಅವರ ಹಿಂದಿನ ಹಿಮಾಲಯ ಪ್ರವಾಸದಲ್ಲಿಯೇ ಬೇಸರ ತರಿಸಿತ್ತು. (ಭಾರತೀಯ ವಿಜ್ಞಾನ ಸಂಸ್ಥೆಯ ಭೋಜನಾಲಯದಲ್ಲಿ ಅರ್ಧದಷ್ಟು ಸಮಯ ಆಲೂಗಡ್ಡೆಯೇ ಇರುವುದರಿಂದ ನನಗದರ ಅಭ್ಯಾಸ ಆಗಿಹೋಗಿದೆ!). ಅವರಿಬ್ಬರೂ ಬಿಸಿಬಿಸಿ ನೂಡಲ್ಸ್ ತಿಂದು ಹೊಟ್ಟೆ ತುಂಬಿಸಿಕೊಂಡರು.

ಶ್ರೀಧರ್ ದೈಹಿಕವಾಗಿ ದೃಢವಾಗಿರುವವರು. ಅವರಲ್ಲಿ ಬಳಲಿಕೆಯ ಲಕ್ಷಣಗಳೇ ಕಾಣುತ್ತಿರಲಿಲ್ಲ. ಹಠಕ್ಕೆ ಬಿದ್ದು ನಾನು ಅವರ ಸರಿಸಮನಾಗಿ ನಡೆಯುತ್ತಿದ್ದೆ. ಬಳಲಿದ ಜಯರಾಮ್ ಮಾತ್ರ ಮುಂದಿನ ಪಯಣವನ್ನು ಕುದುರೆಯನ್ನೇರಿ ಮಾಡುವೆನೆಂದು ಹೇಳಿದ. ಅದಕ್ಕೆ ತಕ್ಕಂತೆ ಕುದುರೆಯೂ ಬೇಗನೇ ಸಿಕ್ಕಿಬಿಟ್ಟಿತು. ಶ್ರೀಧರ್ ತಮ್ಮ ಕ್ಯಾಮೆರಾ ಒಂದನ್ನು ತಮ್ಮಲ್ಲೇ ಉಳಿಸಿ ತಮ್ಮ ಬ್ಯಾಗನ್ನು ಅವನೊಡನೆ ಕಳುಹಿಸಿಬಿಟ್ಟರು. ಅವರ ಬ್ಯಾಗು ಅಷ್ಟೇನೂ ಭಾರವಿಲ್ಲದ್ದರಿಂದ ಅವನಿಗೂ ಅದನ್ನು ತೆಗೆದುಕೊಂಡು

ಹೋಗಲು ಅನುಕೂಲಕರವಾಗಿತ್ತು. ನನ್ನ ಬ್ಯಾಗು ಮಾತ್ರ ಬೇತಾಳನಾಗಿ ನನ್ನ ಹೆಗಲನ್ನೇರಿ ಬೆಚ್ಚಗೆ ಕುಳಿತು ಮುಂದುವರಿಯುವಂತೆ ಆದೇಶಿಸುತ್ತಿತ್ತು.

ಅಲ್ಲಿಂದ ಮುಂದಿನ ದಾರಿ ಕಠಿಣವಾಗಿತ್ತು. ಜೊತೆಗೆ ಶ್ರೀಧರ್ ಅವರ ವೇಗಕ್ಕೆ ಸಮನಾಗಿ ಹೋಗಲೇಬೇಕೆಂಬ ನನ್ನ ಹಠ ಕೂಡಾ ಹೆಚ್ಚಾಗಿತ್ತು. ಸಾಧ್ಯವಾದಷ್ಟು ಮಟ್ಟಿಗೆ ಅವರ ಜೊತೆಜೊತೆಯಲ್ಲೇ ಹೆಜ್ಜೆಹಾಕಿದೆ. ಆದರೆ ಬ್ಯಾಗಿನ ರೂಪದ ಬೇತಾಳ ಹೆಗಲಿಗೇರಿ ನನಗೆ ಕೊಟ್ಟ ತೊಂದರೆ ಅಷ್ಟಿಷ್ಟಲ್ಲ. ಬೆನ್ನು ಅಂದು ಮುರಿದೇ ಹೋಗುವುದೆಂಬ ಭಯ ಕೂಡಾ ಒಮ್ಮೆ ಮೂಡಿತ್ತು. ಅದರೊಟ್ಟಿಗೆ ಈ ದರಿದ್ರ ಕ್ಯಾಮೆರಾ ಬೇರೆ. ವಿಪರೀತ ತೂಕದ ಈ ಕ್ಯಾಮೆರಾ, ಅದರ ಮಸೂರಗಳು (Lens) ಮೊದಲನೆಯ ಬಾರಿಗೆ ಛಾಯಾಚಿತ್ರ ತೆಗೆಯುವ ನನ್ನ ಹವ್ಯಾಸದ ಮೇಲೆ ಕೋಪಗೊಳ್ಳುವಂತೆ ಮಾಡಿದವು.

ಆ ಕೋಪ ಕ್ಷಣಿಕ ಮಾತ್ರ. ಪುಷ್ಪವತಿ ನನ್ನೆಲ್ಲ ಅಸಮಾಧಾನಗಳನ್ನು ತನ್ನಲ್ಲಿ ಜೀರ್ಣಿಸಿಕೊಂಡು, ಬದಲಾಗಿ ಉಲ್ಲಾಸವನ್ನು ತುಂಬಿಕೊಟ್ಟು ಹರಿಯುತ್ತಿದ್ದಳು. ಈಗ ಗಾಳಿಯೂ ತಂಪಾಗಿ ಬೀಸತೊಡಗಿ ಹವೆ ಹಿತವಾಗಿತ್ತು. ಜೊತೆಗೆ ನನ್ನ ಕಾಲು ಸೋಲುತ್ತಿತ್ತೆಂದು ಶ್ರೀಧರ್ ಮನಗಂಡರೆ ಸಾಕು, ನಿಂತುಬಿಡುತ್ತಿದ್ದರು. ನಾನೇ ಹೊರಡೋಣವೆನ್ನುವವರೆಗೂ ವಿಶ್ರಾಂತಿಯ ಸಮಯ. ಅವರ ಈ ಬೆಂಬಲವೇ ಇಡೀ ದಾರಿಯನ್ನು ಕ್ರಮಿಸಲು ಬೇಕಾದ ಮನೋಬಲ ನೀಡಿದ್ದು.

ಈ ಹಾದಿಯಲ್ಲಿ ಎರಡು ಸಣ್ಣ ಹಳ್ಳಿಗಳಿವೆ. ಮೊದಲನೆಯದು "ಪುಲ್ನಾ", ಗೋವಿಂದಘಾಟ್‌ನಿಂದ ಮೂರು ಕಿ.ಮೀ. ದೂರದಲ್ಲಿದೆ. ಕಾಲುಹಾದಿ ಕೊಂಚ ಬದಿಯಲ್ಲಿ ಹೋಗಿದ್ದರಿಂದ ಪುಲ್ನಾ ಊರನ್ನು ಗಮನಿಸಿರಲಿಲ್ಲ. ಎರಡನೆಯದು ಭ್ಯುಂದರ್. ಇದು ಕೆಳಗಿನಿಂದ ಸುಮಾರು ಎಂಟು ಕಿ.ಮೀ. ದೂರದಲ್ಲಿದೆ. ಭ್ಯುಂದರ್ ಈ ಸೀಮೆಯಲ್ಲಿ ಕೊಂಚ ಮಹತ್ವವಿರುವ ಊರು. ಈ ಊರಿನಿಂದಲೇ ಸುತ್ತಮುತ್ತಲಿನ ಕಣಿವೆಗೆ "ಭ್ಯುಂದರ್ ಕಣಿವೆ" ಎಂಬ ಹೆಸರು ಬಂದಿದೆ. ಚಳಿಗಾಲದ ಸಮಯದಲ್ಲಿ ಈ ಎರಡು ಊರುಗಳಿಗೂ ಹೋಗುವ ದಾರಿಯಲ್ಲಿ ಹಿಮ ಆವರಿಸಿಕೊಂಡು, ರಸ್ತೆ ಮುಚ್ಚಿಹೋಗುತ್ತದೆ. ಆ ಸಮಯದಲ್ಲಿ ಇಲ್ಲಿನ ಜನ ಊರನ್ನು ಬಿಟ್ಟು ಬೆಚ್ಚಗಿನ ಪ್ರದೇಶಕ್ಕೆ ತೆರಳುತ್ತಾರೆ.

ಚಾರಣದ ಹಾದಿ ಭ್ಯುಂದರ್ ಊರಿನ ನಡುವೆಯೇ ಸಾಗುತ್ತದೆ. ಕಾಡಿನ ಮಧ್ಯೆ ಅಷ್ಟು ದೂರ ನಡೆದು ಬಂದ ನಂತರ ಕಾಣುವ ಜನವಸತಿಯಿರುವ ಆ ಪುಟ್ಟ ಊರು ವಿಸ್ಮಯದಂತೆ ತೋರುತ್ತದೆ. ಊರಿನ ಒಳಹೋಗಲು ಒಂದು ಪುಟ್ಟ ಸೇತುವೆಯಿದ್ದು, ಸೇತುವೆಗೂ ಮುನ್ನ ದಾರಿ ಕವಲೊಡೆಯುತ್ತದೆ.

ಕವಲೊಡೆಯುವ ಜಾಗದಲ್ಲಿ ಉತ್ತರಾಖಂಡ ಸರ್ಕಾರದ ಫಲಕವೊಂದಿದ್ದು ಅದರಲ್ಲಿ ಘಾಂಘರಿಯಾಕ್ಕೆ ಆರು ಕಿ.ಮೀ. ಎಂದೂ, "ಕಾಕ್ ಭುಸಂಡೀ" ಎಂಬಲ್ಲಿಗೆ ಹದಿಮೂರು ಕಿ.ಮೀ. ಎಂದೂ ಸೂಚಿಸಿದೆ. ಅದು ಯಾವ ಊರು ಇನ್ನೂ ಹದಿಮೂರು ಕಿ.ಮೀ. ದೂರದಲ್ಲಿರುವುದು, ಅದು ಯಾರು ಅಲ್ಲಿಗೆ ಹೋಗುತ್ತಾರೋ ಎಂದು ಆಶ್ಚರ್ಯಚಕಿತನಾಗಿ ಆ ಫಲಕವನ್ನು ನೋಡುತ್ತಾ ಕೆಲಕ್ಷಣ ಅಲ್ಲಿ ನಿಂತಿದ್ದೆ. "ಕಾಕ್ ಭುಸಂಡಿ" ಎಂಬ ವಿಚಿತ್ರ ಹೆಸರು ನನ್ನ ಮನದಲ್ಲಿ ಉಳಿದುಬಿಟ್ಟಿತು.

ಭ್ಯುಂದರ್‌ನಿಂದ ಮುಂದಿನ ಆರು ಕಿ.ಮೀ. ಚಾರಣವು ನಿಜಕ್ಕೂ ಕಷ್ಟಕರವಾಗಿದೆ. ಇಲ್ಲಿಗೆ ತಲುಪುವಾಗಲೇ ನಿತ್ರಾಣಗೊಂಡಿರುವ ಯಾತ್ರಿಕರನ್ನು ಯಾರೂ ಮುಂದೆ ಕಠಿಣವಾಗಿದೆಯೆಂದು ಹೇಳಿ ನಿರಾಶೆಗೊಳಿಸುವುದಿಲ್ಲವಾದರೂ, ರಸ್ತೆ ಕಾಣುವಾಗಲೆಲ್ಲಾ ಕೇವಲ ಏರಿಕೆಯೇ ಇದೆಯೆಂದು ಅರಿವಾಗಿ ಧೈರ್ಯಗೆಡುವ ಸಾಧ್ಯತೆಗಳಿವೆ. ಮಧ್ಯಾಹ್ನದ ಸೂರ್ಯ ನೆತ್ತಿಯ ಮೇಲೆ ಕುಳಿತು ಅಪಹಾಸ್ಯ ಮಾಡುತ್ತಿರುವಂತೆ ಭಾಸವಾಗುತ್ತದೆ. ಬೀಸುವ ತಂಗಾಳಿ ನದಿಯ ಶೀತಲ ಜಲವನ್ನು ತನ್ನೊಂದಿಗೆ ತಂದು ನಮಗೆ ಮುಟ್ಟಿಸಿ, ಮೇಲಕ್ಕೆ ಹೋದಂತೆಲ್ಲಾ ಚಳಿ ಹೆಚ್ಚೇ ಆಗುವುದೆಂದು ಸೂಚಿಸುತ್ತದೆ.

ಸಿಖ್ ಯಾತ್ರಿಕರ ಉತ್ಸಾಹ, ಅಗತ್ಯವಿದ್ದೆಡೆ ಸಹಾಯಹಸ್ತವ ಚಾಚುವ ಅವರ ಸ್ವಭಾವ – ಇವುಗಳನ್ನು ನಿಜಕ್ಕೂ ಮೆಚ್ಚಲೇಬೇಕಾದ್ದು. ಘಾಂಘರಿಯಾದಿಂದ ಹಿಂತಿರುಗಿ ಬರುತ್ತಿರುವ ಯಾತ್ರಿಕರು ಮೇಲೇರುತ್ತಿರುವವರನ್ನು ಕಂಡಾಗ ಶಕ್ತಿ ತುಂಬುವಂತೆ ಮಾತನಾಡುತ್ತಾರೆ. ದಣಿದವರಿಗೆ "ಗ್ಲುಕೋಸ್" ಕೊಡಲೆಂದೇ ಅನೇಕ ಗ್ಲುಕೋಸ್ ಡಬ್ಬಗಳನ್ನು – ದುಬಾರಿಯಾದರೂ ಸಹ – ತಮ್ಮ ಬಳಿ ಇಟ್ಟುಕೊಂಡಿರುತ್ತಾರೆ. ನೀರು ಬೇಕೆಂದರೆ ಅದು ಕೂಡಾ ಲಭ್ಯ. "ಸತ್‌ನಾಮ್ ವಾಹೇ ಗುರು" ಎಂಬ ಒಂದು ಸಾಲಿನ ಪ್ರಾರ್ಥನೆಯಿಂದಲೇ ಎತ್ತರದ ಈ ಬೆಟ್ಟವನ್ನು ಜಯಿಸಿಬಿಡುತ್ತಾರೆ. ನನ್ನನ್ನು ಕಂಡಾಗ ಬೇರಾವುದೋ ಸ್ಥಳದವನೆಂದು ಕೂಡಲೇ ತಿಳಿದು ನನ್ನೊಡನೆ ಮಿತ್ರತ್ವದಿಂದ ಮಾತನಾಡಿಸಿದವರೆಷ್ಟೋ ಮಂದಿ. ಮೊದಲು ಪಂಜಾಬಿ ಭಾಷೆಯಲ್ಲಿ ಪ್ರಾರಂಭಿಸಿ, ನನ್ನ ಮುಖ ನೋಡಿ ಹಿಂದಿಯಲ್ಲಿ ಮಾತನಾಡಿದ ಜನರು ಹಲವಾರು. ಅನೇಕ ಬಾರಿ ಇವರನ್ನು ಈ ಜಾಗದಲ್ಲಿ ನೋಡಿದಾಗ ಇದೇನು ಉತ್ತರಾಖಂಡವೋ ಅಥವಾ ಪಂಜಾಬ್ ರಾಜ್ಯವೋ ಎಂಬ ಪ್ರಶ್ನೆ ಮೂಡದಿರದು.

ನನ್ನ ವೇಗ ಕ್ರಮೇಣ ಕಡಿಮೆಯಾಗಲಾರಂಭಿಸಿತು. ಶ್ರೀಧರ್‌ಗೆ ಮುಂದುವರಿಯಲು ತಿಳಿಸಿ ನಿಧಾನವಾಗಿ ಹತ್ತತೊಡಗಿದೆ. ಮುಂದೆ ಮುಂದೆ ಹೋದ ಶ್ರೀಧರ್, ನಂತರ ನನ್ನ ಕಣ್ಣಿಗೆ ಬೀಳದಷ್ಟು ದೂರವಾದರು. ದಣಿವು, ನೀರಡಿಕೆ, ಚಳಿ – ಇವೆಲ್ಲವೂ ಎಡೆಬಿಡದೆ ಕಾಡುತ್ತಿದ್ದರೂ ಅದೊಂದು ಅವ್ಯಕ್ತ ಶಕ್ತಿ ಅದೇನೇ ಆದರೂ ಮುಂದುವರಿಯುವಂತೆ ನನ್ನನ್ನು ಪ್ರೇರೇಪಿಸುತ್ತಿತ್ತು. Thermal ಬಟ್ಟೆ ಬೆವರಿನಿಂದ

ಒದ್ದೆಯಾಗಿತ್ತಾದ್ದರಿಂದ ಬೀಸುವ ತಂಗಾಳಿ ಚಳಿಯ ಅನುಭವವನ್ನು ಹೆಚ್ಚಿಸುತ್ತಿತ್ತು. ಆದರೂ, ಅಂತರಾಳದಿಂದ ಹೊರಬರುತ್ತಿದ್ದ ದನಿಯೊಂದು ನನ್ನಿಂದ ಇದು ಖಂಡಿತ ಸಾಧ್ಯವೆಂದು ಪದೇಪದೇ ಮನದಟ್ಟು ಮಾಡಿಕೊಡುತ್ತಿತ್ತು.

ಕಾಲೆಳೆಯುತ್ತಾ ಪ್ರತಿ ಹತ್ತು ಹೆಜ್ಜೆಗೂ ಕೆಲಕ್ಷಣ ನಿಂತು ವಿರಮಿಸಿಕೊಳ್ಳುತ್ತಾ ಸಾಧ್ಯವಾದಷ್ಟು ಮಟ್ಟಿಗೆ ಎಲ್ಲೂ ಕೂರಬಾರದೆಂಬ ಛಲದಿಂದ ಮೇಲೇರುತ್ತಲೇ ಹೋದೆ. ಮೊಬೈಲ್ ಫೋನ್ ಕೆಲಸ ಮಾಡುವುದಿಲ್ಲವಾದ್ದರಿಂದ ಬ್ಯಾಟರಿ ಉಳಿಸಲು ಅದನ್ನು ಆರಿಸಿಟ್ಟಿದ್ದೆ. ಕೈಗೆ ಗಡಿಯಾರ ಸಹ ಕಟ್ಟಿರಲಿಲ್ಲ. ಹೀಗಾಗಿ ಸಮಯವೆಷ್ಟಾಯಿತೆಂದು ತಿಳಿಯುವ ಸಂಭವವೂ ಇರಲಿಲ್ಲ. ಆ ಸ್ಥಿತಿಯಲ್ಲಿ ಅದು ಮುಖ್ಯವಾಗಿರಲಿಲ್ಲವಾದರೂ, ಸಮಯದ ಸಹಾಯದಿಂದ ಅದೆಷ್ಟು ದೂರ ಕ್ರಮಿಸಿರುವೆನೆಂದು ತಿಳಿಯಬಹುದಿತ್ತು. ಈಗ ಆ ಸೌಕರ್ಯವೂ ನನ್ನಲ್ಲಿ ಇರಲಿಲ್ಲ. ನನ್ನ ಪಾಲಿಗೆ ಪ್ರಪಂಚ ನಿಂತುಹೋದಂತಿತ್ತು. ಕೇವಲ ಈ ಚಾರಣ ಮಾಡಿ ಮುಗಿಸಬೇಕೆನ್ನುವ ದೃಢನಿಶ್ಚಯ, ಮರುದಿನ ಹೋಗುವ ಪುಷ್ಪಗಳ ಕಣಿವೆಯ ಸುಂದರ ಕನಸು – ಇವಿಷ್ಟೇ ನನ್ನ ತಲೆಯಲ್ಲಿ ಓಡುತ್ತಿದ್ದ ಆಲೋಚನೆಗಳು.

ಹೀಗೇ ಸಾಗುತ್ತಿರುವಾಗ ಒಮ್ಮೆಲೇ ಮುಂದಿನ ಹಾದಿ ಸಮತಟ್ಟಾಗಿರುವಂತೆ ಕಂಡುಬಂತು! ಚೂರು ಮುನ್ನಡೆದಂತೆ, ಅದು ಘಾಂಘರಿಯಾ ಹೆಲಿಪ್ಯಾಡ್ ಎಂಬ ಸಂಗತಿ ತಿಳಿದುಬಂತು. ಇದು ನೀಡಿದ ಸಂತೋಷ ಅಷ್ಟಿಷ್ಟಲ್ಲ! ಹದಿಮೂರು ಕಿ.ಮೀ. ಸಾಗಿಯಾಗಿದೆ, ಇನ್ನು ಕೇವಲ ಒಂದು ಕಿ.ಮೀ. ನಡೆಯಬೇಕು ಎಂದು ಅರಿವಾದಾಗ ಯಾರಿಗೆ ತಾನೇ ಖುಷಿಯಾಗದಿರದು! ಗುಡ್ಡಗಳ ನಡುವಿನ ಹಸಿರು ಹುಲ್ಲುಗಾವಲಿನಲ್ಲಿ ಘಾಂಘರಿಯಾ ಹೆಲಿಪ್ಯಾಡ್ ಇತ್ತು. ಗೋವಿಂದಘಾಟ್‌ನಿಂದ ಇಲ್ಲಿಗೆ ಹೆಲಿಕಾಪ್ಟರ್ ಸೇವೆ ಸಹ ಇದೆ. ಮೊತ್ತ ಹೆಚ್ಚು, ಆದರೆ ಅದು ಉಳಿಸುವ ಸಮಯ ಮಾತ್ರ ಅಗಾಧ! ನಾನು ಎಂಟು ಗಂಟೆ ನಡೆದು ಕ್ರಮಿಸಿದ ಹಾದಿಯನ್ನು ಹೆಲಿಕಾಪ್ಟರ್ ಕೇವಲ ಐದು ನಿಮಿಷದಲ್ಲಿ ಕ್ರಮಿಸುವುದು!

ಕೇವಲ ಏರಿಕೆಯ ಹಾದಿಯಲ್ಲಿ ಸಾಗಿ, ಈಗ ಸಮತಟ್ಟು ಜಾಗದಲ್ಲಿ ನಡೆಯಬೇಕೆಂದರೆ ಕಷ್ಟವೇ ಆಗಿತ್ತು. ಕಾಲು ಕೊಂಚ ನಡುಗುತ್ತಿತ್ತು ಕೂಡಾ. ಅಷ್ಟರಲ್ಲಿ ಹೆಲಿಪ್ಯಾಡ್ ಸಮೀಪ ಜಯರಾಮ್ ಕಂಡ! ಬಾಯಾರಿದ್ದ ನನಗೆ ಅವನ ಪ್ರಯಾಣದ ವರದಿಗಿಂತ ಆಕರ್ಷಕವಾಗಿ ಕಂಡಿದ್ದು ಅವನ ಕೈಲಿದ್ದ ಜ್ಯೂಸ್ ತುಂಬಿದ್ದ ಶೀಷೆ! ಅದನ್ನು ಕಸಿದುಕೊಂಡು ಖಾಲಿ ಮಾಡಿದೆ. ಎದುರು ಕಾಣುತ್ತಿದ್ದ ದಿಬ್ಬವನ್ನು ಹತ್ತಿದರೆ ಅಲ್ಲಿಂದ ಘಾಂಘರಿಯಾ ಊರು ಶುರು ಎಂದು ಅವನು ಹೇಳಿದ್ದನ್ನು ನಾನು ನಂಬಲಿಲ್ಲ. ಆ ದಿಬ್ಬವನ್ನು ನಾನು ಹತ್ತಲು ಸಾಧ್ಯವೇ ಇಲ್ಲವೆಂದು ವಾದಕ್ಕೆ ನಿಂತೆ. ದಿಬ್ಬದಿಂದಾಚೆಗೆ ಇರುವ ಮೊದಲನೆಯ

ಕಟ್ಟಡವೇ ನಮ್ಮ ಹೋಟೆಲ್ ಎಂದು ಅವನು ಪರಿಪರಿಯಾಗಿ ಮನವರಿಕೆ ಮಾಡಿಕೊಟ್ಟ ಮೇಲೆಯೇ, ಮುಷ್ಕರ ಹೂಡಿದ್ದ ನನ್ನ ಕಾಲುಗಳು ಸ್ಥಳ ಬಿಟ್ಟು ಕದಲಿದ್ದು.

ದಿಬ್ಬವನ್ನೇರಿದ ತಕ್ಷಣ ದೊಡ್ಡ ಊರೊಂದು ಗೋಚರಿಸಿತು! ಅದುವೇ ಘಾಂಘರಿಯಾ. ಜಯರಾಮ್ ಹೇಳಿದ್ದಂತೆ ಮೊದಲನೆಯ ಕಟ್ಟಡವೇ ನಾವು ಇಳಿದುಕೊಳ್ಳಬೇಕಾಗಿದ್ದ ಹೋಟೆಲ್. ಶ್ರೀಧರ್ ಕೂಡಾ ಆಗ ತಾನೇ ಅಲ್ಲಿಗೆ ತಲುಪಿದ್ದರಂತೆ! ನಮ್ಮ ಬೆಚ್ಚಗಿನ ಕೊಠಡಿ ನಮಗಾಗಿ ಸಿದ್ಧಗೊಂಡಿತ್ತು. ಬಳಲಿ, ಬೆವೆತು ನಿಂತಿದ್ದರೂ ಜಯರಾಮ್ ನನ್ನ ಚಿತ್ರ ಕ್ಲಿಕ್ಕಿಸುವೆನೆಂದು ಹೇಳಿದಾಗ ಬೇಡವೆನ್ನಲಿಲ್ಲ. ನಮ್ಮ ಕೋಲು, ಚೀಲದ ಸಮೇತ ಶ್ರೀಧರ್ ಮತ್ತು ನಾನು ಕ್ಯಾಮೆರಾ ಕಣ್ಣಿಗೆ ನಮ್ಮ ಮುಖವನ್ನೊಡ್ಡಿದೆವು. ಕೊಠಡಿಯ ಒಳಗೆ ಹೋದ ತಕ್ಷಣ ನನ್ನ ಸಾಮಗ್ರಿಗಳನ್ನೆಲ್ಲ ಬಿಸಾಡಿ ಹಾಸಿಗೆಯ ಮೇಲೆ ಬಿದ್ದುಕೊಂಡಾಗ ಆದ ಸಂತಸ, ನೆಮ್ಮದಿ, ಸಂತೃಪ್ತಿ ಅಗಾಧ!

ಬೆಳಿಗ್ಗೆ ೯ ಕ್ಕೆ ಗೋವಿಂದಘಾಟ್‌ನಿಂದ ಪ್ರಾರಂಭಿಸಿ, ಸಂಜೆ ೫ ಗಂಟೆಗೆ ಘಾಂಘರಿಯಾದಲ್ಲಿ ಚಾರಣ ಮುಕ್ತಾಯಗೊಳಿಸಿದೆ. ೧೪ ಕಿ.ಮೀ.ಗಳ ಚಾರಣಕ್ಕೆ ನಾನು ತೆಗೆದುಕೊಂಡ ಸಮಯ ಎಂಟು ಗಂಟೆಗಳು! ಸ್ಥೂಲಕಾಯವು ಇದಕ್ಕೆ ಆಸ್ಪದ ಕೊಡುವುದೇ ಎಂಬ ನನ್ನ ಸಂಶಯ ಸಂಪೂರ್ಣವಾಗಿ ಮಾಯವಾಗಿತ್ತು.

ಬಿಸಿಬಿಸಿ ತಿಂಡಿ–ಕಾಫಿಗಳನ್ನು ಕೊಠಡಿಗೇ ತರಿಸಿಕೊಂಡು ತಿಂದೆವು. ಚಳಿಯ ಹವೆ, ದಣಿದಿದ್ದ ದೇಹ, ಮುದಗೊಂಡಿದ್ದ ಮನಸ್ಸು ಮತ್ತು ರುಚಿರುಚಿಯಾದ ತಿಂಡಿ – ಇವೆಲ್ಲ ಒಂದಕ್ಕೊಂದು ಅದೆಷ್ಟು ಚೆನ್ನಾಗಿ ಹೊಂದಿಕೊಳ್ಳುತ್ತವೆ!

# ಯೇ ಕೌನ್ ಚಿತ್ರಕಾರ್ ಹೈ...

ಘಾಂಘರಿಯಾ ತಲುಪುವಷ್ಟರಲ್ಲಿ ಮೂವರೂ ಹೈರಾಣಾಗಿದ್ದೆವು. ಕೊಠಡಿಗೇ ತಿಂಡಿ ತರಿಸಿಕೊಂಡು ತಿಂದ ನಂತರ ಹಾಗೇ ಮಲಗಿಕೊಳ್ಳೋಣವೆನ್ನುವಷ್ಟರಲ್ಲಿ ಮರುದಿನದ ಪ್ರವಾಸದ ಸಲುವಾಗಿ ಒಂದಷ್ಟು ಮಾಹಿತಿ ಸಂಗ್ರಹಿಸಬೇಕೆಂಬ ಯೋಚನೆ ಸಹ ಮೂಡಿತು. ಸರಿ, ನಮ್ಮ ಹೋಟೆಲ್ ಮಾಲೀಕನೇ ಸರಿಯಾದ ವ್ಯಕ್ತಿ ಎಂದೆನ್ನಿಸಿ, ಆತನನ್ನು ಮಾತನಾಡಿಸಲು ಹೋದೆವು.

ಮಾಲೀಕ ಅತ್ಯಂತ ಸ್ನೇಹಜೀವಿ. ಚವ್ಹಾಣ್ ಎಂದು ಅವರ ಹೆಸರು. ನಮ್ಮ ಮುಖ ನೋಡಿದೊಡನೆಯೇ ಆತ್ಮೀಯತೆಯಿಂದ ಮಾತಿಗಿಳಿದರು. ಅಲ್ಲಿ ನಮ್ಮ ವಾಸ್ತವ್ಯ ಮೂರು ದಿನಗಳ ಕಾಲ ಇದ್ದಿದ್ದರಿಂದ ನಾವು ಪುಷ್ಪಗಳ ಕಣಿವೆಗೂ ಹೇಮಕುಂಡಕ್ಕೂ ಹೋಗುವವರೆಂದು ತಿಳಿಸಿದೆವು.

ಪುಷ್ಪಗಳ ಕಣಿವೆಯಲ್ಲಿ ಜುಲೈ–ಆಗಸ್ಟ್ ತಿಂಗಳುಗಳಲ್ಲಿ ಹೂವುಗಳು ಹೆಚ್ಚಾಗಿ ಇರುವುದಂತೆ. ಜೂನ್ ತಿಂಗಳಿನಲ್ಲಿ ಅಷ್ಟೇನೂ ಹೂಗಳಿರುವುದಿಲ್ಲ, ಹೂಗಳಿದ್ದರೂ ಸಹ ಅವೆಲ್ಲ ಪುಟ್ಟ ಹೂಗಳು ಎಂದು ತಿಳಿಸಿದರು. ಆದರೂ ಇದು ಕಣಿವೆಗೆ ಹೋಗಲು ಉತ್ತಮ ಸಮಯವೆಂದು ಅವರ ಅನಿಸಿಕೆ. ಪ್ರಕೃತಿ ಸೌಂದರ್ಯ ಸವಿಯಲು ಯಾವ ಕಾಲವಾದರೇನಂತೆ, ಹೆಚ್ಚು ಹೂಗಳಿಲ್ಲದೆ ಹೋದರೂ ಕಣಿವೆ ಅತ್ಯಂತ ಸುಂದರವಾದ ಸ್ಥಳ, ನೀವು ಬಹಳವಾಗಿ ಆನಂದಿಸುವಿರಿ ಎಂಬ ಭರವಸೆ ನೀಡಿದರು. ಯಾರಾದರೂ ಮಾರ್ಗದರ್ಶಿ (Guide) ದೊರೆಯುವರೇ ಎಂಬ ನಮ್ಮ ಪ್ರಶ್ನೆಗೆ ಮತ್ತೊಂದು ಅಂಗಡಿಯ ಚವ್ಹಾಣ್ ಎನ್ನುವವರನ್ನೊಮ್ಮೆ ಸಂಪರ್ಕಿಸಿ ಎಂದು ತಿಳಿಸಿದರು.

ಈ ಎರಡನೆಯ ಚವ್ಹಾಣ್ ಸಹ ಮಾರ್ಗದರ್ಶಿಗಳು ಯಾರೂ ಲಭ್ಯವಿಲ್ಲವೆಂದು ತಿಳಿಸಿದರು. ಮರಳಿ ಹೋಟೆಲ್‌ಗೆ ಬರುವಾಗ ಮತ್ತೊಬ್ಬ ವೃದ್ಧರು ಸಿಕ್ಕಿದರು. ಮಾರ್ಗದರ್ಶಿ ಬೇಕೆನ್ನುವ ನಮ್ಮ ಕೋರಿಕೆಗೆ ಅವರು ಉತ್ತರಿಸಿ, ಈಗ ಎಲ್ಲರೂ ತಮ್ಮ ತಮ್ಮ ವ್ಯವಹಾರಗಳಲ್ಲಿ ಮಗ್ನರಾಗಿರುವುದರಿಂದ ಯಾರೂ ಮಾರ್ಗದರ್ಶಿಗಳು ಸಿಗುವುದಿಲ್ಲವೆಂದು ತಿಳಿಸಿದರು. ಆದರೆ ಅವರು ನಮಗೆ ಕೊಟ್ಟ ಸೂಚನೆಗಳು ಅತ್ಯಮೂಲ್ಯವಾಗಿಯೂ, ಉಪಯುಕ್ತವಾಗಿಯೂ ಇದ್ದವು. ಆ ವೃದ್ಧರ ಹೆಸರು "ರಘುವೀರ್ ಚವ್ಹಾಣ್". (ಈ ಎಲ್ಲ ಚವ್ಹಾಣ್‌ರೂ ಬಂಧುಗಳೆಂದು ನಮಗೆ ನಂತರ ತಿಳಿದುಬಂದ ವಿಷಯ.)

ಬೇಸಿಗೆ ಪ್ರಾರಂಭವಾಗುತ್ತಿದಂತೆ ಪುಷ್ಪಗಳ ಕಣಿವೆಯಲ್ಲಿ ಹರಡಿರುವ ಹಿಮವೆಲ್ಲವೂ ನಿಧಾನವಾಗಿ ಕರಗತೊಡಗುತ್ತದೆ. ಮೇ ಮಾಸದಲ್ಲಿ ಕರಗುವ ಹಿಮ, ಕಣಿವೆಯನ್ನು ಬೋಳಾಗಿರಿಸುತ್ತದೆ. ಮೇ

ತಿಂಗಳಲ್ಲಿ ಕಣಿವೆಯ ಬಣ್ಣ ಕಂದು (Brown). ಜೂನ್ ಮಾಸಾರಂಭದಲ್ಲಿ ನಿಧಾನವಾಗಿ ಗಿಡಗಳು ಚಿಗುರೊಡೆಯಲು ಪ್ರಾರಂಭಿಸುತ್ತವೆ. ಆಗ ಭೂಮಿ ಹಸಿರು ಬಣ್ಣಕ್ಕೆ ತಿರುಗುತ್ತದೆ. ಜೂನ್ ಮಾಸದ ನಡುವಿನಿಂದ ಹಿಡಿದು ಜುಲೈ ನಡುವಿನವರೆಗೂ ಹಸಿರಿನ ಚಾಪೆಯ ನಡುವೆ ಹಲವಾರು ಹೂಗಳು ಅರಳುತ್ತವೆ. ಈ ಮೊದಲ ಹೂವುಗಳು ಈ ವೇಳೆಯಲ್ಲಷ್ಟೇ ಇದ್ದು, ನಂತರ ಜುಲೈ–ಆಗಸ್ಟ್ ಮಾಸಗಳಲ್ಲಿ ಬಿಡುವ ದೊಡ್ಡ ಹೂಗಳಿಗೆ ಜಾಗ ಮಾಡಿಕೊಡುವ ಸಲುವಾಗಿ ಕಣ್ಮರೆಯಾಗುತ್ತವೆ. ದೊಡ್ಡ ಹೂಗಳು ಬಿಡುವ ಕಾಲದಲ್ಲಿ ಕಣಿವೆಯ ಬಣ್ಣ ಕೆಂಪು, ನೀಲಿ, ಹಳದಿ. ಸೆಪ್ಟೆಂಬರ್‌ನಲ್ಲಿ ಎಲ್ಲ ಹೂಗಳೂ ಉದುರುವ ಸಮಯ – ಮತ್ತೊಮ್ಮೆ ಹಸಿರು ಬಣ್ಣ ಕಣಿವೆಯನ್ನು ಆಳುತ್ತದೆ. ನಂತರ ನಿಧಾನವಾಗಿ ಗಿಡಗಳೂ ಒಣಗತೊಡಗಿ, ಚಳಿಗಾಲ ಪ್ರಾರಂಭವಾಗುವ ಮುನ್ನ ಭೂಮಿ ಮತ್ತೊಮ್ಮೆ ಕಂದು ಬಣ್ಣಕ್ಕೆ ತಿರುಗುತ್ತದೆ. ನಂತರ ದೀಪಾವಳಿಯ ಸಮಯದಿಂದ ಸುರಿಯುವ ಹಿಮ ಕಣಿವೆಯನ್ನು ಸಂಪೂರ್ಣವಾಗಿ ಮುಚ್ಚಿಹಾಕಿ, ಅಲ್ಲಿ ಕೇವಲ ಬಿಳಿಯ ಬಣ್ಣವಷ್ಟೇ ಕಂಡುಬರುತ್ತದೆ. ಚಳಿಗಾಲದಲ್ಲಿ ಪುಷ್ಪಗಳ ಕಣಿವೆಯ ಪ್ರವಾಸ ನಿಂತುಹೋಗುತ್ತದೆ. ಘಾಂಘರಿಯಾದಲ್ಲೂ ಹಿಮ ಆವರಿಸಿಕೊಳ್ಳುವುದರಿಂದ ವಸತಿಗೆ ವ್ಯವಸ್ಥೆಯೇ ಇರುವುದಿಲ್ಲ.

ಪುಷ್ಪಗಳ ಕಣಿವೆಯ ಹಿಂದೆ ರೋಚಕವಾದ ಇತಿಹಾಸವಿದೆ. ೧೯೩೧ ರಲ್ಲಿ ಕೆಲವು ಆಂಗ್ಲ ಅಧಿಕಾರಿಗಳು ಕಾಮೇತ್ (Mt. Kamet) ಪರ್ವತಕ್ಕೆ ಚಾರಣ ಹೋಗಿದ್ದರಂತೆ. ಹಿಂತಿರುಗಿ ಬರುವಾಗ ಬದರಿನಾಥ ಸಮೀಪದ ಮಾನಾಕ್ಕೆ ಹೋಗುವ ದಾರಿ ತಪ್ಪಿ ಭ್ಯುಂದರ್ ಕಣಿವೆಯ ಬಳಿ ಬಂದರಂತೆ. ಇದರ ಶೋಧನೆಯ ಸಂಪೂರ್ಣ ಕಥೆಯನ್ನು Frank S Smythe ಎಂಬ ಅಧಿಕಾರಿ ತನ್ನ Valley of Flowers ಎಂಬ ಹೊತ್ತಿಗೆಯಲ್ಲಿ ನಮೂದಿಸಿದ್ದಾನೆ. ಮೂಲತಃ ಸಸ್ಯಶಾಸ್ತ್ರಜ್ಞನಾಗಿದ್ದ ಈತ ಕೆಲವು ವರ್ಷಗಳ ಬಳಿಕ ಮತ್ತೊಮ್ಮೆ ಅದೇ ಸ್ಥಳಕ್ಕೆ ಭೇಟಿ ನೀಡಿ ಅಲ್ಲಿನ ಹೂಗಳ, ಸಸ್ಯಗಳ ಅಧ್ಯಯನ ನಡೆಸಿದ. ಇದರಿಂದ ಪ್ರೇರೇಪಣೆ ಪಡೆದ Joan Margaret Legge ಎಂಬ ಆಂಗ್ಲ ಸಸ್ಯಶಾಸ್ತ್ರಜ್ಞೆ ೧೯೩೯ ರಲ್ಲಿ ಕಣಿವೆಯಲ್ಲಿ ಇನ್ನಷ್ಟು ಸಸ್ಯಗಳ ಅಧ್ಯಯನ ನಡೆಸುತ್ತಿದ್ದಾಗ ಕಾಲುಜಾರಿ ಪ್ರಪಾತದೊಳಗೆ ಬಿದ್ದು ಮೃತಳಾದಳು. ಅವಳ ನೆನಪಿನಲ್ಲಿ ಅವಳ ಸಹೋದರಿ ಸ್ಥಾಪಿಸಿದ ಸಮಾಧಿಯು ಕಣಿವೆಯ ತುದಿಯೊಂದರಲ್ಲಿ ನಿಂತಿದೆ.

ಹಿಂದೆ ಕಣಿವೆಯಲ್ಲಿ ಕುರಿ–ದನಗಳನ್ನು ಮೇಯಲು ಸಹ ಬಿಡುತ್ತಿದ್ದರಂತೆ. ಆದರೆ ೧೯೮೨ ರಲ್ಲಿ ಕಣಿವೆಯನ್ನು ನಂದಾದೇವಿ ರಾಷ್ಟ್ರೀಯ ಉದ್ಯಾನವನದ (Nandadevi Biosphere) ಭಾಗವನ್ನಾಗಿ ಮಾಡಿ ಅದನ್ನು ಯುನೆಸ್ಕೋ ಪಾರಂಪರಿಕ ಕ್ಷೇತ್ರ (UNESCO Heritage Site) ಎಂದು

ಘೋಷಿಸಲಾಯಿತು. ಅಲ್ಲಿಂದೀಚೆಗೆ ಕುರಿಗಳನ್ನು ಮೇಯಿಸಲು ಪುಷ್ಪಗಳ ಕಣಿವೆಗೆ ಬದಲಾಗಿ ಭ್ಯುಂದರ್ ಮತ್ತು ಕಾಕ್ ಭುಸಂಡಿ ಕಣಿವೆಗಳನ್ನು ಬಳಸುತ್ತಾರೆ.

ಪುಷ್ಪಗಳ ಕಣಿವೆಗೆ ಪಾದಚಾರಿಗಳಿಗೆ ಮಾತ್ರ ಪ್ರವೇಶ. ಕುದುರೆಗಳಿಗೆ ಇಲ್ಲಿ ಪ್ರವೇಶ ನಿಷಿದ್ಧ. ಘಾಂಘರಿಯಾದಿಂದ ಹೊರಗೆ ಹೇಮಕುಂಡಕ್ಕೆ ಹೋಗುವ ದಾರಿ ಕವಲೊಡೆಯುತ್ತದೆ. ಅದು ಕಣಿವೆಗೆ ಹೋಗುವ ಕಾಲುದಾರಿ. ಸರ್ಕಾರಿ ಕಛೇರಿಯೊಂದಿದ್ದು ಅಲ್ಲಿ ಚೀಟಿ ಪಡೆದು ಮುಂದೆ ಸಾಗಬೇಕು. ೧೫೦ ರೂಪಾಯಿ ನೀಡಿ ಮೂರು ದಿನಗಳ ಪರವಾನಗಿ ಪಡೆಯಬೇಕು. ನಂತರದ ಪ್ರತಿಯೊಂದು ಹೆಚ್ಚುವರಿ ದಿನಕ್ಕೂ ೫೦ ರೂಪಾಯಿ ಮೊತ್ತ. ಕಣಿವೆಯಲ್ಲಿ ಬಿಡಾರ ಹೂಡಲು ಅವಕಾಶವಿಲ್ಲ, ಹಾಗಾಗಿ ಸಂಜೆಯೊಳಗೆ ವಾಪಸ್ ಘಾಂಘರಿಯಾಗೆ ಮರಳಲೇ ಬೇಕು. ಕಛೇರಿಯಲ್ಲಿ ಒಳಗೆ ಹೋದವರು, ಮರಳಿ ಬಂದವರ ಲೆಕ್ಕವಿಡುತ್ತಾರೆ.

ಘಾಂಘರಿಯಾ ಊರಿನಲ್ಲಿರುವ ಒಂದು ಭವನದಲ್ಲಿ ಪ್ರತಿ ಸಂಜೆ ಸುಮಾರು ಅರ್ಧಗಂಟೆಗಳ ಕಾಲ ಪುಷ್ಪಗಳ ಕಣಿವೆಯ ಕುರಿತಾಗಿ ಸಾಕ್ಷ್ಯಚಿತ್ರ ಪ್ರದರ್ಶನ (Documentary Screening) ಏರ್ಪಡಿಸುತ್ತಾರೆ. ಕಣಿವೆಗೆ ಹೋಗುವವರಿಗೆ ಅಲ್ಲಿನ ಪರಿಸರದ, ಪಶುಸಂಕುಲದ, ಸಸ್ಯಸಂಕುಲದ ಕಿರುಪರಿಚಯ ಮಾಡಿಕೊಡುತ್ತಾರೆ. ವರ್ಷದ ವಿವಿಧ ಸಮಯಗಳಲ್ಲಿ ಬೇರೆಬೇರೆ ಹೂಗಳು ಅರಳುವುದರಿಂದ ಅಲ್ಲಿ ಬೆಳೆಯುವ ಎಲ್ಲ ಹೂಗಳನ್ನೂ ಒಮ್ಮೆಲೇ ನೋಡಲು ಸಾಧ್ಯವಿಲ್ಲ. ವೃದ್ಧ ಚವ್ಹಾಣ್ ಪ್ರಕಾರ ಪ್ರತಿ ಹದಿನೈದು ದಿನಗಳಿಗೊಮ್ಮೆ ಕಣಿವೆಯ ವರ್ಣ, ಹೂಗಳು ಬದಲಾಗುತ್ತಿರುತ್ತವೆ. ಅನೇಕ ಸಂಶೋಧಕರು ಇಲ್ಲಿನ ಪ್ರಾಣಿಗಳು, ಸಸ್ಯಗಳು, ಹೂಗಳ ಮೇಲೆ ಸಂಶೋಧನೆ ನಡೆಸಲು ತಿಂಗಳುಗಟ್ಟಲೆ ಘಾಂಘರಿಯಾದಲ್ಲಿ ಉಳಿಯುವುದುಂಟು.

ನಮಗೆ ಬೇಕಿದ್ದ ಎಲ್ಲ ಮಾಹಿತಿಯನ್ನೂ ತಾಳ್ಮೆಯಿಂದ, ಸಂತೋಷವಾಗಿ ನೀಡಿದ ರಘುವೀರ್ ಅವರು ಒಂದು ವಿಷಯವನ್ನು ಗಮನದಲ್ಲಿಟ್ಟುಕೊಳ್ಳುವಂತೆ ಎಚ್ಚರಿಸಿದರು. ಕೆಲವು ಗಿಡಗಳು ಅಪಾಯಕಾರಿಯಾಗಿದ್ದು, ಅವುಗಳು ಸೋಕಿದರೆ ದೇಹದ ಮೇಲೆ ಪ್ರತಿಕೂಲಕರವಾದ ಪರಿಣಾಮಗಳಾಗುವ ಸಾಧ್ಯತೆಗಳಿದ್ದು, ಆದ್ದರಿಂದ ಸಾಧ್ಯವಾದಷ್ಟು ಮಟ್ಟಿಗೆ ಯಾವ ಗಿಡವನ್ನೂ ಮುಟ್ಟದಿರುವಂತೆ ಸಲಹೆ ನೀಡಿದರು. ಅಂದಿನ ದಿನದ ಸಾಕ್ಷ್ಯಚಿತ್ರದ ವೇಳೆ ಮುಗಿದಿತ್ತಾದ್ದರಿಂದ ಕಣಿವೆಯ ವಿಚಾರದಲ್ಲಿ ರಘುವೀರ್‌ರವರು ಕೊಟ್ಟ ಮಾಹಿತಿಗಳಿಂದಲೇ ನಮಗೆ ಕಣಿವೆಯ ಪರಿಸರದ ಸ್ಥೂಲ ಪರಿಚಯವಾಯಿತು. ಶುಭ ಹಾರೈಸಿದ ಅವರನ್ನು ಬೀಳ್ಕೊಟ್ಟು ಮರಳಿ ಹೋಟೆಲ್‌ಗೆ ಬಂದು ಮಾಲೀಕ ಚವ್ಹಾಣ್‌ಗೆ ನಡೆದ ಸಂಗತಿಗಳನ್ನೆಲ್ಲಾ ವಿವರಿಸಿದೆವು. ರಘುವೀರ್ ಅವರ ಮಾತಿಗೆ ಸಹಮತ

ವ್ಯಕ್ತಪಡಿಸಿದ ಅವರು, ಮರುದಿನ ಬೆಳಿಗ್ಗೆ ಬೇಗ ಹೊರಡುವಂತೆ ಸೂಚಿಸಿದರು. ಬೇಗ ಹೊರಟರೆ ಸ್ವಲ್ಪ ಮಟ್ಟಿಗೆ ಕಣಿವೆ ಅಂತರಾಳಕ್ಕೆ ಹೋಗಲು ಸಾಧ್ಯ, ಅಲ್ಲಿ ಹೂಗಳು ಹೆಚ್ಚು ಬೆಳೆಯುತ್ತವೆಂದು ಅವರ ಅಭಿಪ್ರಾಯ. ಊಟದ ವಿಷಯವಾಗಿ ತಲೆಕೆಡಿಸಿಕೊಳ್ಳದೆ, ಕೇವಲ ಚಾಕಲೇಟ್‌ಗಳನ್ನು ತೆಗೆದುಕೊಂಡು ಹೋಗುವಂತೆ ಕೂಡಾ ಸೂಚಿಸಿದರು. ಜೊತೆಗೆ ಸಮಯ ದೊರೆತಲ್ಲಿ, ಕಣಿವೆಯ ವಾತಾವರಣ ಬಹಳ ಆಹ್ಲಾದಕರವಾದ್ದರಿಂದ ಅಲ್ಲಿ ಪಡೆವ ವಿಶ್ರಾಂತಿ ದೇಹದ, ಮನಸ್ಸಿನ ಮೇಲೆ ಅತ್ಯುತ್ತಮ ಪರಿಣಾಮವನ್ನು ಉಂಟುಮಾಡುವುದೆಂದೂ, ಆದ್ದರಿಂದ ಅಲ್ಲಿ ಕೊಂಚ ಹೊತ್ತು ಮಲಗಿ ವಿಶ್ರಮಿಸಬೇಕೆಂದು ಸಲಹೆ ನೀಡಿದರು.

ಅನೇಕ ದಿನಗಳ ತರುವಾಯ ಒಳ್ಳೆಯ ಊಟ ಸಿಕ್ಕಿತ್ತು. ಬೇಗ ಊಟ ಮುಗಿಸಿ, ಪಕ್ಕದಲ್ಲೊಂದು ಕಡೆ ದೊರೆಯುತ್ತಿದ್ದ ಬಿಸಿಬಿಸಿ ಕೆನೆಹಾಲು, ಜಾಮೂನ್‌ಗಳನ್ನು ತಿಂದು ಕೊಠಡಿಗೆ ಬಂದು ಮಲಗಿಕೊಂಡೆವು. ಸುತ್ತಮುತ್ತಲೆಲ್ಲಾ ಕಾಡು, ಹಿಮಕವಿದ ಶಿಖರಗಳಿದ್ದ ಕಾರಣ ಬೀಸುವ ಗಾಳಿ ಬಹಳ ತಣ್ಣಗಿದ್ದು ಬಹಳ ಚಳಿಯನ್ನುಂಟುಮಾಡುತ್ತಿತ್ತು. ಇಷ್ಟು ಎತ್ತರದ ಪ್ರದೇಶದಲ್ಲಿ ರಾತ್ರಿ ಕಳೆಯುತ್ತಿದ್ದುದು ಮೊದಲ ಬಾರಿ! ಜೊತೆಗೆ ನನ್ನ Thermal Wear ಬಟ್ಟೆಗಳೆಲ್ಲವೂ ಬೆವರಿನಲ್ಲಿ ನೆನೆದಿದ್ದ ಕಾರಣ, ಅವೆಲ್ಲವೂ ಧರಿಸಲು ಅಯೋಗ್ಯವಾಗಿ ಚಳಿಯ ಅನುಭವ ವಿಪರೀತವಾಗಿಯೇ ಆಯಿತು. ಮನಸ್ಸು ಮಾತ್ರ ಪುಷ್ಪಗಳ ಕಣಿವೆಯತ್ತ ಓಡಿಹೋಗಿತ್ತು.

೧೩ ಜೂನ್ ೨೦೧೩... ಮುಂಜಾನೆ ಏಳುವಷ್ಟರಲ್ಲಿ ಮಳೆಯ ಮೋಡ ಕವಿದಿತ್ತು. ಸ್ವಲ್ಪ ಆತಂಕ ಮೂಡಿಸುವಂತಹ ಪ್ರತಿಕೂಲ ಹವೆಯಿದ್ದರೂ, ತಲೆಕೆಡಿಸಿಕೊಳ್ಳದೆ ೮ ಗಂಟೆಗೆ ಘಾಂಘರಿಯಾದಿಂದ ಹೊರಬಿದ್ದೆವು. ಊರಿನ ಜನಭರಿತ ರಸ್ತೆಯಿಂದ ಹೊರಹೋಗಿ, ಕಣಿವೆಯ ರಸ್ತೆ ಹಿಡಿಯಲು ಅಧಿಕವೇ ಸಮಯ ಬೇಕಾಯಿತು. ಆದರೆ ಕಣಿವೆಯ ಪರವಾನಗಿ ಚೀಟಿಯನ್ನು ಪಡೆದು ಮುಂದೆ ಸಾಗುವಷ್ಟರಲ್ಲಿ ನಾವು ಮೂವರೇ ಅಲ್ಲಿಗೆ ಹೋಗುತ್ತಿರುವವರೆಂಬಂತೆ ಜನದಟ್ಟಣೆ ಕಡಿಮೆಯಾಗಿಬಿಟ್ಟಿತು. ಕೊಂಚ ಮುಂದೆ ಹೋದ ನಂತರ ಅನೇಕ ಜನರಿದ್ದ ಮತ್ತೊಂದು ಗುಂಪು ಕಂಡಿತಾದರೂ ಅವರನ್ನು ಹಿಂದಿಕ್ಕಿದ ಮೇಲೆ ಮಾರ್ಗದಲ್ಲಿ ಮತ್ತೆ ಯಾರೂ ಕಾಣಲಿಲ್ಲ.

ಕಣಿವೆಯ ಹಾದಿ ಅತ್ಯಂತ ಹಸಿರಾಗಿದ್ದು, ಮನಮೋಹಕವಾಗಿದೆ. ಜನಸಂಚಾರ ವಿರಳವಾಗಿರುವುದರಿಂದ ಮತ್ತು ಸಂಬಂಧಪಟ್ಟ ಜನರು ಅದನ್ನು ಸ್ವಚ್ಛವಾಗಿಡಲು ಕಟಿಬದ್ಧರಾಗಿರುವುದರಿಂದ, ಜೊತೆಗೆ ಜನರು ಸಹ ಪ್ರಜ್ಞಾವಂತರಾಗಿರುವುದರಿಂದಲೇ ಮಾರ್ಗವನ್ನು ಶುಭ್ರವಾಗಿ, ಕಲುಷಿತವಾಗದಂತೆ ಕಾಪಾಡುವುದು ಸಾಧ್ಯವಾಗಿದೆ.

ಕಣಿವೆ ಹೋಗುವ ಮುನ್ನ ಪುಷ್ಪವತಿ ನದಿಯನ್ನು ದಾಟಬೇಕು. ಧುಮ್ಮಿಕ್ಕಿ ಹರಿಯುವ ಪುಷ್ಪವತಿ ನದಿಗೆ ಅಡ್ಡವಾಗಿ ಕಟ್ಟಿರುವ ಸೇತುವೆಯ ಮೇಲೆ ನಿಂತರೆ ತಿಳಿಪನ್ನೀರಿನಂತಹ ಶೀತಲ ಜಲ ಮುಖದ ಮೇಲೆ ಸಿಂಪಡಣೆಯಾಗುವುದು. ಅಲ್ಲಿಂದ ಚಾರಣ ಪ್ರಾರಂಭವಾಗುತ್ತದೆ. ಮನುಷ್ಯರಾರೂ ಓಡಾಡಿಲ್ಲವೋ ಎಂಬಂತಿರುವ ಕಾಲುದಾರಿಯೊಂದು ಕಾಡಿನಾಳಕ್ಕೆ ನಮ್ಮನ್ನು ಹೊತ್ತೊಯ್ಯುತ್ತದೆ. ಮಧ್ಯೆ ದೊಡ್ಡದಾದ ನೀರ್ಗಲ್ಲೊಂದನ್ನು (Glacier) ದಾಟಬೇಕು. ನಾವು ಅಲ್ಲಿಗೆ ಹೋದಾಗ ನೀರ್ಗಲ್ಲನ್ನು ದಾಟಲು ಸಹಕಾರಿಯಾಗುವಂತೆ ಹಿಮವನ್ನು ಕೆತ್ತಿ ಪುಟ್ಟ ಕಾಲುದಾರಿಯನ್ನು ಮಾಡುತ್ತಿದ್ದರು. ಅಲ್ಲಿಂದ ಮುಂದೆ ಏರಿಕೆಯ ಹಾದಿಯಾಗಿದ್ದು, ಅದನ್ನು ದಾಟಿದ ನಂತರ ಸಣ್ಣ ತೊರೆಯೊಂದು ಸಿಗುತ್ತದೆ. ಆ ತೊರೆಗಡ್ಡವಾಗಿ ಕಟ್ಟಿರುವ ಮರದ ಸಂಕವನ್ನು ದಾಟಿದರೆ ಅಲ್ಲಿಂದ ಮುಂದಕ್ಕಿರುವುದೆಲ್ಲವೂ ಬರಿಯ ಪದಗಳಲ್ಲಿ ಬಣ್ಣಿಸಲಸಾಧ್ಯವಾದಂತಹ ಅತೀವ ಸುಂದರ ಲೋಕ. ಘಾಂಘರಿಯಾದಿಂದ ಈ ಸಂಕವನ್ನು ತಲುಪಲು ನಾಲ್ಕು ಕಿ.ಮೀ. ಚಾರಣ ಕೈಗೊಳ್ಳಬೇಕು.

ತೊರೆಯ ನೀರು ತಣ್ಣಗಿದ್ದರೂ ಕುಡಿಯಲು ಯೋಗ್ಯವಾಗಿತ್ತು. ಅಕ್ಷರಶಃ ಜನವಸತಿಯಿಲ್ಲದ ಬೆಟ್ಟಗಳಿಂದ ಬರುತ್ತಿದ್ದ ಆ ನೀರು ಮಾಲಿನ್ಯದ ಕುರುಹನ್ನೂ ಕಂಡಿರಲಿಲ್ಲ. ನೀರನ್ನು ಕುಡಿದು ದಣಿವಾರಿಸಿಕೊಂಡು ಸುತ್ತಲಿನ ಸೌಂದರ್ಯವ ಮನಸಾರೆ ಸವಿದು ಸಂಕ ದಾಟಿ ಮುಂದಕ್ಕೆ ಹೋದೆವು.

ಪ್ರಾಯಶಃ ಪುಷ್ಪಗಳ ಕಣಿವೆಗೆ ಕಾಲಿಟ್ಟ ಮೊದಲನೆಯ ಮಾನವರಾದ Frank S Smythe ಮತ್ತು ಅವನ ತಂಡದವರಿಗೂ ಇಂತಹ ಅನುಭವವೇ ಉಂಟಾಗಿರಬೇಕು! ಅಂತ್ಯವೇ ಕಾಣದ ವಿಶಾಲವಾದ ಕಣಿವೆ, ಅಲ್ಲಲ್ಲಿ ಕಂಡುಬರುವ ವಿಧವಿಧವಾದ ಬಣ್ಣಗಳು, ಅತೀವ ಶುದ್ಧ ಗಾಳಿ – ಇವುಗಳು ನರನಾಗಲೀ ಇತರ ಸಾಕುಪ್ರಾಣಿಗಳಾಗಲೀ ಕಾಲಿಟ್ಟಿಲ್ಲದ ದೇವಲೋಕದ ಅತ್ಯಂತ ರಮ್ಯ ಭಾಗದಲ್ಲಿ ನಾವು ನಿಂತಿದ್ದೇವೆಂಬ ಭಾವನೆ ಮನೆಮಾಡಿತ್ತು! ಹಳದಿ, ಕೆಂಪು, ನೀಲಿ ಹೂಗಳು ಅಲ್ಲಲ್ಲಿ ಅರಳಿ ನಿಂತಿದ್ದು, ಸನಿಹಕ್ಕೆ ಬರುವಂತೆ ಕೈಬೀಸಿ ಕರೆಯುತ್ತಿದ್ದವು! ಆ ಪ್ರಕೃತಿಮಾತೆ ಅತ್ಯಂತ ಪುರುಸೊತ್ತಾಗಿದ್ದಾಗ ತಾಳ್ಮೆ, ತನ್ಮಯತೆಗಳಿಂದ, ಅತ್ಯಾನಂದದಿಂದ ಭೂಮಿಯ ಕ್ಯಾನ್ವಾಸಿನ ಮೇಲೆ ಜಾಗರೂಕತೆಯಿಂದ ರಂಗನ್ನು ಚೆಲ್ಲಿ ವರ್ಣಚಿತ್ರವನ್ನು ರಚಿಸಿದಂತಿತ್ತು.

ಕಣಿವೆಯನ್ನು ತಲುಪಿದೊಡನೆ ನಮ್ಮನಮ್ಮಲ್ಲಿಯ ಮಾತು ಸಂಪೂರ್ಣವಾಗಿ ನಿಂತುಹೋಗಿ, ಮೂವರೂ ಕಲ್ಪನಾಲೋಕದಲ್ಲಿ ವಿಹರಿಸಲಾರಂಭಿಸಿದೆವು. ಜಯರಾಮ್ ವಿಶ್ರಾಂತಿಯ ಮೊರೆ ಹೋದರೆ, ಶ್ರೀಧರ್ ಕಣಿವೆಯ ಆಳಕ್ಕೆ ಹೋಗುವ ಹಾದಿ ಹಿಡಿದರು. ನನ್ನ ಕ್ಯಾಮೆರಾಕ್ಕಂತೂ ಅಂದು ಹಬ್ಬ! ವಿಧವಿಧವಾದ ಹೂಗಳನ್ನೆಲ್ಲಾ ಸೆರೆಹಿಡಿಯುತ್ತ, ನಿಸರ್ಗದ ಸೌಂದರ್ಯವನ್ನು ನಿಬ್ಬೆರಗಾಗಿ ನೋಡುತ್ತಾ

ಮೂಕವಿಸ್ಮಿತನಾಗಿ ನಿಧಾನವಾಗಿ ಮನಸ್ಸು ಬಯಸಿದಲ್ಲೆಲ್ಲಾ ಹೆಜ್ಜೆಹಾಕಿದೆ. ಆದರೆ ಪ್ರಪಂಚದ ಯಾವ ಕ್ಯಾಮೆರಾಕ್ಕೂ ನಮ್ಮ ಕಣ್ಣಿಗೆ ಕಾಣುವಂತಹ ರಮಣೀಯ ಸೊಬಗನ್ನು ಸೆರೆಹಿಡಿಯಲು ಸಾಧ್ಯವಿಲ್ಲ. ಕ್ಲಿಕ್ಕಿಸಿದ ಛಾಯಾಚಿತ್ರಗಳಾವುವೂ ವಾಸ್ತವತೆಗೆ ನ್ಯಾಯ ಒದಗಿಸುವುದಿಲ್ಲವೆನ್ನುವಷ್ಟು ಅಂದ ಆ ಹೂಗಳಲ್ಲಿ, ಪರಿಸರದಲ್ಲಿ ತುಂಬಿತ್ತು.

ಸ್ವಲ್ಪ ಸಮಯದ ಬಳಿಕ ನನಗೂ ಕಣಿವೆಯ ಆಳಕ್ಕೆ ಹೋಗಬೇಕು, Joan Margaret Legge ಸಮಾಧಿಯನ್ನು ಕಾಣಬೇಕು ಎಂಬ ಉತ್ಕಟ ಬಯಕೆಯಾಯಿತು. ಆದರೆ ಸಮಾಧಿಸ್ಥಳವು ಎಲ್ಲಿದೆಯೆಂದು ನಕಾಶೆಯಲ್ಲಿ ನೋಡಿಕೊಳ್ಳುವುದು ಮರೆತುಹೋಗಿತ್ತು. ನಿಜಕ್ಕೂ, ಅದು ಗೊತ್ತಿದ್ದರೂ ಈ ಕನಸಿನ ಲೋಕದಲ್ಲಿ ಅದನ್ನೇ ಹುಡುಕಿಕೊಂಡು ಹೋಗುವುದು ಅಸಾಧ್ಯವಾದ ಕಾರ್ಯವಾಗಿತ್ತು. ಹಾಗಾಗಿ ಶ್ರೀಧರ್ ಹೋದ ಹಾದಿಯನ್ನೇ ಅನುಸರಿಸಿ ಮುನ್ನಡೆದೆ.

ಮಧ್ಯೆ ಸಣ್ಣದೊಂದು ನೀರ್ಗಲ್ಲನ್ನು ದಾಟಬೇಕಿತ್ತು. ಅದರಾಚೆಗಿದ್ದ ಶ್ರೀಧರ್ ಅದೇನೋ ಹೇಳಿದರಾದರೂ ಸರಿಯಾಗಿ ಕೇಳಿಸಿಕೊಳ್ಳಲಾಗಲಿಲ್ಲ. ಇನ್ನೇನು ನೀರ್ಗಲ್ಲ ಮೇಲೆ ಕಾಲಿಡಲು ಮುಂದಾಗುತ್ತಿದ್ದಂತೆಯೇ ಮತ್ತೊಂದು ಬದಿಯಿಂದ ಬರುತ್ತಿದ್ದ ಮತ್ತೊಬ್ಬ ಕೂಗಿ ನನ್ನನ್ನು ತಡೆದ. ನಾನು ಕಾಲಿಡಬೇಕಿದ್ದ ಸ್ಥಳದಲ್ಲಿ ನೀರ್ಗಲ್ಲು ತೀರಾ ಕೃಶವಾಗಿದ್ದು ಯಾವಾಗ ಬೇಕಾದರೂ ಬೀಳಬಹುದಾಗಿತ್ತು! ನಾನದನ್ನು ಗಮನಿಸಿಯೇ ಇರಲಿಲ್ಲ! ಅಪ್ಪಿತಪ್ಪಿ ಅದರ ಮೇಲೆ ಕಾಲಿಟ್ಟಿದ್ದರೆ ಆಮೇಲೆ Joan Legge ಯ ರೀತಿ ನನ್ನದೂ ಸಮಾಧಿ ಕಟ್ಟಲು ಮುಂದೆ ನನ್ನ ಅಕ್ಕ ಬರಬೇಕಾದ ಪರಿಸ್ಥಿತಿ ಬರುತ್ತಿತ್ತೇನೋ! ದೇವರಂತೆ ಬಂದು ನನ್ನನ್ನು ಕಾಪಾಡಿದ ಆ ಅಜ್ಞಾತ ವ್ಯಕ್ತಿಗೆ ಕೃತಜ್ಞತೆಯನ್ನು ತಿಳಿಸಿ, ಅವನು ಸೂಚಿಸಿದ ಮತ್ತೊಂದು ಕಡೆಯಿಂದ ನೀರ್ಗಲ್ಲನ್ನು ದಾಟಿ ಮುಂದಕ್ಕೆ ಹೋದೆ.

ಕಣಿವೆಯ ಮುಂದಿನ ಭಾಗದಲ್ಲಿ ಹೂಗಳ ವೈವಿಧ್ಯತೆಯಿಲ್ಲದಿದ್ದರೂ ಬೆರಳೆಣಿಕೆಯಷ್ಟೇ ಜನರು ಇಷ್ಟು ದೂರ ಬಂದಿದ್ದರು. ಪುಟ್ಟ ಬಂಡೆಯೊಂದರ ಮೇಲೆ ಕುಳಿತು ಸುತ್ತಲೂ ನೋಡಿದರೆ ಕಣ್ಣಿಗೆ ಕಂಡಿದ್ದು ಕೇವಲ ಪರ್ವತದ ಸಾಲುಗಳು, ಹಸಿರು, ನೀರ್ಗಲ್ಲುಗಳು, ಆಗಸ, ಹೂಗಳು ಮಾತ್ರ. ಏಕಾಂತದ ಸಾಂಗತ್ಯವನ್ನು ಹೃದಯಪೂರ್ವಕವಾಗಿ ಬಯಸಿ, ಅನುಭವಿಸಲು ಇಷ್ಟಪಡುವ ಯಾರಿಗೇ ಆದರೂ ಅದು ಹೇಳಿ ಮಾಡಿಸಿದಂತಹ ಜಾಗ. "ಪುಷ್ಪಗಳ ಕಣಿವೆಯು ನಿನ್ನನ್ನು ಕವಿಹೃದಯದವನಾಗಿ ಪರಿವರ್ತಿಸುತ್ತದೆ" ಎಂದು ದೆಹಲಿಯಿಂದ ಬರುವಾಗ ಸಹಪ್ರಯಾಣಿಕ ಹೇಳಿದ ಮಾತು ಮತ್ತೊಮ್ಮೆ ನೆನಪಾಯಿತು. ಆ ಕ್ಷಣದಲ್ಲಿ ಕವನವೊಂದನ್ನು ಬರೆಯದಿದ್ದರೆ ನನ್ನ ಬದುಕಿಗೆ ಅರ್ಥವೇ ಇರುವುದಿಲ್ಲವೆಂಬ ಭಾವನೆ ಸಹ ಉಂಟಾಯಿತು. ಅದೃಷ್ಟವಶಾತ್, ಸಂಪರ್ಕ ಸಿಗದಿದ್ದರೂ ಜೊತೆಗಿರಲಿ

ಎಂದು ಜೇಬಿನಲ್ಲಿ ಇಟ್ಟುಕೊಂಡಿದ್ದ ಮೊಬೈಲ್ ನನ್ನ ಸಹಾಯಕ್ಕೆ ಬಂತು. ಏಕಾಂತದ ಕ್ಷಣವನ್ನು ಆಸ್ವಾದಿಸುತ್ತಲೇ ಮೊಬೈಲ್‌ನಲ್ಲಿ ಕುಟ್ಟುತ್ತಾ ಸಾಲುಗಳನ್ನು ಜೋಡಿಸತೊಡಗಿದೆ.

ಹಾಗೆಯೇ ಆಜೀವಪರ್ಯಂತ ಅಲ್ಲೇ ಕುಳಿತುಬಿಡುತ್ತಿದ್ದೇನೋ! ದೂರದಿಂದ ಶ್ರೀಧರ್ ಕೂಗುಹಾಕಿದ್ದು ಕೇಳಿಸಿತು. ಏಕಾಂತದ ಕನಸಿನ ಲೋಕವನ್ನು ಬಿಟ್ಟು ವಾಸ್ತವಕ್ಕೆ ಮರಳಿ ಬಂದರೆ ಮಳೆಯ ಮೋಡ ಕವಿಯುತ್ತಿದ್ದುದು ಸ್ಪಷ್ಟವಾಗಿ ತೋರುತ್ತಿತ್ತು. ಕ್ಯಾಮೆರಾ ಜೊತೆಗಿದ್ದುದರಿಂದಲೂ, ಪರ್ವತದ ಬಿರುಮಳೆ ಎಡೆಬಿಡದೆ ಸುರಿಯುವುದೆಂಬ ಅರಿವಿನಿಂದಲೂ, ಮಳೆಗೆ ಹೆದರಿ ಮರಳುವ ಮನಸ್ಸು ಮಾಡಲೇಬೇಕಾಯಿತು. ಅಲ್ಲಿಂದ ಎದ್ದು ಹೋಗದಂತೆ ತಡೆಯುತ್ತಿದ್ದ ಪ್ರಕೃತಿಯ ಚೆಲುವನ್ನು ಮತ್ತೊಮ್ಮೆ ಕಣ್ತುಂಬಿಕೊಂಡು, ಒಲ್ಲದ ಮನಸ್ಸಿನಿಂದ ನಿಧಾನವಾಗಿ ಬಂದ ದಾರಿಯಲ್ಲೇ ಮರಳಿ ಹೊರಟೆ. ಅದೇ ನೀರ್ಗಲ್ಲು, ಅವೇ ಗಿಡಗಳು ಈಗ ಮೋಡದ ವಾತಾವರಣದಲ್ಲಿ ಬೇರೊಂದು ರೀತಿಯಾಗಿ, ಆದರೆ ಅಷ್ಟೇ ಆಕರ್ಷಕವಾಗಿ ಕಾಣುತ್ತಿದ್ದವು!

ಶ್ರೀಧರ್ ಮತ್ತು ಜಯರಾಮ್ ಇಬ್ಬರೂ ಹೊರಡಲು ಅಣಿಯಾಗಿ ನಿಂತಿದ್ದರು. ನಾನು ಅವರ ಬಳಿ ಹೋಗಲು ಇನ್ನೊಂದು ಹತ್ತು ನಿಮಿಷ ತಡಮಾಡಿದ್ದರೆ ನನ್ನನ್ನಿಲ್ಲಿ ಬಿಟ್ಟು ಅವರಿಬ್ಬರೇ ಮರಳುವ ತೀರ್ಮಾನ ಕೂಡಾ ಮಾಡಿದ್ದರಂತೆ! ವರುಣದೇವ ಅಂದು ಕಣಿವೆಯಲ್ಲಿದ್ದವರೆಲ್ಲರಿಗೂ ಹೆದರಿಸಿ ಘಾಂಘರಿಯಾ ಹಾದಿ ಹಿಡಿಯುವಂತೆ ಮಾಡಿದ್ದ. ಹಾಗಾಗಿ ಎಲ್ಲ ಜನರೂ ಒಂದೇ ದಿಕ್ಕಿನಲ್ಲಿ ನಡೆಯಲಾರಂಭಿಸಿದರು.

ಪುಷ್ಪಗಳ ಕಣಿವೆಯನ್ನು ನೋಡಿ ಆಸ್ವಾದಿಸಲು ಒಂದು ದಿನದ ಸಮಯ ಖಂಡಿತ ಸಾಲದು. ಅದಕ್ಕೇ ಉತ್ತರಾಖಂಡದ ಅರಣ್ಯ ಇಲಾಖೆಯವರು ಮೊದಲಿಗೆ ಮೂರು ದಿನಗಳ ಪರವಾನಗಿಯನ್ನು ಕೊಡುವುದು ಎಂದು ಈಗ ನನಗೆ ತೋಚಿತು. ಆದರೆ ಬರುವ ಪ್ರವಾಸಿಗರಲ್ಲಿ ಬಹುತೇಕರಿಗೆ (ನಮ್ಮನ್ನೂ ಸೇರಿ) ಸಮಯಾಭಾವವಿರುವುದರಿಂದ ಈ ಸೊಬಗಿನ ಒಂದು ಚಿಕ್ಕ ಅಂಶವನ್ನಷ್ಟೇ ಕಂಡು ಆನಂದಿಸಿ ಅನುಭವಿಸಲು ಸಾಧ್ಯ. ಅಷ್ಟೇ ಅಲ್ಲದೆ ಇಲ್ಲಿರುವ ಹೂವುಗಳ ಪ್ರಭೇದಗಳೂ ಅಪಾರ. ಅದನ್ನು ಸ್ವತಃ ತಿಳಿಯಲು ಜೀವಶಾಸ್ತ್ರದ ಗಂಧಗಾಳಿಯೂ ಇಲ್ಲದ ನನ್ನಿಂದ ಅಸಾಧ್ಯವಾದ್ದರಿಂದ ಜೀವಶಾಸ್ತ್ರಸಂಬಂಧಿ ವಿಷಯದಲ್ಲಿ ಸಂಶೋಧನೆ ಮಾಡುತ್ತಿರುವ ನನ್ನಿಬ್ಬರು ಹೃನ್ಮಿತ್ರರನ್ನು ಇಲ್ಲಿಗೊಮ್ಮೆ ಕರೆತಂದು ಅವರಿಂದಲೇ ಈ ಹೂವುಗಳ ವಿಷಯವನ್ನೆಲ್ಲಾ ಕಲಿಯಬೇಕೆಂಬ ಬಯಕೆ ಸಹ ಮೂಡಿತು.

ಬೆಳಿಗ್ಗೆ ಹಾದುಹೋಗುವಾಗ ನಿರ್ಮಾಣದ ಹಂತದಲ್ಲಿದ್ದ ನೀರ್ಗಲ್ಲ ಮೇಲಿನ ದಾರಿ ಈಗ ಸಜ್ಜಾಗಿತ್ತು. ಅದರ ಮೇಲೆ ನಡೆಯುವುದೇ ಮಹದಾನಂದ. ನಿಧಾನವಾಗಿ ಹಿಮ್ಮಡಿಯನ್ನು ಒತ್ತಿಹಿಡಿದು ಸಮತೋಲನವನ್ನು ಕಳೆದುಕೊಳ್ಳದೆ ನಡೆಯಬೇಕು. ಹೆಚ್ಚು ಭಾರ ಬಿದ್ದಾಗ ಪಾದ ಹಿಮದೊಳಗೆ ಕೆಲವು ಅಂಗುಲಗಳಷ್ಟು ಆಳಕ್ಕೆ ಹೋಗುತ್ತದೆ. ಆಗ ತಣ್ಣಗಿರುವ ಹಿಮ ಬೂಟಿನ ಮೇಲಿನ ಚರ್ಮಕ್ಕೆ ತಾಗಿ ಚುರುಗುಟ್ಟಿಸುತ್ತದೆ! ಈ ನಡುವೆ ಹಿಮವನ್ನು ಕೈಯಲ್ಲಿ ಹಿಡಿದುಕೊಳ್ಳಬೇಕೆನ್ನುವ ನನ್ನ ಮಂಗಾಟ ಬೇರೆ! ನೀರ್ಗಲ್ಲು ಅದೆಷ್ಟು ದೊಡ್ಡದಿತ್ತೆಂದರೆ ಅದರ ಮೇಲೆ ನಾವು ನಿಂತಿದ್ದ ಕಡೆಯಿಂದ ಜಾರಿದರೆ ನದಿಯ ಆಚೆ ದಡ ಸೇರಬಹುದಾಗಿತ್ತು (ಅದೃಷ್ಟ ಚೆನ್ನಾಗಿದ್ದರೆ ಮಾತ್ರ! ಇಲ್ಲವಾದಲ್ಲಿ ನೇರವಾಗಿ ನದಿಯೊಳಗೆ ಸಹ ಬೀಳಬಹುದು). ಗಾತ್ರದಲ್ಲೂ ಈ ನೀರ್ಗಲ್ಲು ಅಗಾಧವಾಗಿದ್ದು, ಯಾವುದೇ ಕಾರಣಕ್ಕೂ ಚಳಿಗಾಲದವರೆಗೂ ಕರಗುವುದಿಲ್ಲವೆಂಬಂತೆ ಕಾಣುತ್ತಿತ್ತು.

ಇಳಿಜಾರಿನ ಹಾದಿ ಬಹು ಸುಲಭವಾಗಿತ್ತು. ಬಹಳ ಬೇಗ ಪುಷ್ಪವತಿ ನದಿಯ ಸೇತುವೆಯನ್ನು ತಲುಪಿಬಿಟ್ಟೆವು. ಮುಂದಕ್ಕೆ ಗುಲಾಬಿಯ ಜಾತಿಯ ಹೂವೊಂದು ಮರದ ಮೇಲೆ ಕಂಡು, ಸುತ್ತಮುತ್ತ ಕಣ್ಣಾಡಿಸಿದಾಗ, ಅದೇ ರೀತಿ ಹಲವಾರು ಹೂಗಳಿದ್ದುದನ್ನು ನೋಡಿದೆವು. (ಆಗ ನಮಗೆ ತಿಳಿದಿರದ ಸಂಗತಿಯೆಂದರೆ, ಈ ಹೂವಿನ ದಳ ಚರ್ಮಕ್ಕೆ ಸೋಕಿದರೆ ಅಸಾಧ್ಯ ತುರಿಕೆ ಉಂಟಾಗುವುದೆಂದು! ಪುಣ್ಯಕ್ಕೆ ಹೂವು ನಮ್ಮ ಕೈಗೆಟುಕುವಷ್ಟು ಸನಿಹದಲ್ಲಿರಲಿಲ್ಲ.) ಹಾಗೆಯೇ ಹಾವಿನ ಹೆಡೆಯಂತಿರುವ ಮತ್ತೊಂದು ಹೂವು ಸಹ ಕಣ್ಣಿಗೆ ಬಿತ್ತು. ಹಿಂದಿನ ದಿನದ ಚಾರಣದ ವೇಳೆಯಲ್ಲಿ ಯಾತ್ರಿಕನೊಬ್ಬನ ಕೈಲಿ ಈ ಹೂವನ್ನು ನೋಡಿದ್ದರಿಂದಲೇ ನಮಗೆ ಇದು ಹೂವೆಂದು ತಿಳಿದದ್ದು. ಇಲ್ಲವಾದಲ್ಲಿ ಖಂಡಿತವಾಗಿಯೂ ಮೊದಲ ನೋಟದಲ್ಲಿ ಸರ್ಪವೆಂದೇ ಬಗೆಯುತ್ತಿದ್ದೆವು.

ಬೇಗನೇ ಏಕಾಂತದ ಜಗತ್ತನ್ನು ಬಿಟ್ಟು ಮರಳಿ ಘಾಂಘರಿಯಾದ ಜನಸಂದಣಿಯಲ್ಲಿ ಹೊಕ್ಕಿಕೊಂಡೆವು. ಕತ್ತಲಾಗಲು ಇನ್ನೂ ಕನಿಷ್ಟ ೪-೫ ಗಂಟೆಗಳ ಕಾಲವಿತ್ತಾದರೂ ಕಾರ್ಮೋಡ ನಮ್ಮ ದಿನದ ಪ್ರವಾಸವನ್ನು ಬೇಗನೇ ಮೊಟಕುಗೊಳಿಸಿತ್ತು. ರಘುವೀರ್ ಅವರನ್ನೊಮ್ಮೆ ಕಂಡು ನಮ್ಮ ದಿನದ ಅನುಭವಗಳ ವರದಿಯೊಪ್ಪಿಸಿ, ನಂತರ ಹೋಟೆಲ್‌ಗೆ ಮರಳಿದೆವು.

ಊಟ ಮಾಡಿ, ಸ್ವಲ್ಪಕಾಲ ಸಿಹಿನಿದ್ದೆ ಮಾಡೋಣವೆಂದು ಕೊಠಡಿಯನ್ನು ಹೊಕ್ಕಿ, ಬೆಚ್ಚಗಿನ ಚಾದರದೊಳಗೆ ಸುಖವಾಗಿ ಮಲಗಿದರೆ, ಅಪೂರ್ಣಗೊಂಡಿದ್ದ ಕವಿತೆಯ ನೆನಪಾಯಿತು. ದೈಹಿಕವಾಗಿ ಘಾಂಘರಿಯಾದಲ್ಲೇ ಇದ್ದರೂ ಸಹ ಮನಸ್ಸನ್ನು ಮತ್ತೆ ಕಣಿವೆ ಕಳುಹಿಸಿಬಿಟ್ಟು, ಅಲ್ಲಿನ

ನೋಟಗಳನ್ನೆಲ್ಲಾ ಒಳಗಣ್ಣಿನಲ್ಲೇ ನೋಡುತ್ತಾ ಕವಿತೆಯನ್ನು ಪೂರ್ಣಗೊಳಿಸಿದಾಗ ಸಂತೃಪ್ತಿಯ ಅನುಭೂತಿ.

ಸಂಜೆ ಸಾಕ್ಷ್ಯಚಿತ್ರ ನೋಡಲು ಹೋದಾಗ ನಾವು ಬೆಳಿಗ್ಗೆ ಕಂಡಿದ್ದ ಅನೇಕ ಹೂಗಳನ್ನು ಗುರುತಿಸಲು ಸಾಧ್ಯವಾಯಿತು. ಪುಷ್ಪಗಳ ಕಣಿವೆಯಲ್ಲಿ ಅನೇಕ ಪ್ರಾಣಿಗಳು ವಾಸಿಸುತ್ತವಾದರೂ ಅವುಗಳ ದರ್ಶನ ನಮಗಾಗಲಿಲ್ಲ. ಕಣಿವೆಯ ಎತ್ತರ ೩೫೦೦ ಮೀಟರ್‌ನಿಂದ ೬೦೦೦ ಮೀಟರ್‌ಗಳವರೆಗೂ ಇದ್ದು, ಎಲ್ಲ ಕಡೆ ಪ್ರವಾಸಿಗರು ಹೋಗಲು ಸಾಧ್ಯವಿಲ್ಲ. ಹಲವೆಡೆ ವಿಷಪೂರಿತ ಗಿಡಗಳಿದ್ದು, ಅಲ್ಲಿಗೆ ಯಾರೂ ಹೋಗುವುದಿಲ್ಲ. ಬಹುಶಃ ಪಶುಸಂಕುಲವು ಈ ಅಜ್ಞಾತ ಸ್ಥಳಗಳಲ್ಲಿ ವಾಸವಾಗಿದೆಯೇನೋ. ಸಂಶೋಧನೆಯ ಕಾರ್ಯಕ್ಕಾಗಿ ಅಲ್ಲಿಗೆಲ್ಲ ಹೋಗುವವರು ಇದ್ದಾರೆಂದು ಅನೇಕ ಪುಸ್ತಕಗಳಿಂದ, ಲೇಖನಗಳಿಂದ ತಿಳಿದುಬರುತ್ತದೆಯೇ ಹೊರತು, ಸಾಮಾನ್ಯ ಪ್ರವಾಸಿಗ ಅಂತಹ ಜಾಗಗಳನ್ನರುಸತ್ತ ಹೋಗುವ ಧೈರ್ಯ ಮಾಡಲಾರ.

# ಹಿಮಸರೋವರದ ತಟದಲ್ಲಿ ದೇವಭಕ್ತಿ

ಮುಂದಿನ ಪಯಣ, ಹಿಂದೂಗಳಿಗೂ ಸಿಖ್ಖರಿಗೂ ಪವಿತ್ರವಾದ ಸ್ಥಳವಾದ ಹೇಮಕುಂಡ ಸಾಹಿಬ್‌ಗೆ. ಸಿಖ್ ಪಂಥದ ಹತ್ತನೆಯ ಧರ್ಮಗುರು ಗೋವಿಂದ ಸಿಂಹರು ತಮ್ಮ ಹಿಂದಿನ ಜನ್ಮದಲ್ಲಿ ಇಲ್ಲಿ ಕುಳಿತು ತಪಸ್ಸು ಮಾಡಿದ್ದರೆಂಬ ಪ್ರತೀತಿಯಿದೆ. "ಲೋಕಪಾಲ" ಎಂಬ ಹೆಸರನ್ನೂ ಪಡೆದಿರುವ ಇದೇ ಜಾಗದಲ್ಲೇ ಲಕ್ಷ್ಮಣನೂ ಸಹ ತಪಸ್ಸು ಮಾಡಿದ್ದನೆಂಬ ಕಥೆಯುಂಟು. ಸಮುದ್ರಮಟ್ಟದಿಂದ ಸುಮಾರು ೪೬೦೦ ಮೀಟರ್ ಎತ್ತರವಿರುವ ಹೇಮಕುಂಡದಲ್ಲಿ ಗುರುದ್ವಾರವೂ, ಲಕ್ಷ್ಮಣನ ಮಂದಿರವೂ ಅಕ್ಕಪಕ್ಕದಲ್ಲಿ ನೆಲೆಸಿವೆ.

ಹೇಮಕುಂಡದ ಹೆಸರು ಮೂಲತಃ "ಹಿಮಕುಂಡ" ಎಂದು ಆಗಿತ್ತೇನೋ! ಸಂಸ್ಕೃತದಲ್ಲಿ ಕುಂಡವೆಂದರೆ ಸರೋವರ ಎಂದರ್ಥ. ಹೇಮಕುಂಡ್ ಸಾಹಿಬ್‌ನಲ್ಲಿರುವ ಸರೋವರದಲ್ಲಿ ಯಾವಾಗಲೂ ಹಿಮಗಡ್ಡೆಗಳಿರುವುದರಿಂದ ಹಿಮಕುಂಡವೆಂಬ ಹೆಸರು ಚಾಲ್ತಿಗೆ ಬಂದು, ನಂತರದ ದಿನಗಳಲ್ಲಿ ಮಾರ್ಪಾಡಾಗಿ ಹೇಮಕುಂಡವಾಗಿರಬಹುದೆಂಬುದು ನನ್ನ ಅನಿಸಿಕೆ.

ಘಾಂಘರಿಯಾದಿಂದ ಕೇವಲ ೬ ಕಿ.ಮೀ. ದೂರದಲ್ಲಿರುವ ಹೇಮಕುಂಡಕ್ಕೆ ಕಾಲ್ನಡಿಗೆಯಲ್ಲಿ ಹೋಗುವುದು ಸಾಮಾನ್ಯ ಕೆಲಸವಲ್ಲ. ಆರು ಕಿ.ಮೀ. ಸಾಗುವಷ್ಟರಲ್ಲೇ ನಾವು ಒಂದೂವರೆ ಕಿ.ಮೀ. ಗಳಷ್ಟು ಎತ್ತರವನ್ನು ಏರುತ್ತೇವೆಂದರೆ ಹಾದಿಯ ಏರಿಕೆ ಹೇಗಿದೆಯೆಂಬ ಊಹೆ ಮಾಡಬಹುದು. ಪ್ರತಿನಿತ್ಯವೂ ಯಾತ್ರಿಗಳು "ವಾಹೇ ಗುರು"ವನ್ನು ಸ್ಮರಿಸುತ್ತ ತಂಡೋಪತಂಡವಾಗಿ ಹೋಗುವುದನ್ನು ನೋಡುತ್ತಿದ್ದರೆ ನಮಗೂ ಭಕ್ತಿ ಉಕ್ಕುವುದು. ಕುದುರೆ ಸವಾರಿಯ ವ್ಯವಸ್ಥೆ ಲಭ್ಯವಿದ್ದರೂ ಬಹಳಷ್ಟು ಮಂದಿ ನಡೆದೇ ಹೋಗುವರು. ನಮ್ಮಲ್ಲಿ ಹೇಗೆ ಮಾನಸ ಸರೋವರ, ಕೈಲಾಸ ಪರ್ವತ ಯಾತ್ರೆ ಕೈಗೊಳ್ಳುವೆವೋ, ಹಾಗೆಯೇ ಜೀವನದಲ್ಲಿ ಒಮ್ಮೆಯಾದರೂ ಹೇಮಕುಂಡ ಸಾಹಿಬ್‌ಗೆ ಭೇಟಿ ಕೊಡಬೇಕೆಂದು ಪ್ರತಿಯೊಬ್ಬ ಸಿಖ್ಖನ ಅಭಿಲಾಷೆಯಂತೆ. ಅನೇಕರು ಪ್ರತಿವರ್ಷ ಹಾಜರಿ ಹಾಕುವರು. ವರ್ಷಕ್ಕೆರಡು ಬಾರಿ ಬರುವವರ ಸಂಖ್ಯೆಯೂ ಕಡಿಮೆಯಲ್ಲವಂತೆ. ಗೋವಿಂದಘಾಟ್‌ನಲ್ಲಿ ನಿಂತಿರುವ ವಾಹನಗಳನ್ನು ಕಂಡು ಅದೆಷ್ಟು ಜನ ಯಾತ್ರೆ ಕೈಗೊಳ್ಳುತ್ತಿದ್ದಾರೆಂದು ಲೆಕ್ಕ ಹಾಕಬಹುದು. ಅನೇಕ ವಾಹನಗಳು – ದ್ವಿಚಕ್ರ ವಾಹನಗಳು ಸಹ – ದೂರದ ಪಂಜಾಬ್ ರಾಜ್ಯದಿಂದ ಬರುತ್ತವೆ. ಹೇಮಕುಂಡದ ಯಾತ್ರಿಕರ ವಾಹನವನ್ನು ಅದಕ್ಕೆ ಸಿಕ್ಕಿಸಿರುವ ಖಾಲ್ಸಾ ಧ್ವಜವನ್ನು ನೋಡಿಯೇ ಗುರುತಿಸಬಹುದು. ಯಾತ್ರೆಯ ತಿಂಗಳುಗಳಲ್ಲಿ ಸಿಖ್ ಜನ ಹೆದ್ದಾರಿಯಲ್ಲಿ ನೂರಾರು ಕಡೆ ತಾತ್ಕಾಲಿಕ

"ಲಂಗರ್" ಅರ್ಥಾತ್ ಅಡುಗೆಮನೆಗಳನ್ನು ಸ್ಥಾಪಿಸಿ, ಎಲ್ಲ ಯಾತ್ರಿಕರಿಗೂ ಉಚಿತವಾಗಿ ಆಹಾರವನ್ನು ಒದಗಿಸುತ್ತಾರೆ. ಈ ಕಲ್ಯಾಣ ಕಾರ್ಯಕ್ಕಾಗಿ ಅನೇಕ ಸಂಘಗಳು ಬಹಳ ಶ್ರಮಿಸುತ್ತವೆ.

ದಾರಿ ಕಠಿಣವಾಗಿದೆಯೆಂದು ಗೊತ್ತಿದ್ದರಿಂದ ಹೇಮಕುಂಡಕ್ಕೆ ಹೋಗಲು ಕುದುರೆಗಳ ಸಹಾಯ ಪಡೆಯೋಣವೆಂದು ತೀರ್ಮಾನ ಕೈಗೊಂಡೆವು. ಮೂರು ಕುದುರೆಗಳ ವ್ಯವಸ್ಥೆಯೂ ಬಹುಬೇಗ ನಡೆದುಹೋಯಿತು. ಇವೆಲ್ಲವೂ ಪುಷ್ಪಗಳ ಕಣಿವೆಯಿಂದ ಹಿಂದಿರುಗಿದ ಕೆಲವೇ ಗಂಟೆಗಳಲ್ಲಿ ಮಾಡಿ ಮುಗಿಸಿ, ನೆಮ್ಮದಿಯಾಗಿ ನಿದ್ದೆ ಮಾಡಿದೆವು.

೧೪ ಜೂನ್ ೨೦೧೩... ಬೆಳಿಗ್ಗೆ ಅಂತಹ ಅವಸರವೇನಿರಲಿಲ್ಲ. ನಿಧಾನವಾಗಿ ತಯಾರಾಗುತ್ತಾ, ಈ ಕುದುರೆಗಳು ಕೇದಾರನಾಥದ "ಕಮಲಿ"ಯಂತೆಯೇ ಇರುವುದೇ ಅಥವಾ ಇನ್ನೂ ತುಂಟ ಕುದುರೆಗಳೇ ಎಂದು ಯೋಚಿಸಿ ನಗುತ್ತಾ ತಿಂಡಿ ತಿಂದು ಕುದುರೆಯವನನ್ನು ಅರಸುತ್ತಾ ಹೊರಟೆವು.

ಕುದುರೆಯವ ಮೂರು ಕುದುರೆಗಳೊಂದಿಗೆ ತಯಾರಾಗಿದ್ದ. ಕೇದಾರನಾಥದ ಕುದುರೆಗಳಿಗಿಂತ ಇವು ಹೆಚ್ಚೇನೂ ವಿಭಿನ್ನವಲ್ಲದಿದ್ದರೂ ಹೆಸರು ವಿಚಿತ್ರವಾಗಿತ್ತು. ನನ್ನ ಕುದುರೆಯ ಹೆಸರು "ಟಿಕ್ಕೂ". ಸೌಮ್ಯವಾಗಿ, ಶಾಂತವಾಗಿ ಕಾಣುತ್ತಿದ್ದ "ಟಿಕ್ಕೂ"ವನ್ನು ಏರಿ ಕುಳಿತೊಡನೆಯೇ ಮತ್ತೊಮ್ಮೆ ಕುದುರೆಸವಾರಿಯಲ್ಲಿ ಉತ್ಸಾಹ ಮೂಡಿತು. ಹುರುಪಿನಿಂದ ಲಗಾಮನ್ನು ಕೈಯಲ್ಲಿ ಹಿಡಿದು ಕುದುರೆಯನ್ನು ಹತೋಟಿಗೆ ತೆಗೆದುಕೊಂಡು ಹೊರದಲನುವಾದೆ.

ಗುಡ್ಡಗಾಡಿನ ದುರ್ಗಮ ಹಾದಿಯಲ್ಲಿ ಕುದುರೆಯ ಮೇಲೆ ಕುಳಿತು ಸಾಗುವಾಗ ಆಗುವ ಭಯದ ತೀವ್ರತೆ ಅಧಿಕವೇ. ಅದರಲ್ಲೂ ಪ್ರಪಾತ ಕಣ್ಣಿಗೆ ಕಾಣುತ್ತಿರುವಾಗ ಆತಂಕ ಇನ್ನೂ ಹೆಚ್ಚುತ್ತದೆ. ಅದೆಷ್ಟು ಎತ್ತರಕ್ಕೆ ಹೋದರೂ ಕೆಳಗಿರುವ ಘಾಂಘರಿಯಾ ಊರಿನ ಕಟ್ಟಡಗಳ ಛಾವಣಿ ಕಣ್ಣಿಗೆ ಬೀಳುತ್ತಲೇ ಇತ್ತು. ಮೇಲೆ ಹೋದಂತೆಲ್ಲಾ ಕೆಳಗಿನ ದೃಶ್ಯ ಚಿಕ್ಕದಾಗುವುದಲ್ಲದೆ ದುಗುಡ ಮೂಡಿಸುತ್ತಿತ್ತು. ಜೊತೆಗೆ ಈ ಕುದುರೆಗಳಿಗೆ ಪ್ರಪಾತದ ಅಂಚಿನಲ್ಲಿ ನಡೆಯಲು ಅದೇನು ಆಸಕ್ತಿಯೋ ನಾನರಿಯೆ! ಒಂದೇ ಒಂದು ಹೆಜ್ಜೆ ತಪ್ಪಾಗಿ ಇಟ್ಟರೂ ಕುದುರೆ ಮತ್ತು ಸವಾರ – ಇಬ್ಬರೂ ಬಿದ್ದು, ಸಾವನ್ನಪ್ಪಿ, ದೇಹ ಸಾವಿರಾರು ಹೋಳುಗಳಾಗುವುದು ಖಚಿತ. ಆ ಆಲೋಚನೆಯಿಂದಲೇ ಮೈನಡುಕ ಹುಟ್ಟುತ್ತಲಿತ್ತು.

"ಟಿಕ್ಕೂ" ಸಹ ಅತ್ಯಂತ ತುಂಟ ಕುದುರೆಯಾಗಿತ್ತು. ಒಮ್ಮೊಮ್ಮೆ ಹುರುಪು ಹೆಚ್ಚಾಗಿ ಓಡಲಾರಂಭಿಸಿದರೆ ಸವಾರನಾದ ನನಗೆ ಉಂಟಾಗುತ್ತಿದ್ದ ಗಾಬರಿ ಹೇಳತೀರದು. ಓಡುವಾಗ ಅದಕ್ಕೆ ಸುತ್ತಮುತ್ತಲಿನ ಜನರ

ಪರಿವೆಯಿರುತ್ತಿರಲಿಲ್ಲ. ಹತ್ತಿರ ಇದ್ದರವನ್ನೆಲ್ಲಾ ತಳ್ಳುತ್ತ, ನನ್ನ ಮಂಡಿಚಿಪ್ಪಿಗೆ ಅವರ ಭುಜ, ತಲೆಗಳನ್ನು ಹೊಡೆಸುತ್ತ, ಇತರರು ನನ್ನ ಮೇಲೆ ಬೈಗುಳಗಳನ್ನು ಸುರಿಸುವಂತೆ ಮಾಡುವುದು ಅದಕ್ಕೆ ಅಂದು ಬಲು ಇಷ್ಟವಾದ ಕಾಯಕವಾಗಿತ್ತು. ಮಾಲೀಕ ಎರಡು–ಮೂರು ಬಾರಿ ಗದರಿ, ಒಂದು ಏಟು ಕೊಟ್ಟ ಮೇಲೆಯೇ ಅದು ಅಂಕೆಗೆ ಬರುತ್ತಿದ್ದುದು. ಹಿಂದೆ ಬರುತ್ತಿದ್ದ ಜಯರಾಮ್ ಮತ್ತು ಶ್ರೀಧರ್ ನನ್ನ ಪಾಡು ನೋಡಿ ಬಿದ್ದು ಬಿದ್ದು ನಗುತ್ತಿದ್ದರು! ನನಗಂತೂ ಜೀವಸಹಿತ ಮರಳುವ ನಂಬಿಕೆ ಕ್ಷಣಕ್ಷಣಕ್ಕೂ ಕಡಿಮೆಯಾಗುತ್ತಿತ್ತು.

ಎತ್ತರೆತ್ತರಕ್ಕೆ ಹೋದಾಗ ಆಮ್ಲಜನಕದ ಕೊರತೆಯಿಂದ ಆಯಾಸ ಹೆಚ್ಚಾಗುತ್ತದೆ. ಉಸಿರಾಟ ಕಷ್ಟಕರವಾಗುತ್ತದೆ. Acute Motion Sickness ಎಂದು ಕರೆಯಲ್ಪಡುವ ಈ ಲಕ್ಷಣ, ಸರಿಯಾಗಿ ಗಮನಹರಿಸದಿದ್ದರೆ ಅಪಾಯಕಾರಿಯಾಗಿಬಿಡುವುದು ಸಹ. ಲದಾಖ್ ಪ್ರಾಂತ್ಯದಲ್ಲಿ ೧೮೦೦೦ ಅಡಿ ಎತ್ತರಕ್ಕೆ ಹೋದ ನನ್ನಿಬ್ಬರು ಜೊತೆಗಾರರಿಗೂ ಈ ವಿಷಯವಾಗಿ ಕಾಳಜಿ ತೆಗೆದುಕೊಳ್ಳುವುದು ಹೇಗೆಂದು ತಿಳಿದಿದ್ದರಿಂದ ನನಗದರ ತೀಕ್ಷ್ಣತೆ ಅರಿವಿಗೆ ಬರಲಿಲ್ಲ. ಆದರೂ ಉಸಿರಾಡುವಾಗ ದೊರೆಯುತ್ತಿದ್ದ ಆಮ್ಲಜನಕದ ಅಂಶ ಸಾಕಾಗುತ್ತಿಲ್ಲ ಎಂದು ತಿಳಿದುಬರುತ್ತಿತ್ತು.

ಶೇಮಕುಂಡದ ಹಾದಿಯಲ್ಲಿ ಸಾಗುವುದೇ ರೋಚಕ ಅನುಭವ. ಬಹಳ ಎತ್ತರದ ಪ್ರದೇಶವಾದ್ದರಿಂದ ಸುತ್ತಲೂ ಹರಡಿರುವ ಬೆಟ್ಟಗಳು, ಕಣಿವೆಗಳು ಸ್ಪಷ್ಟವಾಗಿ ಕಾಣುತ್ತಿದ್ದವು. ಅನೇಕ ಜಲಪಾತಗಳೂ, ಕರಗಿದ ನೀರ್ಗಲ್ಲುಗಳೂ ಬೆಟ್ಟದ ನೀರನ್ನು ಹೊತ್ತೊಯ್ದು ತರುತ್ತಿದ್ದವು. ಅದೆಷ್ಟು ತಾತ್ಕಾಲಿಕ ಜಲಪಾತಗಳಿರುತ್ತವೆಂದರೆ, ಕೆಲಸಮಯದ ಬಳಿಕ ಅವುಗಳ ವಿಷಯದಲ್ಲಿ ತಿರಸ್ಕಾರ ಮೂಡಿಬಿಡುತ್ತದೆ! ಜನಸಂಚಾರದ ವಿರಳತೆ, ಮಾಲಿನ್ಯವು ಸೋಕದಿರುವ ಕಾರಣ ನೀರ್ಗಲ್ಲುಗಳೆಲ್ಲ ಬಿಳುಪಾಗಿ ಸೂರ್ಯನ ಕಿರಣದಲ್ಲಿ ಹೊಳೆಯುತ್ತಿರುತ್ತವೆ. ಈ ರೀತಿಯ ದೃಶ್ಯ ಈ ಪ್ರವಾಸದಲ್ಲಿ ಬೇರೆಲ್ಲೂ ಕಾಣಸಿಕ್ಕಿರಲಿಲ್ಲ.

ಇದ್ದಕ್ಕಿದ್ದಂತೆ ಎದುರು ದಿಕ್ಕಿನಿಂದ ಬರುತ್ತಿದ್ದ ಕುದುರೆಯೊಂದು ಕಾಲುಜಾರಿ ಪ್ರಪಾತದೆಡೆಗೆ ಬಿತ್ತು. ಪ್ರಪಾತಕ್ಕೂ ರಸ್ತೆಗೂ ನಡುವೆ ಸುಮಾರು ನಾಲ್ಕು ಅಡಿಗಳಷ್ಟು ಅಂತರವಿದೆಯಾದ್ದರಿಂದ ಕುದುರೆ ಬಚಾವಾಯಿತು. ಕಾಲುಜಾರಿದ ಕುದುರೆ ತಕ್ಷಣವೇ ಏನೋ ಯಡವಟ್ಟಾಯಿತೆಂದು ತಿಳಿದು ಅಲ್ಲಾಡದೆ ಅಲ್ಲೇ ನಿಂತುಬಿಟ್ಟಿತು. ಅದರ ಮಾಲೀಕ ಬಂದು ಮೇಲೆಳೆಯುವವರೆಗೂ ಅದು ಹಾಗೆಯೇ ನಿಂತಿತ್ತು. ಮಾಲೀಕನಿಗೆ ಬೇರೆಲ್ಲರಿಂದ ಬಯ್ಗುಳದ ಸುರಿಮಳೆಯೇ ದೊರಕಿತು. ಪುಣ್ಯಕ್ಕೆ ಆ ಕುದುರೆಯ ಮೇಲೆ ಯಾರೂ ಸವಾರಿ ಮಾಡುತ್ತಿರಲಿಲ್ಲ. ಇಲ್ಲವಾದಲ್ಲಿ ಗತಿಯೇನು!

ಹಾಗೆಯೇ ಮುನ್ನಡೆಯುತ್ತಿರಲು ಕೊಂಚ ತೂಕಡಿಕೆ ಶುರುವಾಗಿಬಿಟ್ಟಿತು. ಕುದುರೆಯ ಮೇಲೆ ಕುಳಿತು ತೂಕಡಿಸುವುದು ಘೋರ ಅಪರಾಧ! ಕಷ್ಟಪಟ್ಟು ಎಚ್ಚರವಾಗಿದ್ದೆ. ಅಂಕುಡೊಂಕಾದ ದಾರಿಯಾಗಿದ್ದರಿಂದ ಲಗಾಮು ಎಳೆದು ಕುದುರೆಯನ್ನು ನಿಯಂತ್ರಣಕ್ಕೆ ತೆಗೆದುಕೊಳ್ಳುವುದು ಅತ್ಯವಶ್ಯಕ. ಹಾಗಾಗಿ ಮೈಯೆಲ್ಲ ಕಣ್ಣಾಗಿರಬೇಕು. ಏನೇ ಆದರೂ ತೂಕಡಿಕೆ ಬರುತ್ತಲೇ ಇತ್ತು.

ಒಮ್ಮೆಲೇ ಕುದುರೆ ಗಕ್ಕನೆ ನಿಂತುಬಿಟ್ಟಿತು. ಹಾಗೆ ತಕ್ಷಣ ನಿಂತದ್ದರಿಂದ ಆಲಸ್ಯ ಮಂಗಮಾಯವಾಗಿಬಿಟ್ಟಿತು. ಹಿಂದೆಯೇ ಬರುತ್ತಿದ್ದ ಶ್ರೀಧರ್, "ಸೂ, ತಲೆ ಕೆಟ್ಟಿದೆಯಾ?" ಎಂದು ನಗುತ್ತಾ ಅಬ್ಬರಿಸಿದರು. ಕಾರಣವಿಷ್ಟು: ನನ್ನ ಎಡಕ್ಕೆ ಪ್ರಪಾತವಿದ್ದು, ಲಗಾಮನ್ನು ಎಳೆದು ಕುದುರೆಯನ್ನು ಬಲಕ್ಕೆಳೆಯುವ ಬದಲು ಮತ್ತಷ್ಟು ಎಡಕ್ಕೇ ಹೋಗುವಂತೆ ಮಾಡುತ್ತಿದ್ದೆ. ಅಪಾಯವನ್ನರಿತ ಕುದುರೆ ಈ ಮೂರ್ಖ ಸವಾರ ಲಗಾಮನ್ನೆಳೆಯುವುದನ್ನು ಮೊದಲು ನಿಲ್ಲಿಸಲಿ ಎಂಬಂತೆ ನಿಂತುಬಿಟ್ಟಿತು. ಸುಮಾರು ನಾಲ್ಕೈದು ಕ್ಷಣಗಳ ಕಾಲ ನಾನು ಎಡಕ್ಕೇ ಎಳೆಯುತ್ತಿದ್ದದ್ದೂ, ಕುದುರೆ ಸಾಧ್ಯವಾದಷ್ಟು ಬಲಕ್ಕೆ ಹೋಗಲು ಪ್ರಯತ್ನಿಸುತ್ತಿದ್ದದ್ದೂ ನನ್ನ ಗಮನಕ್ಕೆ ಬಂದದ್ದು ಆಗಲೇ! ಬಿದ್ದಿದ್ದರೆ ದೇಹ ಘಾಂಘರಿಯಾದಲ್ಲಿ, ಆತ್ಮ ನೆರೆಯ ಪುಷ್ಪಗಳ ಕಣಿವೆಯಲ್ಲಿ! "ಸೂ, ನಿದ್ದೆ ಮಾಡಬೇಡ, ಏಳು" ಎಂದು ಜಯರಾಮ್ ಸಹ ಎಚ್ಚರಿಸಿದ. ಇನ್ನೆಲ್ಲಿಯ ನಿದ್ದೆ, ತೂಕಡಿಕೆ! ಕೂದಲೆಳೆಯಲ್ಲಿ ಬಚಾವಾಗಿದ್ದೆ. ಮತ್ತೊಂದು ಬಾರಿ ಈ ರೀತಿ ಆಗಲು ಬಿಡಬಾರದೆಂದು ಗಟ್ಟಿಯಾಗಿ ಕುಳಿತೆ.

ನಾಲ್ಕು ಕಿ.ಮೀ. ನಂತರದ ರಸ್ತೆ ಹಿಮಾವೃತಗೊಂಡಿತ್ತು. ಕುದುರೆಯ ಗೊರಸು ಹಿಮದ ಮೇಲೆ ಜಾರುವುದರಿಂದ ಹಿಂದಿನ ದಿವಸ ಸವಾರಿಯನ್ನು ಅಲ್ಲಿಗೇ ಮೊಟಕುಗೊಳಿಸುತ್ತಿದ್ದರಾದರೂ, ಇಂದು ಮಾರ್ಗವನ್ನು ಸರಿಪಡಿಸಿ ಕುದುರೆ ಹೇಮಕುಂಡದ ಗುರುದ್ವಾರದವರೆಗೂ ಹೋಗಲು ಸಾಧ್ಯವಾಗುವಂತೆ ಮಾಡಿದ್ದರು. ಇಲ್ಲವಾದಲ್ಲಿ ಹಿಮದ ಮೇಲೆ ಎರಡು ಕಿ.ಮೀ.ಗಳ ನಡಿಗೆ ಕೈಗೊಳ್ಳಬೇಕಾಗಿತ್ತು.

ಹಿಮದ ಮೇಲೆ ಸಾಗತೊಡಗುತ್ತಿದ್ದಂತೆ ಚಳಿಯ ಅನುಭವವೂ ಹೆಚ್ಚಾಯಿತು. ಜಾರಿಕೆಯಿಂದ ಕೂಡಿದ್ದ ರಸ್ತೆಯ ಮೇಲೆ ಜನರು ನಿಧಾನವಾಗಿ ನಡೆದುಹೋಗುತ್ತಿದ್ದರು. ಅಲ್ಲಲ್ಲಿ ನೂರಾರು ಕುದುರೆಗಳೂ, ಅವುಗಳ ಮಾಲೀಕರೂ ಕೆಳಗೆ ಹೋಗಲು ಯಾರಾದರೂ ಸವಾರಿ ದೊರೆಯುವರೇ ಎಂದು ಕಾತುರದಿಂದ ಯಾತ್ರಿಗಳತ್ತ ನೋಡುತ್ತಿದ್ದರು. ಗುರುದ್ವಾರದಿಂದ ಅರ್ಧ ಕಿ.ಮೀ. ದೂರದಲ್ಲಿಯೇ ಕುದುರೆ ಸವಾರಿ ಮುಕ್ತಾಯವಾಗಿ, ಅಲ್ಲಿಂದ ಮುಂದೆ ಜನಸಾಗರವನ್ನೆದುರಿಸಿತ್ತ ಮುನ್ನಡೆಯಬೇಕಾಯಿತು. ಹಾಗೂ ಹೀಗೂ ತೂರಿಕೊಂಡು ಹಿಮದ ಚಳಿಯಲ್ಲೂ ಬೆವರುತ್ತ ಮುನ್ನುಗ್ಗಿದ ನಮ್ಮನ್ನು ಸ್ವಾಗತಿಸಿದ್ದು ಹೇಮಕುಂಡ ಸಾಹಿಬ್‌ನ ದೊಡ್ಡ ಗುರುದ್ವಾರ.

ಗುರುದ್ವಾರದ ಸಮೀಪವೂ, ಸುತ್ತಮುತ್ತಲೂ ಜಾತ್ರೆಯ ವಾತಾವರಣ ಉಂಟಾಗಿತ್ತು. ಬದಿಯಲ್ಲೇ ಲಂಗರು ಸಹ ಇದ್ದಿದ್ದರಿಂದ ಊಟಕ್ಕಾಗಿ ಕಾಯುವವರೂ ಅಲ್ಲೇ ನೆರೆದಿದ್ದು, ಗಿಜಿಗಿಜಿ ವಾತಾವರಣ ಸೃಷ್ಟಿಯಾಗಿತ್ತು. ಹಿಂದಿನ ದಿನದ ಕಣಿವೆಯ ಪ್ರವಾಸಕ್ಕೂ ಇಂದಿಗೂ ಎಷ್ಟೊಂದು ವ್ಯತ್ಯಾಸ! ಎರಡು ಜಾಗಗಳೂ ಚೆಲುವಿನ ವಿಷಯದಲ್ಲಿ ಸಮನಾಗಿದ್ದರೂ ಭಕ್ತಿಯ ಪ್ರಭಾವದಿಂದಲೇ ಈ ಕ್ಷೇತ್ರ ಹೆಚ್ಚು ಜನರನ್ನು ತನ್ನತ್ತ ಸೆಳೆದಿತ್ತು. ಹೇಮಕುಂಡಕ್ಕೆ ಬರುವ ಯಾತ್ರಿಕರಲ್ಲಿ ಶೇಕಡಾ ಒಂದರಷ್ಟೂ ಪುಷ್ಪಗಳ ಕಣಿವೆಗೆ ಭೇಟಿಕೊಡುವುದಿಲ್ಲವೆಂದು ಮನದಟ್ಟಾಯಿತು.

ಗುರುದ್ವಾರದ ಕಟ್ಟಡ ವಿಶಾಲವಾಗಿದೆ. ಹೆದ್ದಾರಿಯಿಂದ ಇಪ್ಪತ್ತು ಕಿ.ಮೀ. ದೂರದಲ್ಲಿ, ಅದೂ ಈ ಎತ್ತರದ ಹಿಮದ ಪರ್ವತದಲ್ಲಿ ಈ ರೀತಿಯಾದ ಭವನವನ್ನು ನಿರ್ಮಿಸಲು ಅದೆಷ್ಟು ಹಣ, ಶಕ್ತಿ ವ್ಯಯವಾಗಿತ್ತೋ! ಸಾಮಗ್ರಿಗಳನ್ನು ಇಲ್ಲಿಗೆ ಕುದುರೆಯ ಮೇಲೆಯೇ ಹೊತ್ತು ತರಬೇಕು, ಬೇರಾವುದೇ ದಾರಿ ಇಲ್ಲ. "ಲಂಗರು" ಬೇರೆ ಇರುವುದರಿಂದ ಪ್ರತಿನಿತ್ಯ ನೂರಾರು ಕಿಲೋ ಆಹಾರಪದಾರ್ಥಗಳು, ಧಾನ್ಯಗಳ ಸಾಗಾಟ ನಡೆಯಲೇ ಬೇಕು. ಸ್ಥಳೀಯರಂತೆ ಸಿಖ್ ಜನ ಕೂಡಾ ಅತ್ಯಂತ ಕಷ್ಟಸಹಿಷ್ಣುಗಳಾಗಿರುವುದರಿಂದ ಅವರಿಗೆ ಇದೊಂದು ಹೊರೆಯೆಂದೆನಿಸದು. ಭಗವಂತನ ಕಾರ್ಯ ಸಾಂಗವಾಗಿ ನಡೆದುಹೋಗಲು ನೆರವಾಗಲು ನೂರಾರು ಮಂದಿ ತನು–ಮನ–ಧನಗಳನ್ನು ಅರ್ಪಿಸುತ್ತಾರೆ.

ಜನಜಂಗುಳಿಯಿಂದ ದೂರ ಹೋಗಬೇಕೆಂದು ಬಯಸಿ, ಗುರುದ್ವಾರದ ಹಿಂಭಾಗದಲ್ಲಿದ್ದ ಲಕ್ಷ್ಮಣನ ಗುಡಿಯತ್ತ ಹೋದೆವು. ಲಕ್ಷ್ಮಣನ ದೇವಸ್ಥಾನ ಗುರುದ್ವಾರದ ಹತ್ತನೆಯ ಒಂದು ಭಾಗದಷ್ಟಿದೆ! ಬರುವ ಜನರೂ ಅದಕ್ಕಿಂತ ಕಡಿಮೆಯೇನೋ. ಈ ರೀತಿಯಾದ ಒಂದು ಕ್ಷೇತ್ರವಿದೆಯೆಂಬುದೂ ಜನರಿಗೆ ಗೊತ್ತಿಲ್ಲ. ಹೇಮಕುಂಡ್ ಸಾಹಿಬ್ ಎಂಬುದು ಸಿಖ್ಖರ ಯಾತ್ರಾಸ್ಥಳ ಎಂದೇ ಜನಜನಿತವಾಗಿದೆ. ಪ್ರಾಯಶಃ ಹೀಗೇ ಇದ್ದರೆ ಒಳ್ಳೆಯದೇನೊ. ಏಕೆಂದರೆ ಹೆಚ್ಚು ಜನ ಬರತೊಡಗಿದರೆ ನೂರಾರು ತಾಪತ್ರಯಗಳು ಪ್ರಾರಂಭವಾಗುತ್ತವೆ. ವಸತಿಯ ಕೊರತೆ, ದುಬಾರಿ ವಸ್ತುಗಳಂತಹ ಮಾನವನಿರ್ಮಿತ ತೊಂದರೆಗಳಲ್ಲದೆ, ಪರಿಸರಮಾಲಿನ್ಯ ಕೂಡ. ಮನುಷ್ಯನ ಚಟುವಟಿಕೆ ಹೆಚ್ಚಾದಂತೆಲ್ಲ ಅಲ್ಲಿ ಪ್ರಕೃತಿಗೆ ಹೊಡೆತ ಬಿದ್ದಿರುವ ಉದಾಹರಣೆಗಳೇ ಸಿಗುವವು. ಹಿಮದ ಈ ಪ್ರದೇಶದಲ್ಲಿ ತಾಪಮಾನ ಏರಿಕೆ, ತ್ಯಾಜ್ಯದ ಸಂಗ್ರಹಣೆ ಇವೆಲ್ಲವೂ ಆ ಪ್ರಾಂತ್ಯದ ಪರಿಸರದ ಸಮತೋಲನಕ್ಕೆ ಧಕ್ಕೆ ತರುವುದರಲ್ಲಿ ಸಂಶಯವಿಲ್ಲ.

ಇವೆರಡೂ ದೇಗುಲಗಳು ಹೇಮಕುಂಡ ಸರೋವರದ ತಟದಲ್ಲಿ ನಿಂತಿವೆ. ಜಾಗದ ತಾಪಮಾನ ಅದೆಷ್ಟು ಕಡಿಮೆಯೆಂದರೆ ಸರೋವರದಲ್ಲಿ ಹಿಮದ ಗಡ್ಡೆಗಳು ತೇಲಾಡುತ್ತಿರುವುದನ್ನು ನೋಡಬಹುದು. ಸರೋವರದ ನಡುವಿನಲ್ಲಿರುವ ಮಂಜುಗಡ್ಡೆಗಳಂತೂ ದೊಡ್ಡ ಗಾಜಿನ ಹಾಳೆಗಳಂತೆಯೇ ಇದ್ದವು. ಜೊತೆಗೆ ಸುತ್ತಲೂ ಹಿಮವೇ ತುಂಬಿದ ಅನೇಕ ಗುಡ್ಡಗಳೂ, ಕರಗದ ನೀರ್ಗಲ್ಲುಗಳೂ ಇದ್ದವು. ತಾಪಮಾನ ಅಳೆಯಲು ಉಷ್ಣತಾಮಾಪಕ (Thermometer) ಇಲ್ಲದಿದ್ದರೂ ಆ ಪರಿಸರದ ಉಷ್ಣತೆ ಶೂನ್ಯದ ಆಸುಪಾಸಿನಲ್ಲೇ ಇತ್ತೆಂದು ಊಹಿಸಬಹುದಿತ್ತು. ಗಾಳಿ ಇಲ್ಲದಿದ್ದರಿಂದ ಚಳಿಯ ಕಾಟವಿರಲಿಲ್ಲ.

ಅನೇಕ ಭಕ್ತರು ಅಂತಹ ಕೊರೆಯುವ ನೀರಿನಲ್ಲಿ ಮುಳುಗು ಹಾಕುವ ಸಾಹಸ ತೋರುತ್ತಿದ್ದರು. ಅಂತಹವರಿಗೆ ಅನುಕೂಲವಾಗುವಂತೆ ಸರೋವರದಂಚಿನಲ್ಲಿ ಸರಪಳಿಗಳನ್ನು ಬಿಗಿಯಲಾಗಿತ್ತು. ಮುಳುಗು ಹಾಕುವ ಮಂದಿ ಅದನ್ನು ಹಿಡಿದು ಮೂರು ಬಾರಿ ಮುಳುಗೆದ್ದು ಕೂಡಲೇ ಹೊರಗೋಡಿ ಬಂದು ಒಣಗಿದ ಬಟ್ಟೆ ಧರಿಸುತ್ತಿರುವ ದೃಶ್ಯ ಸಾಮಾನ್ಯವಾಗಿತ್ತು. ಭಕ್ತಿಭಾವಕ್ಕೆ ಎಷ್ಟೊಂದು ಶಕ್ತಿಯುಂಟು! ಸಾಮಾನ್ಯ ಪರಿಸ್ಥಿತಿಯಲ್ಲಿ ಮಾಡಲು ಹಿಂಜರಿಯುವ ಕೆಲಸವನ್ನು ಭಕ್ತಿಭಾವಪೂರ್ವಕವಾಗಿ ಅದೆಷ್ಟು ಸುಲಲಿತವಾಗಿ ಮಾಡಿಬಿಡುತ್ತೇವೆ! ಏನೂ ಆಗಲಾರದೆಂದೂ, ಭಗವಂತನ ಕೃಪೆ ಸದಾ ನಮ್ಮ ಮೇಲಿರುವುದೆಂಬ ನಂಬಿಕೆ ಇದ್ದರೆ ಮಾತ್ರ ಈ ರೀತಿಯ ಹುಚ್ಚುಸಾಹಸ ಕೈಗೊಳ್ಳಲು ಸಾಧ್ಯ. ಹುಚ್ಚೆಂದು ಬೇರೆಯವರಿಗೆ ಅನ್ನಿಸಿದರೂ ಹಾಗೆ ಮಾಡಿದ ಭಕ್ತನಿಗೆ ಮಾತ್ರ ಅದು ದೇವರನ್ನು ಒಲಿಸಿಕೊಳ್ಳಲು ಮಾಡುವ ಕ್ರಿಯೆಯಷ್ಟೇ.

ಮುಳುಗೇಳುವ ಜನರನ್ನು ನೋಡಿ ನಾವೂ ಪ್ರೇರಣೆ ಪಡೆದೆವು. ಮುಳುಗುವುದಕ್ಕಲ್ಲ! ಕೇವಲ ಸರೋವರದಲ್ಲಿ ಕೈಹಾಕಿ ನೀರನ್ನು ಮುಟ್ಟಲು, ಕಾಲಿಟ್ಟು ನಿಲ್ಲಲು. ಬೂಟು ಕಳಚಿ ಕಾಲನ್ನು ಒದ್ದೆ ನೆಲದ ಮೇಲಿಟ್ಟಾಗಲೇ ಚಳಿಯು ಜೋರಾಗಿ ಬಾಧಿಸಿದರೂ, ಧೈರ್ಯಮಾಡಿ ಮುಂದುವರಿದು ಪಾದವನ್ನು ನೀರಿಗೆ ಸೋಕಿಸಿದರೆ, ತಣ್ಣೀರು ಇಡೀ ದೇಹವನ್ನು ಒಂದು ಕ್ಷಣ ಮರಗಟ್ಟಿಸಿತು. ಅಬ್ಬಾ! ದೇವಭಕ್ತಿಯೂ ಬೇಡ, ಅದರಿಂದ ಸಿಗುವ ಪುಣ್ಯವೂ ಬೇಡ, ಮೊದಲು ಇಲ್ಲಿಂದ ಓಡಿಹೋದರೆ ಸಾಕೆಂದು ಹಾರಿ ದಡಕ್ಕೆ ಓಡಿದೆ. ಆದರೆ ರಕ್ತದ ರುಚಿ ಕಂಡ ಹುಲಿಯಂತಾಗಿತ್ತು ನನ್ನ ಸ್ಥಿತಿ – ಮತ್ತೊಮ್ಮೆ ನೀರಿಗಿಳಿದೆ. ಈ ಬಾರಿ ಹಲವಾರು ಕ್ಷಣಗಳ ಕಾಲ ಹಲ್ಲನ್ನು ಕಚ್ಚಿಹಿಡಿದು ಶೈತ್ಯವನ್ನು ತಡೆದುಕೊಂಡು ನಿಲ್ಲುವ ಮಹತ್ಸಾಧನೆ ಮಾಡಿದೆ. ಕಡೆಗೆ ತಡೆಯದಾದಾಗ ಹೊರಗೆ ಹಾರಿ, ನನ್ನ ಬೆಚ್ಚಗಿನ ಬೂಟಿನೊಳಗೆ ಕಾಲನ್ನು ಸೇರಿಸಿ ಸಮಾಧಾನಪಟ್ಟೆ. ಬೇಡಪ್ಪಾ ಬೇಡ ಇನ್ನೊಂದು ಬಾರಿ ಈ ತಣ್ಣೀರಿನ ಸಹವಾಸ ಎಂದು ಕೇವಲ ಅದರ ಛಾಯಾಚಿತ್ರ ತೆಗೆಯುವ ಕೆಲಸವನ್ನಷ್ಟೇ ಮಾಡಹತ್ತಿದೆ.

ನಮ್ಮ ಈ ಎಲ್ಲ ಚಟುವಟಿಕೆಗಳನ್ನು ಒಬ್ಬ ಸಿಖ್ ವ್ಯಕ್ತಿ ಗಮನಿಸುತ್ತಿದ್ದ. ನಂತರ ಬಳಿಗೆ ಬಂದು ಪಂಜಾಬಿಯಲ್ಲಿ ಏನೋ ಹೇಳಿದ. ಅದೇನೆಂದು ಹಿಂದಿಯಲ್ಲಿ ಕೇಳುವಷ್ಟರಲ್ಲಿ ಶ್ರೀಧರ್ ಅವನಿಗೆ "ಬೇಡ"ವೆಂದು ಉತ್ತರವಿತ್ತರು. ವಾಸ್ತವವಾಗಿ ಅವನು ಕೇಳಿದ್ದು, ನಮಗೆ ಮುಳುಗು ಹಾಕುವ ಇಚ್ಛೆ ಇದ್ದಲ್ಲಿ ಗುರುದ್ವಾರವು ಉಡಲು ಬೇರೊಂದು ವಸ್ತ್ರವನ್ನು ಉಚಿತವಾಗಿ ಕೊಡುತ್ತದೆಯೆಂದು. ಪಂಜಾಬಿಯಲ್ಲಿ ಹೇಳಿದನೋ, ಪಂಜಾಬಿ ಬೆರೆತ ಹಿಂದಿಯಲ್ಲಿ ಹೇಳಿದನೋ ದೇವರೇ ಬಲ್ಲ. ಶ್ರೀಧರ್ ಹೇಗದನ್ನು ಅರ್ಥಮಾಡಿಕೊಂಡರೋ ಅದು ಸಹ ಅದೇ ದೇವನೇ ಬಲ್ಲ.

ನಂತರ ನಮ್ಮ ಕ್ಯಾಮೆರಾಗಳನ್ನು ನೋಡಿ ಅವನದ್ದೊಂದು ಚಿತ್ರವನ್ನು ಕ್ಲಿಕ್ಕಿಸಿ, ಪ್ರಿಂಟ್ ತೆಗೆಸಿ ಕಳುಹಿಸಲು ಸಾಧ್ಯವೇ ಎಂದು ಕೇಳಿದ. ನಾವು ಒಪ್ಪಿದಾಗ ಸಂತೋಷದಿಂದ ತನ್ನ ಶಾಲನ್ನು ಹೊದ್ದು ತಯಾರಾಗಿ ನಿಂತ. ಹಿಂದೆ ಸರೋವರ ಬರಬೇಕೆನ್ನುವ ಅವನ ಆಸೆಯಂತೆಯೇ ಚಿತ್ರಗಳನ್ನು ಕ್ಲಿಕ್ಕಿಸಿ ಅವನಿಗೆ ತೋರಿಸಿದೆ. ಬಹಳ ಆನಂದದಿಂದ ಅವನ ವಿಳಾಸ, ದೂರವಾಣಿ ಸಂಖ್ಯೆಯನ್ನು ಚೀಟಿಯೊಂದರ ಮೇಲೆ ಬರೆದುಕೊಟ್ಟು ಅಲ್ಲಿಗೆ ಕಳುಹಿಸುವಂತೆ ತಿಳಿಸಿದ. ಬೆಂಗಳೂರಿಗೆ ಹೋದ ತಕ್ಷಣ ಈ ಕೆಲಸವ ಮಾಡುತ್ತೇನೆಂದು ಹೇಳಿ ಚೀಟಿಯನ್ನು ಭದ್ರವಾಗಿ ಕ್ಯಾಮೆರಾ ಚೀಲದೊಳಗೆ ಸೇರಿಸಿದೆ. ಸಾಂಪ್ರದಾಯಿಕ ಸಿಖ್ ಉಡುಗೆಯಲ್ಲಿ – ಪಗಡಿ ಮತ್ತು ಆಯುಧವಾದ ಕಿರ್ಪಾಣ್ ಸಮೇತ – ವೀರಕಳೆಯಿಂದ, ಗಂಭೀರವಾಗಿ ನಿಂತಿದ್ದ ಅವನ ಚಿತ್ರವನ್ನು ನೋಡಿ ನಮಗೇ ಸಂತಸವಾಗುತ್ತಿತ್ತು. ಖಂಡಿತ ಅದು ಅವನ ಮನೆಯ ಬಹುಮುಖ್ಯ ಗೋಡೆಯನ್ನು ಆಕ್ರಮಿಸುವುದರಲ್ಲಿ ಸಂದೇಹವೇ ಇಲ್ಲವೆಂದುಕೊಳ್ಳುತ್ತಾ ಅಲ್ಲಿಂದ ಹೊರಟೆವು.

(ಆದರೆ ಮುಂದಿನ ದಿನಗಳಲ್ಲಿ ನಮಗಾದ ಅವಾಂತರಗಳ ನಡುವೆ ಜತನದಿಂದ ಕಾಪಾಡಿಕೊಂಡಿದ್ದ ಆ ಚೀಟಿಯನ್ನು ಅದೆಲ್ಲೋ ಕಳೆದುಬಿಟ್ಟೆ! ಮರಳಿ ದೆಹಲಿಗೆ ಬಂದಾಗಲೇ ಅದು ತಿಳಿದದ್ದು. ಇಂದಿಗೂ ಆ ಚಿತ್ರ ನನ್ನ ಗಣಕಯಂತ್ರದಲ್ಲಿ ಭದ್ರವಾಗಿ ಕುಳಿತಿದೆ. ಅವನ ಗ್ರಾಮದ ಹೆಸರಷ್ಟೇ ನೆನಪಾಗಿದ್ದರೂ ಸಹ ಅದನ್ನು ಕಳುಹಿಸಬಹುದಿತ್ತು. ಹೀಗೆ ಮಾಡಿದ್ದಕ್ಕಾಗಿ ನನ್ನನ್ನು ನಾನು ಹಲವಾರು ಬಾರಿ ಹಳಿದುಕೊಂಡಿರುವೆನು.)

ಗುರುದ್ವಾರದ ಎದುರು ಒಂದು ಸಣ್ಣ ಗುಡ್ಡವಿದ್ದು, ಅಲ್ಲಿ ಜನದಟ್ಟಣೆ ಕಡಿಮೆಯಿತ್ತು. ಹಿಮ ತುಂಬಿದ ಆ ಗುಡ್ಡ ಆಕರ್ಷಕವಾಗಿ ಕಂಡದ್ದರಿಂದ ಅದನ್ನೇರಿದೆವು. ಅಲ್ಲಿಂದ ಕೆಳಗಿರುವ ಸರೋವರವೂ ಸುತ್ತಮುತ್ತಲ ನೀರ್ಗಲ್ಲುಗಳೂ ಇನ್ನೂ ಮನಮೋಹಕವಾಗಿ ಕಾಣುತ್ತಿದ್ದವು. ಮೋಡಕವಿದು ಮಬ್ಬು

ಬೆಳಕಿದ್ದು, ಅದರಲ್ಲಿ ಬಿಳಿಯ ಹಿಮ ಗೋಚರಿಸುತ್ತಿದ್ದ ಬಗೆ ಮತ್ತು ಅದು ನನ್ನಲುಂಟುಮಾಡಿದ ಭಾವನಾಲಹರಿಯನ್ನು ನಿಜಕ್ಕೂ ಪದಗಳಲ್ಲಿ ತುಂಬಿಸಲು ಸಾಧ್ಯವಿಲ್ಲ.

ಕ್ಯಾಮೆರಾಕ್ಕೆ ಕೆಲಸ ಕೊಡುತ್ತಿರುವಾಗ ತಣ್ಣನೆಯ ವಸ್ತುವೊಂದು ಬಂದು ನನ್ನ ಕೈಗೆ ಅಪ್ಪಳಿಸಿತು. ಭಯದಿಂದ ತಿರುಗಿ ನೋಡಿದರೆ ಜಯರಾಮ್ ಹಿಮದ ಉಂಡೆಯೊಂದನ್ನು ನನ್ನತ್ತ ಎಸೆಯಲ್ಲು ಸಜ್ಜಾಗಿ ನಿಂತಿದ್ದ. ಅವನದೇ ಕ್ಯಾಮೆರಾ ನನ್ನ ಕೈಲಿದ್ದರೂ ಅದರ ಪರಿವೆ ಅವನಿಗಿರಲಿಲ್ಲ. ಹಾರಿಬಂದ ಆ ಉಂಡೆ ರಪ್ಪನೆ ಹೊಡೆಯಿತು. ಒಡನೆಯೇ ಕ್ಯಾಮೆರಾ ಮುಚ್ಚಿಟ್ಟು ಒಂದಷ್ಟು ಹಿಮವನ್ನು ಅವನತ್ತ ಎಸೆದೆ. ಅದನ್ನು ನೋಡಿದ ಶ್ರೀಧರ್ ಸಹ ಅವನ ಮೇಲೆ ದಾಳಿ ಮಾಡಿದರು. ಕೆಲಕ್ಷಣಗಳಲ್ಲೇ ಅವರ ದಾಳಿ ನನ್ನತ್ತ ತಿರುಗಿತು. ನಮ್ಮ ದಾಳಿಯಿಂದ ಕಂಗೆಟ್ಟು ನಿಂತಿದ್ದ ಜಯರಾಮನಿಗೆ ಕ್ಯಾಮೆರಾ ಕೊಟ್ಟು ಶ್ರೀಧರ್ ಜೊತೆ ನಾನೂ ಸ್ಪರ್ಧೆಗಿಳಿದೆ. ಐದು ನಿಮಿಷಗಳ ಆ ಯುದ್ಧದಲ್ಲಿ ಅತಿಹೆಚ್ಚು ಹೊಡೆತ ತಿಂದವನು ನಾನೇ. ಸುತ್ತಲೂ ನೆರೆದಿದ್ದ ಜನ ನಗುತ್ತಾ ಮಜಾ ಮಾಡುತ್ತಿದ್ದರು.

ಯುದ್ಧದ ನಂತರ ನಾವು ಮಾಡಿದ ಮಂಗಾಟಗಳು ಹಲವಾರು. ಹಿಮದ ಮೇಲೆ ಜಾರುವುದೇನು, ಹೊರಳಾಡುವುದೇನು... ಬಟ್ಟೆ ಒದ್ದೆಯಾಗುತ್ತಿದ್ದರೂ ಲೆಕ್ಕಿಸದೆ ಮಕ್ಕಳಂತೆ ಕುಣಿದಾಡಿದೆವು. ಒಮ್ಮೆಲೇ ಇಷ್ಟೊಂದು ಹಿಮವನ್ನು ನನ್ನ ಜೀವನದಲ್ಲಿಯೇ ಹಿಂದೆ ಕಂಡಿದ್ದಿಲ್ಲವಾದ್ದರಿಂದಲೂ, ನನ್ನನ್ನು ತಡೆಯುವ ಪ್ರಯತ್ನವನ್ನಾರೂ ಮಾಡುತ್ತಿರಲಿಲ್ಲವಾದ್ದರಿಂದಲೂ, ಆನಂದದಿಂದ ಆಟವಾಡಿದೆ. ಹೊರಡುವ ಸಮಯವಾಯಿತೆಂದು ಜಯರಾಮ್ ಸೂಚಿಸಿದಾಗ ಇನ್ನಷ್ಟು ಕಾಲ ಕಳೆಯಬಾರದೇಕೆಂಬ ಪ್ರಶ್ನೆ ಮೂಡಿತು. ಆದರೆ ಮೋಡ ಕವಿದ ಆಗಸ ಹೆದರಿಕೆಯನ್ನುಂಟುಮಾಡುವಂತಿತ್ತು. ತೆಪ್ಪಗೆ ಒಲ್ಲದ ಮನಸ್ಸಿನಿಂದ ಹೊರಡಲು ಸಿದ್ಧನಾದೆ.

ಜನಸಾಗರದದ ಮಧ್ಯೆ ನಿಧಾನವಾಗಿ ನಡೆಯುತ್ತಾ, ಜಯರಾಮನ ಕುದುರೆಯನ್ನು ಹುಡುಕಾಡತೊಡಗಿದೆವು. ಮುಂಚೆಯೇ ನಿರ್ಧರಿಸಿದ್ದಂತೆ ಜಯರಾಮ್ ಕುದುರೆಯ ಮೇಲೂ, ಶ್ರೀಧರ್ ಮತ್ತು ನಾನು ನಡೆದು ಘಾಂಘರಿಯಾ ತಲುಪುವುದಾಗಿಯೂ ವ್ಯವಸ್ಥೆ ಮಾಡಿಕೊಂಡಿದ್ದೆವು. ಜಯರಾಮನ ಕುದುರೆ ಸಿಕ್ಕಿ ಅವನ ಸವಾರಿ ಪ್ರಾರಂಭವಾದ ನಂತರ ನಮ್ಮ ಕಾಲ್ನಡಿಗೆಯೂ ಚಾಲೂ ಆಯಿತು.

ಎತ್ತರದಿಂದ ತಗ್ಗು ಪ್ರದೇಶಗಳಲ್ಲಿದ್ದ ಅಂಗಡಿಗಳ ಛಾವಣಿಗಳೂ, ಓಡಾಡುತ್ತಿದ್ದ ಜನರ ತಲೆಗಳ ಮೇಲಿನ ಪಗಡಿಗಳೂ ಬೆಳ್ಳಗಿನ ಬಟ್ಟೆಯ ಮೇಲೆ ಅಲ್ಲಲ್ಲಿ ಚೆದುರಿದ ಬಣ್ಣಗಳ ಪಟ್ಟ

ಬಿಂದುಗಳಂತಿದ್ದವು. ನಡುನಡುವೆ ಅಲ್ಲಲ್ಲಿ ನೂರಾರು ಹಳದಿ ಹೂಗಳ ಹೊದಿಕೆಯೇ ಹಾಸಿದಂತಿತ್ತು. ರಸ್ತೆಬದಿಯಲ್ಲಿ ಹಲವಾರು ದೊಡ್ಡ ಜಲಪಾತಗಳು ಅಪಾರ ಸದ್ದು ಮಾಡುತ್ತಾ ಹೇಮಕುಂಡದಲ್ಲಿ ಹುಟ್ಟಿ ಘಾಂಘರಿಯಾದಲ್ಲಿ ಪುಷ್ಪವತಿಯನ್ನು ಸೇರುವ ಲಕ್ಷ್ಮಣಗಂಗಾ ನದಿಗೆ ತಮ್ಮ ನೀರನ್ನು ಸೇರಿಸುತಿದ್ದವು. ಅಲ್ಲಲ್ಲಿ ವಿಶ್ರಮಿಸುತ್ತಿದ್ದ ಅನೇಕರು ಭಾರೀ ಕ್ಯಾಮೆರಾ ಹೊತ್ತ ನಮ್ಮನ್ನು ಕಂಡೊಡನೆಯೇ ಮಾಧ್ಯಮದವರೆಂದುಕೊಳ್ಳುತ್ತಿದ್ದರು. ನಾವು ಪ್ರವಾಸಿಗರಷ್ಟೇ ಎಂದು ಅವರಿಗೆ ಮನವರಿಕೆ ಮಾಡಿಕೊಟ್ಟ ಕೂಡಲೇ ಕ್ಯಾಮೆರಾದ ದರವೆಷ್ಟು, ಎಷ್ಟು ದೂರದ ವಸ್ತುವನ್ನು ಇದರಲ್ಲಿ ಕ್ಲಿಕ್ಕಿಸಬಹುದು, ಎಂದು ನೂರಾರು ಪ್ರಶ್ನೆಗಳನ್ನು ನಮ್ಮತ್ತ ಎಸೆದು ಕಾಡುತ್ತಿದ್ದರು. ಹಲವರು ತಮ್ಮ ಚಿತ್ರ ತೆಗೆದು email ಮೂಲಕ ಕಳುಹಿಸುವಂತೆ ಕೇಳಿಕೊಳ್ಳುತ್ತಿದ್ದರು. ನಮಗೋ, ಇಕ್ಕಟ್ಟಿನ ಪರಿಸ್ಥಿತಿ! ತಪ್ಪಿಸಿಕೊಂಡು ಮುಂದೆ ಹೋಗುವಷ್ಟರಲ್ಲಿ ಸಾಕಾಗಿ ಹೋಗುತ್ತಿತ್ತು. ಅನತಿದೂರದ ಮತ್ತೊಂದು ಬೆಟ್ಟದ ಮೇಲೆ ಪುಷ್ಪಗಳ ಕಣಿವೆಯ ಮಾರ್ಗವೂ ಕಣ್ಣಿಗೆ ಬೀಳುತ್ತಿತ್ತು.

ಇಷ್ಟರಲ್ಲಿ, ನನ್ನ ಹೊಟ್ಟೆ ಕೆಟ್ಟು, ವೇಗ ತೀರಾ ಕಡಿಮೆಯಾಗಿಹೋಯಿತು. ಆಯಾಸವಾಗತೊಡಗಿ, ನನಗೂ ಶ್ರೀಧರ್‌ಗೂ ನಡುವಿನ ಅಂತರ ಹೆಚ್ಚಾಗುತ್ತಲೇ ಹೋಯಿತು. ಅವರು ಮುಂದೆ ಹೋಗಿ ಕಾಯುವುದೂ, ನಾನು ನಿಧಾನವಾಗಿ ನಡೆಯುವುದೂ ಜಾಸ್ತಿಯಾಗಿ, ಕಡೆಗೊಮ್ಮೆ ನನಗಾಗಿ ಕಾಯದಂತೆ ತಿಳಿಸಿಬಿಟ್ಟೆ. ಹತ್ತು ಹೆಜ್ಜೆಗೊಮ್ಮೆ ನಿಂತು ಸುಧಾರಿಸಿಕೊಳ್ಳುತ್ತ ಘಾಂಘರಿಯಾ ತಲುಪುವಷ್ಟರಲ್ಲಿ ಅರೆಜೀವವಾಗಿ ಹೋಗಿದ್ದ ನನ್ನನ್ನು ಮಾರ್ಗದಲ್ಲಿದ್ದ ಬೇರಾವುದೇ ಹೂವಾಗಲೀ, ಜಲಪಾತವಾಗಲೀ ತನ್ನತ್ತ ಸೆಳೆಯಲು ಸಾಧ್ಯವಾಗಲಿಲ್ಲ. ಹೋಟೆಲ್‌ನ ಕೊಠಡಿ ತಲುಪಿದಾಗಲೇ ಹೋದ ಜೀವ ಮರಳಿ ಬಂದಿದ್ದು.

ಪುಷ್ಪಗಳ ಕಣಿವೆಗೆ ಭೇಟಿಕೊಟ್ಟಿರುವ ನನ್ನ ಅನೇಕ ಮಿತ್ರರು ಹೇಮಕುಂಡಕ್ಕೆ ಹೋಗಿಲ್ಲವಂತೆ. ಕೊಂಚವೇ ಕಷ್ಟಪಟ್ಟು ಸುಮಾರು ೧೫೦೦೦ ಅಡಿಗಳಷ್ಟು ಎತ್ತರಕ್ಕೆ ಹೋಗಿ ಹಿಮಾಲಯವನ್ನು ಕಂಡು ಆಸ್ವಾದಿಸಲು ಅನುಕೂಲವಾಗಿರುವಂತಹ ಕೆಲವೇ ಸ್ಥಳಗಳಲ್ಲಿ ಹೇಮಕುಂಡವೂ ಒಂದು ಎಂದು ನನ್ನ ವೈಯಕ್ತಿಕ ಅನಿಸಿಕೆ.

# ಸ್ಥಳೀಯ ಜೀವನದ ಕಿರುನೋಟ

ಪ್ರವಾಸದ ಬಹುಮುಖ್ಯ ಭಾಗವಾಗಿದ್ದ ಪುಷ್ಪಗಳ ಕಣಿವೆ ಮತ್ತು ಹೇಮಕುಂಡ ಸಾಹಿಬ್‌ಗಳಿಗೆ ಭೇಟಿಕೊಡುವ ಕೆಲಸ ಏನೇನೂ ತೊಂದರೆಯಿಲ್ಲದೆ ಹಾಯಾಗಿ ಈಡೇರಿತ್ತು. ಹೇಮಕುಂಡದಿಂದ ಮರಳಿದ ನಂತರ ಮಧ್ಯಾಹ್ನ ಊಟಮಾಡಿ ಕೊಠಡಿ ಸೇರಿ ಕೆಲಸಮಯ ನೆಮ್ಮದಿಯಾಗಿ ನಿದ್ದೆ ಮಾಡಿದೆವು. ಮರುದಿನ ಬೆಳಿಗ್ಗೆ ಗೋವಿಂದಘಾಟ್‌ಗೆ ಹಿಂದಿರುಗಿ, ಅಲ್ಲಿಂದ ಬದರಿನಾಥಕ್ಕೆ ಪ್ರಯಾಣ ಮುಂದುವರಿಸಬೇಕಿತ್ತು.

ಘಾಂಘರಿಯಾದಿಂದ ಗೋವಿಂದಘಾಟ್‌ಗೆ ಹೆಲಿಕಾಪ್ಟರ್ ಸೇವೆ ಇದೆಯೆಂಬುದನ್ನು ಹಿಂದೆ ತಿಳಿಸಿಯಾಗಿದೆ. ಅದು–ಇದು ಹರಟೆ ಹೊಡೆಯುತ್ತಾ, ನಾವೇಕೆ ಹೆಲಿಕಾಪ್ಟರ್‌ನ ಪಯಣದ ಸವಿಯನ್ನೂ ಸವಿಯಬಾರದೆಂದು ಪ್ರಶ್ನಿಸಿಕೊಂಡೆವು. ಕೊಂಚ ದುಬಾರಿಯಾದರೂ ಸಹ ಹಾಗೇ ಮಾಡೋಣವೆಂದು ಒಮ್ಮತದ ನಿರ್ಣಯ ಕೈಗೊಂಡೆವು. ಈ ವಿಷಯವಾಗಿ ಹೋಟೆಲ್ ಮಾಲೀಕರಾದ ಚವ್ಹಾಣರೊಂದಿಗೆ ಚರ್ಚಿಸಲು ಜಯರಾಮ್ ಮತ್ತು ನಾನು ಅವರನ್ನು ಅರಸಿ ಹೊರಟೆವು.

ಚವ್ಹಾಣರು ಮರುದಿನ ಬೆಳಿಗ್ಗೆ ಬೇಗನೆಯೇ ಹೆಲಿಪ್ಯಾಡ್‌ಗೆ ಹೋದರೆ ಕಡಿಮೆ ಜನರಿರುವರೆಂದೂ, ಹಾಗಾಗಿ ನಮ್ಮ ಸರದಿ ಶೀಘ್ರವಾಗಿ ಬರುವುದೆಂದೂ ತಿಳಿಸಿದರು. ಎರಡು ಕಂಪೆನಿಗಳ ಹೆಲಿಕಾಪ್ಟರ್‌ಗಳು ಸೇವೆಯಲ್ಲಿರುವುದರಿಂದ ಜನದಟ್ಟಣೆ ವೇಗವಾಗಿ ಕರಗುವುದೆಂದು ಅವರ ಅಭಿಪ್ರಾಯ. ಆದರೆ ಹವೆಯು ಚೆನ್ನಾಗಿರಬೇಕಷ್ಟೇ. ಮೋಡದ ವಾತಾವರಣದಲ್ಲಿ, ಬೆಟ್ಟಗಳ ನಡುವೆ ಹೆಲಿಕಾಪ್ಟರ್ ಓಡಲು ಸಾಧ್ಯವಿಲ್ಲ. ಇಂದು ಸಹ ಮೋಡವಿರುವುದರಿಂದ ಈ ವಿಚಾರವಾಗಿ ಏನೂ ಹೇಳಲಾಗುವುದಿಲ್ಲವೆಂದು ವಿವರಿಸಿದರು.

ವಿಚಾರಣೆ ಮುಗಿದ ನಂತರ ಮಾಡುವುದು ಮತ್ತೇನಿರಲಿಲ್ಲ. ಚವ್ಹಾಣರೂ ಆರಾಮವಾಗಿ ಕುಳಿತಿದ್ದರು. ನಿಧಾನವಾಗಿ ಹರಟೆ ಹೊಡೆಯಲು ತೊಡಗಿದೆವು. ಹರಟೆ ಕೇವಲ ಹರಟೆಯಾಗಿರಲಿಲ್ಲ, ಬದಲಾಗಿ ಅಲ್ಲಿನ ಜನಜೀವನದ ವಿಚಾರದಲ್ಲಿ, ಪ್ರದೇಶದ ವಿಚಾರದಲ್ಲಿ ನಮಗೊಂದು ಅತ್ಯಮೂಲ್ಯ ಪಾಠವಾಯಿತೆಂದರೆ ಅದು ಅತಿಶಯೋಕ್ತಿಯಲ್ಲ.

ನಮ್ಮನಮ್ಮಲ್ಲಿ ಮಾತಾಡುವಾಗ ಹಿಂದಿಯನ್ನು ಬಳಸುತ್ತಿಲ್ಲವೆಂಬುದು ಮೊದಲ ದಿನವೇ ಅವರ ಗಮನಕ್ಕೆ ಬಂದಿತ್ತು. ನಮ್ಮ ಊರಿನ ಬಗ್ಗೆ ಪ್ರಶ್ನಿಸಲಾಗಿ, ನಾವು ದಕ್ಷಿಣ ಭಾರತದವರು, ಕರ್ನಾಟಕದ ಬೆಂಗಳೂರಿನವರೆಂದು ತಿಳಿಸಿದೆವು. ಬಹಳ ಸಂತೋಷಗೊಂಡ ಅವರು "ದಕ್ಷಿಣದವರು ಬಹಳಷ್ಟು ಜನ

ಇಲ್ಲಿಗೆ ಬರುವುದಿಲ್ಲ, ತುಂಬಾ ಜನರಿಗೆ ಇಲ್ಲಿನ ಪರಿಚಯವಿಲ್ಲವಿಲ್ಲವೆನಿಸುತ್ತದೆ" ಎಂದರು. "ಕಳೆದ ಮೂರು–ನಾಲ್ಕು ವರ್ಷಗಳಲ್ಲಿ ಜನರಿಗೆ ಪುಷ್ಪಗಳ ಕಣಿವೆಯ ಬಗ್ಗೆ ಮಾಹಿತಿ ತಿಳಿದುಬರುತ್ತಿದೆ, ನನ್ನ ಮಿತ್ರರನೇಕರು ಇತ್ತೀಚಿನ ವರ್ಷಗಳಲ್ಲಿ ಬಂದು ಹೋಗಿದ್ದರು, ಅವರಿಂದಲೇ ನಾನು ಸಹ ಇದರ ಬಗ್ಗೆ ಅರಿವು ಮೂಡಿಸಿಕೊಂಡು ಇಲ್ಲಿಗೆ ಭೇಟಿ ಕೊಟ್ಟೆ" ಎಂದೆ. ಅಂತರ್ಜಾಲದಲ್ಲಿ ಅನೇಕ ತಾಣಗಳು ಪುಷ್ಪಗಳ ಕಣಿವೆಯ ಬಗ್ಗೆ ಸಮಗ್ರವಾದ ಮಾಹಿತಿಯನ್ನು ಚಿತ್ರಸಮೇತವಾಗಿ ನೀಡುತ್ತಿರುವ ಬಗ್ಗೆಯೂ ಹೇಳಿದೆ. ಅದಕ್ಕೆ ಹೂಗುಟ್ಟಿದ ಅವರು, ಪ್ರತಿಷ್ಠಿತ ಜಾಲತಾಣವೊಂದರಲ್ಲಿ ತಮ್ಮ ಹೋಟೆಲ್‌ನ ಬಗ್ಗೆ ಉತ್ತಮವಾದ ಲೇಖನ ಬಂದಿರುವುದಾಗಿಯೂ, ಅದನ್ನು ಪ್ರಿಂಟ್ ತೆಗೆಸಿ ಚೌಕಟ್ಟನ್ನು ಹಾಕಿ ಹೋಟೆಲ್‌ನಲ್ಲಿ ತೂಗುಹಾಕಿರುವುದಾಗಿಯೂ ಹೇಳಿ, ಅದನ್ನು ತೋರಿಸಿದರು.

"ಬೆಂಗಾಲಿ ಜನರು ತುಂಬಾ ಬರುತ್ತಾರೆ ಇಲ್ಲಿಗೆ. ಅವರು ಅದೆಷ್ಟು ಪೂರ್ವಸಿದ್ಧತೆ ನಡೆಸಿ ಬರುತ್ತಾರೆಂದರೆ ಸ್ಥಳೀಯರಾದ ನಮಗೇ ಅಚ್ಚರಿಯಾಗುತ್ತದೆ. ಕಣಿವೆ ಹೂಗಳ ಬಗ್ಗೆ ಆಳವಾದ ಅಧ್ಯಯನ ನಡೆಸಿರುತ್ತಾರೆ. ಹೂಗಳ ಜಾತಿ, ಪ್ರಭೇದಗಳು, ಅರಳುವ ಸಮಯ – ಇವೆಲ್ಲವುಗಳ ಬಗ್ಗೆ ಸ್ಥಳೀಯರಿಗಿಂತ ಹೆಚ್ಚು ತಿಳಿದಿರುತ್ತಾರೆ. ಅದೇ ರೀತಿ ಯುವ ವಸತಿ ಕೇಂದ್ರದ (Youth Hostel Association of India) ಅನೇಕ ತಂಡಗಳೂ ಬರುತ್ತವೆ. ತಿಂಗಳು, ಎರಡು ತಿಂಗಳ ಮೊದಲೇ ನಮ್ಮ ಅಕೌಂಟ್‌ಗೆ ಹಣ ತುಂಬಿಸಿ ಕೊಠಡಿಗಳನ್ನು ಕಾಯ್ದಿರಿಸಿಕೊಂಡಿರುತ್ತಾರೆ. ಇಲ್ಲಿಗೆ ಬಂದು ಮನಸಾರೆ ಸುತ್ತಾಡುತ್ತಾರೆ. ಕಣಿವೆಗಷ್ಟೇ ಅಲ್ಲದೆ, ಘಾಂಘರಿಯಾ ಸುತ್ತಮುತ್ತಲಿನ ಕಾಡುಗಳಲ್ಲೂ ಅಲೆದಾಡುತ್ತಾರೆ. ಮಧ್ಯಾಹ್ನಕ್ಕೆ ಕೊಂಚ ಊಟ ಕಟ್ಟಿಸಿಕೊಂಡು ಬೆಳಿಗ್ಗೆಯಿಂದ ಸಂಜೆಯವರೆಗೂ ಕಾಡಿನಲ್ಲಿ ಸುತ್ತಾಡುತ್ತಾರೆ. ಹಾಗೆ ಸುತ್ತಾಡುವಾಗ ಅನೇಕ ಪ್ರಾಣಿಗಳನ್ನೂ ಕಂಡಿದ್ದಾರೆ."

ಯಾವ ಪ್ರಾಣಿಗಳಿರುವವು ಇಲ್ಲಿ ಎಂಬ ನಮ್ಮ ಪ್ರಶ್ನೆಗೆ ಉತ್ತರಿಸುತ್ತಾ, "ಮುಖ್ಯವಾಗಿ ಕರಡಿಗಳಿರುವವು. ರಾತ್ರಿಯ ಸಮಯದಲ್ಲಿ ಘಾಂಘರಿಯಾ ಅಂಚಿನಲ್ಲಿರುವ ಕುದುರೆಯವರ ಡೇರೆಯ ಸಮೀಪದವರೆಗೂ ಸುಳಿದಾಡುವುದುಂಟು. ಕೆಲವು ದಿನಗಳ ಹಿಂದೆಯೂ ಕಾಣಿಸಿಕೊಂಡಿತ್ತಂತೆ. ನೀವು ಮಾರ್ಗದರ್ಶಿಯ ವಿಚಾರವಾಗಿ ಮಾತನಾಡಲು ಹೋಗಿದ್ದ ರಘುವೀರ್ ಚವ್ಹಾಣ್ ಅವರು ಅನೇಕ ಸಲ ಬಹು ಸಮೀಪದಲ್ಲೇ ಕರಡಿಯನ್ನು ನೋಡಿದ್ದಾರೆ" ಎನ್ನುವ ಸಮಯಕ್ಕೂ, ರಘುವೀರ್ ಚವ್ಹಾಣ್ ಅವರು ಅಲ್ಲಿಗೆ ಬರುವುದಕ್ಕೂ ಸರಿಯಾಯಿತು. ನಗುನಗುತ್ತಾ ಮಾತನಾಡುತ್ತಿದ್ದ ನಮ್ಮೆಲ್ಲರನ್ನು ಸೇರಿದ ಅವರು, "ಇಲ್ಲಿ ಬಹುತೇಕ ಎಲ್ಲರೂ ಸಂಬಂಧಿಕರು. ಎಲ್ಲರೂ ತಮ್ಮತಮ್ಮ ವ್ಯವಹಾರದಲ್ಲಿ ಮಗ್ನರಾಗಿದ್ದರೂ ಸಹ ದಿನಕ್ಕೊಮ್ಮೆ ಪರಸ್ಪರರನ್ನು ಭೇಟಿಮಾಡಿ ಕೆಲಹೊತ್ತು ಆನಂದದಿಂದ ಕಳೆಯುತ್ತೇವೆ" ಎಂದರು.

ಮತ್ತೊಮ್ಮೆ ಪುಷ್ಪಗಳ ಕಣಿವೆ ಹೇಗಿತ್ತೆಂಬುದಕ್ಕೆ "ಸ್ವರ್ಗದಂತಿತ್ತು, ಇಂತಹ ಜಾಗವನ್ನು ಹಿಂದೆಂದೂ ನೋಡಿದ್ದಿಲ್ಲ" ಎಂದು ಉತ್ತರ ಕೊಟ್ಟೆವು.

"ನಿಜಕ್ಕೂ ಇಂತಹ ಜಾಗ ಮತ್ತೊಂದಿಲ್ಲ. ಒಮ್ಮೊಮ್ಮೆ ಕೆಲಸದ ಒತ್ತಡ ತೀವ್ರವಾಗಿದ್ದಾಗ, ಅಥವಾ ಆಯಾಸವಾಗಿದ್ದಾಗ ಇಲ್ಲವೇ ಮನಸ್ಸಿಗೆ ಕೊಂಚ ಬೇಸರವಾಗಿದ್ದಾಗ, ಒಬ್ಬರೇ ಕಣಿವೆಗೆ ಹೋಗಿಬಿಡುತ್ತೇವೆ. ಅಲ್ಲಿನ ಮಾನವರಹಿತ ವಾತಾವರಣದಲ್ಲಿ ಹಿತವಾದ ಹವೆಯನ್ನು ಆಸ್ವಾದಿಸುತ್ತಾ, ಪ್ರಕೃತಿಮಾತೆಯ ಮಡಿಲಿನಲ್ಲಿ ನಿದ್ದೆಹೋಗುತ್ತೇವೆ. ಮರಳಿ ಬರುವಷ್ಟರಲ್ಲಿ ಜಡತ್ವವೆಲ್ಲ ಮರೆಯಾಗಿದ್ದು, ಉತ್ಸಾಹ ಮೂಡಿರುತ್ತದೆ. ಗಂಟೆಗಟ್ಟಲೆ ಅಲ್ಲಿ ಕುಳಿತ್ ಎದ್ದು ಬಂದರೆ ಮತ್ತೊಮ್ಮೆ ಕೆಲಸದಲ್ಲಿ ತೊಡಗಿಸಿಕೊಳ್ಳಲು ಶಕ್ತಿ ಬರುತ್ತದೆ." ಎಂದರು ರಘುವೀರರು.

ಇದಕ್ಕೆ ಸಹಮತ ವ್ಯಕ್ತಪಡಿಸಿದ ಚವ್ಹಾಣರು, "ಪುಷ್ಪಗಳ ಕಣಿವೆಯಷ್ಟೇ ಅಲ್ಲ, ಇಲ್ಲಿ ಸುತ್ತಮುತ್ತಲಿರುವ ಜಾಗಗಳೆಲ್ಲವೂ ಹಾಗೆಯೇ. ನೀವು ಕೆಳಗಿನಿಂದ ಬರುತ್ತಾ, ಭ್ಯುಂದರ್ ಊರಿನ ಸಮೀಪ 'ಕಾಕ್ ಭುಸಂಡಿ' ಎಂಬಲ್ಲಿಗೆ ದಾರಿಯಿದ್ದುದನ್ನು ಕಂಡಿರಲ್ಲವೇ" ಎಂದು ಕೇಳಿದರು. ಕಾಕ್ ಭುಸಂಡಿ! ಈ ವಿಚಿತ್ರ ಹೆಸರು ಇವರ ಬಾಯಲ್ಲೂ ಬರುತ್ತಿದೆಯೆಂದರೆ ಅಲ್ಲೇನಿರಬಹುದೆಂಬ ಕುತೂಹಲ, ತಡೆಯದೆ ಕೇಳಿಬಿಟ್ಟೆ.

"ಘಾಂಘರಿಯಾದಿಂದ ಕಾಕ್ ಭುಸಂಡಿಗೆ ಹೋಗಿ ಬರಲು ಮೂರು ದಿನಗಳ ಚಾರಣ ಕೈಗೊಳ್ಳಬೇಕು. ವಿರಳಾತಿವಿರಳ ಜನ ಹೋಗುವ ಜಾಗವದು. ಇಲ್ಲಿಗೆ ಬಂದು ಮಾರ್ಗದರ್ಶಿಯೊಬ್ಬನನ್ನು ನೇಮಿಸಿಕೊಂಡು ಹೋಗುವ ಜನರಿದ್ದಾರೆ. ಕಾಡಿನ ನಡುವಿನಲ್ಲಿ ಡೇರೆ ಕಟ್ಟಿಕೊಂಡು ರಾತ್ರಿ ಕಳೆಯಬೇಕಾದ ಅಪೂರ್ವ ಅನುಭವ ನೀಡುವ ಚಾರಣವದು. ತುಂಬಾ ಸುಂದರವಾಗಿದೆ ಕಾಕ್ ಭುಸಂಡಿ. ಅಲ್ಲೊಂದು ಸರೋವರ ಕೂಡಾ ಇದೆ" ಎಂದು ವಿವರಿಸಿದರು. ವಿಚಿತ್ರ ಹೆಸರಿನ ಹಿಂದೆ ಇಷ್ಟೆಲ್ಲ ಕುತೂಹಲಕಾರಿ ಅಂಶವುಂಟೇ ಎಂದು ಆಶ್ಚರ್ಯವಾಯಿತು.

ಮುಂದುವರಿಯುತ್ತ, "ಚಳಿಗಾಲದಲ್ಲಿ ಇಲ್ಲಿನ ಜನರು ಜೀವನೋಪಾಯಕ್ಕೆ ಏನು ಮಾಡುವರು?" ಎಂದು ಕೇಳಿದೆ. ಅವರ ಉತ್ತರ, ವಿವರಣೆ ಸೊಗಸಾಗಿತ್ತು. "ನೋಡಿ, ಇಲ್ಲಿ ವ್ಯಾಪಾರ ಮಾಡುವ ಎಲ್ಲರೂ ಚಳಿಗಾಲದಲ್ಲಿ ಬೇರೆ ಉದ್ಯೋಗದಲ್ಲಿ ನಿರತರಾಗುತ್ತಾರೆ. ನಾನು ಹರಿದ್ವಾರದಲ್ಲಿ ರೈಲ್ವೆ ಇಲಾಖೆಯಲ್ಲಿ ನೌಕರಿ ಮಾಡುತ್ತೇನೆ, ಹೇಮಕುಂಡ ಯಾತ್ರೆಯ ಸಂದರ್ಭದಲ್ಲಿ ಕೆಲವು ವಾರಗಳ ಕಾಲ ರಜೆ ಹಾಕಿ ಇಲ್ಲಿ ಬಂದು ಹೋಟೆಲ್ ನೋಡಿಕೊಳ್ಳುತ್ತೇನೆ. ನನ್ನ ತಮ್ಮ Border Security Force ಅಲ್ಲಿ

ಕಾರ್ಯನಿರ್ವಹಿಸುತ್ತಾನೆ. ರಜೆಯ ನಿಮಿತ್ತ ಇಲ್ಲಿಗೆ ಬಂದು ನನ್ನ ಸಹಾಯ ಮಾಡುತ್ತಿದ್ದಾನೆ. ಹೋಟೆಲ್ ನಿರ್ವಹಣೆ ಕಷ್ಟಕರ, ಆದರೂ ಸಂತೋಷದಾಯಕವಾದದ್ದು."

"ಇಲ್ಲಿನ ಜನರೆಲ್ಲರೂ ಸಂತೋಷದಿಂದಿರುವವರೇ. ನಾನು ನಗರದ ಜೀವನವನ್ನೂ, ಇಲ್ಲಿನ ಬದುಕನ್ನೂ ಕಂಡಿರುವವನು. ಅಲ್ಲಿ ಸದಾ ಅದೇನೋ ಒತ್ತಡ, ಧಾವಂತ ಇದ್ದೇ ಇರುತ್ತದೆ. ಇಲ್ಲಿರುವ ಜನ ನಿರ್ಯೋಚನೆಯಿಂದ, ಸುಖವಾಗಿರುತ್ತಾರೆ. ಹೌದು, ಕೈಗೆ ಸಿಗುವ ಹಣ ಕಡಿಮೆಯೇ. ಆದರೇನಂತೆ, ನೆಮ್ಮದಿಗೇನೂ ಕೊರತೆಯಿಲ್ಲವಲ್ಲ ಇಲ್ಲಿ. ಏನಾದರೂ ಕಷ್ಟವಾದರೆ ಹಂಚಿಕೊಳ್ಳಲು ನಮ್ಮವರೆಂದು ಅನೇಕರು ಇರುತ್ತಾರೆ, ಕಲುಷಿತವಲ್ಲದ ಉತ್ತಮ ಹವೆಯಿಂದಾಗಿ ಆರೋಗ್ಯ ಸಹ ಚೆನ್ನಾಗಿರುತ್ತದೆ. ಪರ್ವತಗಳ ಕೆಳಗೆ ಮತ್ತೊಂದು ಪ್ರಪಂಚವೊಂದಿದೆ ಎಂಬುದರ ಪರಿವೆಯೇ ಇಲ್ಲದೆ ಹಾಯಾಗಿ ಜೀವನ ನಡೆಸುತ್ತಾರೆ. ನಿಜವಾಗಿ ಎಷ್ಟೋ ಜನರಿಗೆ ಇಲ್ಲಿ ನಮ್ಮನ್ನಾಳುವ ಪ್ರಭುಗಳ ಹೆಸರಾಗಲೀ, ಸ್ಥಳೀಯ ಅಧಿಕಾರಿಗಳ ಹೆಸರಾಗಲೀ ಗೊತ್ತಿರುವುದಿಲ್ಲ. ಬಾಹ್ಯ ಜಗತ್ತಿನಲ್ಲಿ ನಡೆಯುವ ವಿದ್ಯಮಾನಗಳ ಅರಿವಿರುವುದಿಲ್ಲ. ಆದರೇನಂತೆ, ನಮ್ಮದೇ ಜಗತ್ತಿನಲ್ಲಿ ಸುಖವಾಗಿಲ್ಲವೇ ನಾವು!"

"ಹಾಗೆಂದು ಸಂಪೂರ್ಣವಾಗಿ ಸಂಪರ್ಕ ಕಳೆದುಕೊಳ್ಳುವುದನ್ನೂ ನಾನು ಒಪ್ಪಿಕೊಳ್ಳುವುದಿಲ್ಲ. ನಗರಗಳಲ್ಲೂ ಎಷ್ಟೋ ಉತ್ತಮ ಸೌಕರ್ಯಗಳಿರುತ್ತವೆ. ಹೊಸಹೊಸ ತಂತ್ರಜ್ಞಾನದ ಬಳಕೆ ನಮ್ಮ ಇಲ್ಲಿಯ ವ್ಯವಹಾರವನ್ನು ಇನ್ನಷ್ಟು ಸುಗಮಗೊಳಿಸಿ, ಒಂದಷ್ಟು ಲಾಭವನ್ನೂ ತಂದುಕೊಡುತ್ತದೆ. ಪ್ರಗತಿ ಹೊಂದುವುದು ಸಹ ಇಂದಿನ ಯುಗದಲ್ಲಿ ಅವಶ್ಯಕ. ಅದೇ ಧೋರಣೆಯಿಂದಲೇ, ಬಹಳ ಹಣ ಖರ್ಚಾದರೂ ಹೋಟೆಲ್‌ಗೆ ಅನೇಕ ಸವಲತ್ತುಗಳನ್ನು ಅಳವಡಿಸುತ್ತಿದ್ದೇನೆ. ಕೆಳಗಿನಿಂದ ಕಟ್ಟಡ ಸಾಮಗ್ರಿ ತರಿಸಲು ಎರಡು ದಿನ ಬೇಕು. ಅಪಾರ ದುಡ್ಡು ಸಹ ನೀಡಬೇಕು. ಕೆಲವೊಮ್ಮೆ ಹತ್ತುಪಟ್ಟು ದುಬಾರಿಯಾದರೂ ಆಗುತ್ತದೆ. ಆದರೂ ಇವೆಲ್ಲ ಬೇಕೇಬೇಕು. ಮುಂದುವರಿಯಲೇಬೇಕು."

ಬೆಲೆಯೇರಿಕೆಯ ವಿಷಯ ಬಂದಾಗ "ಇಲ್ಲಿ ಎಲ್ಲಾ ವಸ್ತುಗಳಿಗೂ, ತಿನಿಸುಗಳಿಗೂ ತುಂಬಾ ತುಂಬಾ ದುಬಾರಿ!" ಎಂದುಲಿದೆ. "ಹಾಗಲ್ಲ, ನೀವು ಮತ್ತೊಂದು ದೃಷ್ಟಿಕೋನದಿಂದಲೂ ನೋಡಬೇಕು. ಗೋವಿಂದಘಾಟ್‌ನಲ್ಲಿ ಇಪ್ಪತ್ತು ರೂಪಾಯಿಯಿರುವ ಒಂದು ಶೀಷೆ ನೀರು, ಘಾಂಘರಿಯಾಕ್ಕೆ ಬರುವಷ್ಟರಲ್ಲಿ ಐವತ್ತು ರೂಪಾಯಿಯಾಗುತ್ತದೆ. ಆದರೆ ಅದನ್ನು ಮೇಲಕ್ಕೆ ತರುವ ವೆಚ್ಚ, ಕುದುರೆಗೆ–ಮಾಲೀಕನಿಗೆ ಕೊಡಬೇಕಾದ ಬಾಡಿಗೆ ಇವನ್ನೆಲ್ಲವನ್ನೂ ಗಣನೆಗೆ ತೆಗೆದುಕೊಳ್ಳಬೇಕು. ಇಲ್ಲಿ ಐವತ್ತು ರೂಪಾಯಿಯಿರುವ ನೀರು, ಹೇಮಕುಂಡದಲ್ಲಿ ಎಪ್ಪತ್ತು ರೂಪಾಯಿಯಿರುತ್ತದೆ. ಹೇಮಕುಂಡಕ್ಕೆ ಹೋಗುವ ಕುದುರೆಯ ಬಾಡಿಗೆ ಅತಿಹೆಚ್ಚು."

"ಅಷ್ಟೇ ಅಲ್ಲ. ಆ ಮಾರ್ಗದಲ್ಲಿರುವ ಅಂಗಡಿಗಳ ಮಾಲೀಕರು ರಾತ್ರಿಯ ವೇಳೆ ಅಂಗಡಿಯಲ್ಲೇ ಮಲಗುತ್ತಾರೆ. ಎರಡು ಗಂಟೆಗಳ ಕಾಲ ಅಲ್ಲಿದ್ದ ನಿಮಗೆ ಆಮ್ಲಜನಕದ ಕೊರತೆಯಾಗುತ್ತಿರುವಂತೆ ಭಾಸವಾಗಿಲ್ಲವೇ? ಮತ್ತೆ ವಾರಗಟ್ಟಲೆ ಅಲ್ಲಿ ಕಾಲ ಕಳೆಯುವ ಅವರಿಗೆ ಹೇಗಾಗಬೇಕು! ಜೊತೆಗೆ, ರಾತ್ರಿಯ ವೇಳೆ ಪ್ರಾಣಿಗಳು ಓಡಾಡುವುದುಂಟು. ಕರಡಿಗಳೂ, ಚಿರತೆಗಳೂ ಹಿಮದ ಮೇಲೆ ಸಂಚರಿಸುತ್ತವೆ. ಅವುಗಳ ಕಾಲಿನ ಹೊಡೆತಕ್ಕೆ ಸಿಲುಕಿ ಬೀಳತೊಡಗುವ ಸಣ್ಣಪುಟ್ಟ ಕಲ್ಲುಗಳೂ, ಬಂಡೆಗಳೂ ದೊಡ್ಡ ಭೂಕುಸಿತವನ್ನು ಪ್ರಾರಂಭಮಾಡುವ ಸಾಮರ್ಥ್ಯವುಳ್ಳವು. ಹಿಮಾಲಯದಲ್ಲಿ ಆಗುವ ಅನೇಕ ಭೂಕುಸಿತಗಳಿಗೆ ಇದೇ ಕಾರಣ. ಯಾವಾಗ ಏನಾಗುತ್ತದೋ ಎಂಬ ಚಿಂತೆ ಸದಾ ಇರುತ್ತದೆ. ಈ ಭಯದಿಂದಲೇ ಅವರು ರಾತ್ರಿ ನಿದ್ದೆಹೋಗಬೇಕು. ಪರಿಸ್ಥಿತಿ ಹೀಗೆಲ್ಲ ಇದ್ದಾಗ ಒದಗಿಸುವ ಸೇವೆ ದುಬಾರಿಯಾಗುವುದು ನ್ಯಾಯ ತಾನೆ?" ಅವರು ಹೇಳಿದ್ದು ನೂರಕ್ಕೆ ನೂರರಷ್ಟು ಸತ್ಯ.

"ಹಣ ಹೆಚ್ಚು ಎಂದು ನಮ್ಮ ಅರಿವಿಗೂ ಬಂದಿದೆ. ಹಲವಾರು ವರ್ಷಗಳಿಂದ ಗೋವಿಂದಘಾಟ್‌ನಿಂದ ಘಾಂಘರಿಯಾಕ್ಕೆ ರಸ್ತೆ ಮಾಡಲು ಸರ್ಕಾರಕ್ಕೆ ಮನವಿ ಸಲ್ಲಿಸುತ್ತಲೇ ಇದ್ದೇವೆ. ಎಷ್ಟೋ ವರ್ಷಗಳ ನಿರಂತರ ಹೋರಾಟದ ಫಲವಾಗಿ, ಗೋವಿಂದಘಾಟ್‌ನಿಂದ ಪುಲ್ನಾದವರೆಗೂ, ಅಂದರೆ ಎರಡು ಕಿ.ಮೀ.ಗಳ ರಸ್ತೆ ಮಂಜೂರಾಗಿ, ಕಾಮಗಾರಿ ಸಹ ಪ್ರಾರಂಭವಾಗಿದೆ. ಅದು ಯಾವ ಕಾಲಕ್ಕೆ ಘಾಂಘರಿಯಾದವರೆಗೂ ವಿಸ್ತರಣೆಯಾಗುವುದೋ ಗೊತ್ತಿಲ್ಲ. ಈ ಮಧ್ಯೆ ಕೇಬಲ್ ಕಾರ್ ಸಹ ಮಾಡಬೇಕೆಂಬ ಯೋಜನೆಯಿದೆ. ಸದ್ಯಕ್ಕೆ ರಸ್ತೆಯಾದರೆ ಸಾಕು. ಆಗ ಎಲ್ಲರಿಗೂ ಅನುಕೂಲ. ಕೆಲದಿನಗಳ ಹಿಂದಷ್ಟೇ ಎಲ್ಲ ಹೋಟೆಲ್‌ಗಳ ಮಾಲೀಕರೂ ಸೇರಿ ಮತ್ತೊಂದು ಮನವಿಪತ್ರ ಕೊಟ್ಟಿದ್ದೇವೆ. ಫಲ ದೊರೆಯಲು ಬಹಳ ಕಾಲ ಬೇಕಾಗಬಹುದು. ಇಲ್ಲಿಗೆ ದೂರವಾಣಿ ಸಂಪರ್ಕವೂ ಇಲ್ಲ. ಹಿಂದೆ ಉಪಗ್ರಹಗಳ ಮೂಲಕ ಕೆಲಸಮಾಡುವ ದೂರವಾಣಿ ಇತ್ತು (Satellite Phone). ಆಗ ಒಂದು ಬಾರಿಗೆ ಒಂದೇ ಕರೆ ಮಾಡಲು ಸಾಧ್ಯವಿತ್ತು. ಈಗ ಕೆಲವು ಮೊಬೈಲ್ ಕಂಪೆನಿಗಳ ಸಂಪರ್ಕ ಸಿಗುತ್ತದೆಯಿಲ್ಲಿ. ಆದರೂ ದೂರವಾಣಿ ಕರೆ ಮಾಡುವುದು ಅಷ್ಟು ಸುಲಭವಲ್ಲ ಎಂದು ನಿಮ್ಮ ಅನುಭವಕ್ಕೂ ಬಂದಿರಬೇಕು. ಬದಲಾವಣೆ ಆಗುತ್ತಿದೆ. ಎಲ್ಲದಕ್ಕೂ ಸಮಯ ಬೇಕಷ್ಟೇ."

ರಾತ್ರಿಯ ಶೀತಲಹವೆ ಚಳಿಯ ಅನುಭವ ಕೊಡುತ್ತಿದ್ದರೂ ಚವ್ಹಾಣರ ಸ್ನೇಹಭರಿತ, ಸತ್ತ್ವಪೂರಿತ ವಾಗ್ಝರಿಯಲ್ಲಿ ಮೀಯುತ್ತಾ ಬೇರೆಲ್ಲವನ್ನೂ ಮರೆತಿದ್ದೆವು. ನಮ್ಮೊಂದಿಗೆ ಒಬ್ಬ ಸಿಖ್ ವ್ಯಕ್ತಿ ಸಹ ಬಂದು ಸೇರಿದ್ದನ್ನು ಗಮನಿಸಿಯೇ ಇರಲಿಲ್ಲ. ಅವನ ಸಂಬಂಧಿಕರು ಯಾರೋ ಬಂದು ಪಂಜಾಬಿಯಲ್ಲಿ ಏನೋ ಜೋರಾಗಿ ಕೂಗಿ ಹೇಳಿದಾಗಲೇ ವಾಸ್ತವಕ್ಕೆ ಬಂದದ್ದು. ಚವ್ಹಾಣರು ನಗುತ್ತಾ ಅವನಿಗೆ, "ನಿಮ್ಮನ್ನು

ನೋಡಿ ಅವರಿಗೆ ಚಳಿಯಾಗುತ್ತಿದೆ. ಹೋಗಿ ಮಲಗಿಕೊಳ್ಳಿ" ಎಂದರು. ಬಳಿಕ ನಮ್ಮತ್ತ ತಿರುಗಿ, "ಅಧಿಕ ಸಮಯವನ್ನು ತೆಗೆದುಕೊಂಡುಬಿಟ್ಟೆ. ಮಾತಿನ ಸರಣಿಯಲ್ಲಿ ಸಮಯವನ್ನು ಅಷ್ಟಾಗಿ ಲೆಕ್ಕಕ್ಕೆ ತೆಗೆದುಕೊಳ್ಳಲಿಲ್ಲ, ನೀವೂ ಸಹ ಹೋಗಿ ಮಲಗಿಕೊಳ್ಳಿ. ಬೆಳಿಗ್ಗೆ ಬೇಗನೆದ್ದು ಹೆಲಿಪ್ಯಾಡ್‌ಗೆ ಹೋದರೆ, ಸಾಧ್ಯವಾದಷ್ಟು ಬೇಗ ಕೆಳಗೆ ಹೋಗಿ ತಲುಪುವಿರಿ" ಎಂದರು. ಅವರಿಗೆ ಶುಭವನ್ನು ಕೋರಿ, ಬೀಳ್ಕೊಟ್ಟು ಹೊರಟೆವು.

ಚಳಿಯ ಕಾರಣದಿಂದ ಬಿಸಿಬಿಸಿ ಹಾಲು ಕುಡಿಯುವ ಮನಸ್ಸಾಗಿತ್ತು. ಪಕ್ಕದ ಅಂಗಡಿಗೆ ಹೋದಾಗ ಜಾಮೂನ್ ಸಹ ಇದ್ದುದು ಕಂಡು, ಅದನ್ನೂ ತಿನ್ನುವ ಆಸೆಯಾಯಿತು. ಉತ್ತಮ ಮಾತುಗಳಿಂದ, ಅನುಭವಗಳಿಂದ ಸಾಂಕೇತಿಕವಾಗಿ ತುಂಬಿದ್ದ ಹೊಟ್ಟೆಯನ್ನು ಆಹಾರದಿಂದ ಮತ್ತೊಮ್ಮೆ ತುಂಬಿಸಿಕೊಂಡು, ಕೊಠಡಿಗೆ ಬಂದು ಮಲಗಿಕೊಂಡರೆ ಚವ್ಹಾಣರ ಮಾತುಗಳು ಮತ್ತೆಮತ್ತೆ ನೆನಪಾಗುತ್ತಿದ್ದವು. ಕಷ್ಟಜೀವನದಲ್ಲೂ ಸುಖ–ನೆಮ್ಮದಿಯನ್ನು ಕಂಡುಕೊಳ್ಳುವ ಅವರುಗಳೆಲ್ಲರ ಜೀವನೋತ್ಸಾಹವನ್ನು ಮೆಚ್ಚಿಕೊಂಡು, ಇಂತಹ ಒಂದು ಅದ್ಭುತ ಅನುಭವ ನೀಡಿದ ಹಿಮಾಲಯಕ್ಕೆ ಮನದಲ್ಲಿಯೇ ಧನ್ಯವಾದ ಹೇಳುತ್ತಿದ್ದರೆ, ಪುಷ್ಪಗಳ ಕಣಿವೆ – ಹೇಮಕುಂಡ್ ಸಾಹಿಬ್‌ಗಳ ಮನಮೋಹಕ ದೃಶ್ಯಗಳು ಕಣ್ಮುಂದೆಯೇ ಓಡಾಡುತ್ತಿದ್ದವು.

# ಅಲಕನಂದೆಯ ಮಡಿಲಿನಲ್ಲಿ

೧೫ ಜೂನ್ ೨೦೧೩... ಬೆಳಿಗ್ಗೆ ಆರೂವರೆಗೆ ಎದ್ದರೆ ಮಳೆ! ನಡೆದು ಹೋಗಲೂ ಸಾಧ್ಯವಿಲ್ಲವಂತೆ ಮಳೆ ಎಡೆಬಿಡದೆ ಸುರಿಯುತ್ತಿತ್ತು. ಇನ್ನು ಹೆಲಿಕಾಪ್ಟರ್ ಹೇಗೆ ಹಾರಾಡುವುದೋ ಎಂಬ ಚಿಂತೆ ಕಾಡತೊಡಗಿತು. ಆದರೂ ತಯಾರಾಗಿ, Raincoat ಅಂಗಿಯನ್ನು ತೊಟ್ಟು ಹೋಟೆಲ್‌ನವರಿಗೆಲ್ಲರಿಗೂ ಕೃತಜ್ಞತೆಗಳನ್ನು ತಿಳಿಸಿ, ಶುಭಕೋರಿ ಹೆಲಿಪ್ಯಾಡ್‌ನತ್ತ ನಡೆದೆವು.

ಇಳಿಜಾರಿನ ರಸ್ತೆ ಮಳೆಯ ಕಾರಣದಿಂದ ಜಾರಿಕೆಯಿಂದಲೂ ಕೂಡಿದ್ದು, ಒಂದು ಕಿ.ಮೀ. ನಡೆಯಲು ಸಹ ಕಷ್ಟವಾಗುತ್ತಿತ್ತು. ಜೊತೆಗೆ ನಿರಂತರ ಮಳೆಯ ನೀರು ಕಣ್ಣಿನ ರೆಪ್ಪೆಗೆ ಬಲವಾಗಿ ಅಪ್ಪಳಿಸುತ್ತಿತ್ತು. ಹಾಗೂ ಹೀಗೂ ಹೆಲಿಪ್ಯಾಡ್ ತಲುಪಿದ ನಮಗೆ ಆಘಾತವಾಗುವ ಪರಿಸ್ಥಿತಿಯೊಂದು ಎದುರಾಯಿತು. ಬೇಗ ಹೋದರೆ ಜನ ಕಡಿಮೆಯಿರುತ್ತಾರೆಂಬ ನಮ್ಮ ನಂಬಿಕೆಗೆ ವ್ಯತಿರಿಕ್ತವಾಗಿ ಅಲ್ಲಿ ಜನಸಾಗರವೇ ನೆರೆದಿತ್ತು. ಮೋಡ–ಮಳೆಯ ಕಾರಣದಿಂದ ಹೆಲಿಕಾಪ್ಟರ್ ಹಾರಾಟ ಪ್ರಾರಂಭವಾಗಿರಲಿಲ್ಲ. ಎರಡು ಕಂಪೆನಿಗಳ ಡೇರೆಗಳಲ್ಲೂ ಜನ ಕಾದು ಕುಳಿತಿದ್ದರು.

ಎರಡೂ ಕಂಪೆನಿಗಳ ಪ್ರಯಾಣಿಕರ ಪಟ್ಟಿಗಳಲ್ಲಿ ನಮ್ಮ ಹೆಸರಿರಲಿಲ್ಲ. ಹಿಂದಿನ ದಿನ ಹೋಟೆಲ್‌ನಲ್ಲಿ ಹೆಸರು ಕೊಟ್ಟಿದ್ದೆವು ಎಂದದ್ದಕ್ಕೆ, ಹೋಟೆಲ್‌ನವರ ಪಟ್ಟಿಯನ್ನು ನಾವು ಪರಿಗಣಿಸುವುದಿಲ್ಲ ಎಂಬ ಖಾರವಾದ ಉತ್ತರ ದೊರಕಿತು. ಸರಿ, ಮತ್ತೊಮ್ಮೆ ಹೆಸರು ಬರೆಸಿದೆವು. ಒಂದು ಪಟ್ಟಿಯಲ್ಲಿ ನಮಗಿಂತ ಮುಂದೆ ನೂರೈವತ್ತು ಮಂದಿಯೂ, ಮತ್ತೊಂದು ಪಟ್ಟಿಯಲ್ಲಿ ಸುಮಾರು ಅರವತ್ತು ಮಂದಿಯೂ ಇದ್ದರು. ಹೆಲಿಕಾಪ್ಟರ್ ಸಂಚಾರ ಪ್ರಾರಂಭವಾದರೂ ನಮ್ಮ ಸರದಿ ಬರಲು ಸುಮಾರು ಐದಾರು ಗಂಟೆಗಳ ಸಮಯದ ಅವಶ್ಯಕತೆಯಿತ್ತು!

ಏನು ಮಾಡುವುದೆಂದು ದಿಕ್ಕು ತೋಚದೆ ಡೇರೆಯಲ್ಲೇ ಕುಳಿತಿದ್ದೆವು. ನಡೆದು ಹೋಗೋಣವೆಂದರೂ ಜಡಿಮಳೆ! ನಮ್ಮ ರಾಜಕಾರಣಿಗಳಂತೆ ಕಾದುನೋಡುವತಂತ್ರವನ್ನು ಅನುಸರಿಸದೆ ವಿಧಿಯೇ ಇರಲಿಲ್ಲ. ಹಸಿವು ಬಾಧಿಸುತ್ತಿತ್ತು. ಹಲವರು ಡೇರೆಗೇ "ನೂಡಲ್ಸ್" ಸಹ ತರಿಸಿಕೊಂಡು ತಿನ್ನುತ್ತಿದ್ದುದನ್ನು ಕಂಡ ಮೇಲೆಯಂತೂ ಹಸಿವಿನ ತೀವ್ರತೆ ಹೆಚ್ಚಾಯಿತು. ಏನೂ ಮಾಡುವಂತಿರಲಿಲ್ಲ!

ಸುಮಾರು ಅರ್ಧಗಂಟೆ ಹಾಗೇ ಕಳೆದ ನಂತರ ಮಳೆ ನಿಧಾನವಾಗಿ ನಿಲ್ಲಲಾರಂಭಿಸಿತು. ಇದು ಶುಭ ಸೂಚನೆ. ಮುಂದಿನ ಕೆಲನಿಮಿಷಗಳಲ್ಲಿ ಮೋಡ ಕೂಡ ಕರಗತೊಡಗಿತು. ಯಾವಾಗ ಹೆಲಿಕಾಪ್ಟರ್ ಸೇವೆ

ಚಾಲೂ ಆಗುವುದೋ ಎಂದು ಅಲ್ಲಿ ನೆರೆದಿದ್ದ ಎಲ್ಲ ಜನರೂ ಕಾತರದಿಂದ ಆಗಸವನ್ನು ನೋಡುತ್ತಿರುವಂತೆಯೇ ದೂರದಲ್ಲಿ ಹಾರಿಬರುತ್ತಿದ್ದ ಹೆಲಿಕಾಪ್ಟರ್ ಗೋಚರವಾಯಿತು. ಅಲ್ಲಿಗೆ ನಾವು ತಡವಾಗಿಯಾದರೂ ಹೆಲಿಕಾಪ್ಟರ್‌ನಲ್ಲೇ ಹೋಗುವುದು ಖಚಿತವಾಯಿತು. ಕೆಳಗಿಳಿದ ಮೊದಲ ಹೆಲಿಕಾಪ್ಟರ್ ಮುಂದಿನ ಕೆಲವೇ ಕ್ಷಣಗಳಲ್ಲಿ ಆರು ಜನರನ್ನು ಕುಳ್ಳಿರಿಸಿಕೊಂಡು ಹೊರಟಿತು. ಅತಿಶೀಘ್ರದಲ್ಲೇ ಮತ್ತೊಂದು ಕಂಪೆನಿಯ ಹೆಲಿಕಾಪ್ಟರ್ ಕೂಡಾ ಅದೇ ಕಾರ್ಯವನ್ನು ಮಾಡಿತು.

ಇದ್ದಕ್ಕಿದ್ದಂತೆ ಮುಂದಿನ ಸರದಿಗೆ ಮೂರು ಜನ ಬೇಕೆಂದು ನಿರ್ವಾಹಕನೊಬ್ಬ ಕೂಗಹತ್ತಿದ. ಮೂವರಿರುವ ತಂಡದವರು ಯಾರಾದರೂ ಇದ್ದರೆ ಕೂಡಲೇ ಬರಬೇಕಾಗಿ ಕೂಗುತ್ತಿದ್ದ. ಅದು ಕಿವಿಗೆ ಬಿದ್ದೊಡನೆಯೇ ನಾವು ಅವನ ಬಳಿ ಓಡಿದೆವು. ಹಣ ಪಾವತಿ ಮಾಡಿ, Boarding Pass ಸ್ವೀಕರಿಸಿ ಹೆಲಿಪ್ಯಾಡ್‌ನ ಅಂಚಿನಲ್ಲಿ ನಿಂತೆವು. ನಮಗಿಂತ ಮುಂಚೆ ನೂರಕ್ಕಿಂತಲೂ ಅಧಿಕ ಜನರಿದ್ದರೂ, ಮೂವರ ಗುಂಪು ಬೇರಾವುದೇ ಇರದಿದ್ದು ನಮಗೆ ವರದಾನವಾಗಿತ್ತು! ಇನ್ನು ಕೆಲವೇ ನಿಮಿಷಗಳಲ್ಲಿ ನಮ್ಮ ಬದುಕಿನಲ್ಲಿ ಮೊದಲ ಬಾರಿಗೆ ಹೆಲಿಕಾಪ್ಟರ್ ಪ್ರಯಾಣ ಮಾಡಲಿದ್ದೆವು.

ಸುಮಾರು ಹದಿನೈದು ನಿಮಿಷಗಳ ತರುವಾಯ ನಾವು ಹೋಗಬೇಕಿದ್ದ ಹೆಲಿಕಾಪ್ಟರ್ ಘಾಂಘರಿಯಾ ಹೆಲಿಪ್ಯಾಡ್‌ನಲ್ಲಿ ಇಳಿಯಿತು. ಇಳಿಯುತ್ತಿದ್ದಂತೆಯೇ ನಮ್ಮ ಸಾಮಾನು–ಸರಂಜಾಮುಗಳನ್ನು ನಿರ್ವಾಹಕ ಹೆಲಿಕಾಪ್ಟರ್‌ನ ಹಿಂಬದಿಗೆ ತುರುಕಿದ. ಅಷ್ಟರಲ್ಲಿ ನಾವು ಆಸೀನರಾಗಿದ್ದೆವು. ನಿರ್ವಾಹಕ ಸಂಕೇತ ನೀಡಿದ ಕೂಡಲೇ ಹೆಲಿಕಾಪ್ಟರ್ ನೆಲ ಬಿಟ್ಟು ಮೇಲೇರಿತು.

ಹತ್ತುವ ಮುನ್ನವೇ ಚಾಲಕನ ಜೊತೆ ಮಾತನಾಡಬಾರದೆಂದೂ, ಅವನ ಪಕ್ಕದಲ್ಲಿ ಕೂರುವವರು ಏನನ್ನೂ ಮುಟ್ಟಬಾರದೆಂದೂ ನಮಗೆಲ್ಲರಿಗೂ ಕಟ್ಟುನಿಟ್ಟಾದ ಸೂಚನೆ ನೀಡಲಾಗಿತ್ತು. ಚಾಲಕನ ಪಕ್ಕದಲ್ಲಿ ಕುಳಿತ ನಾನು ಅತ್ತಿತ್ತ ನೋಡುವುದರೊಳಗಾಗಿ ಘಾಂಘರಿಯಾ ಹಿಂದೆ ಹೋಗಿಯಾಗಿತ್ತು. ಚಾಲಕ ಗಂಭೀರವದನದಿಂದ ಗೋವಿಂದಘಾಟ್‌ನ ಅಧಿಕಾರಿಯಿಂದ ಸೂಚನೆ ಸ್ವೀಕರಿಸುತ್ತಾ ಓಡಿಸುತ್ತಿದ್ದ. ನನ್ನ ಕಣ್ಣೆದುರಿಗೇ ಇದ್ದ ರಾಡಾರ್ ಯಂತ್ರದಲ್ಲಿ ನಾವು ಸರಿಯಾದ ಮಾರ್ಗದಲ್ಲಿ ಹೋಗುತ್ತಿದ್ದೇವೆಂಬುದು ಸ್ಪಷ್ಟವಾಗಿ ಗೊತ್ತಾಗುತ್ತಿತ್ತು.

ಎತ್ತರದಿಂದ ಕಾಡು ಮತ್ತಷ್ಟು ಸುಂದರವಾಗಿ ಕಾಣುತ್ತಿತ್ತು. ಕೆಳಗೆ ಹರಿಯುವ ಪುಷ್ಪವತಿ ನದಿಯ ನೀರು ಸಣ್ಣ ಬೆಳ್ಳಗಿನ ಗೆರೆಯಂತೆ ಕಾಣಿಸುತ್ತಿತ್ತು. ಕೆಳಗಿನ ಹಾದಿಯಲ್ಲೆಲ್ಲ ಸಂಚರಿಸುತ್ತಿದ್ದ ಜನರು ಪುಟ್ಟ ಆಟಿಕೆಗಳಂತೆ ಕಂಡುಬರುತ್ತಿದ್ದರು. ಅವರ ವಿವಿಧ ಬಣ್ಣದ ಬಟ್ಟೆಗಳೂ, ಪೇಟಗಳೂ ಹಸಿರು ಕಾನನದ

ನಡುವೆ ಅಲ್ಲಲ್ಲಿ ಬಿದ್ದ ಬಣ್ಣದ ಬಿಂದುಗಳೇನೋ ಎಂಬಂತಿದ್ದವು. ಬಲುಬೇಗ ಎತ್ತರ ಕಳೆದುಕೊಳ್ಳುತ್ತಿದ್ದೆವು. ಹಾಗೇ ನೋಡುತ್ತಿರುವಂತೆಯೇ ದೂರದಲ್ಲಿ ಹೆದ್ದಾರಿ ಕಾಣಿಸಿ, ಅದು ವೇಗವಾಗಿ ಸಮೀಪಿಸತೊಡಗಿತು. ಅದಾಗಿ ಕೆಲವೇ ಕ್ಷಣಗಳಲ್ಲಿ ಗೋವಿಂದಘಾಟ್‌ನ ಹೆಲಿಪ್ಯಾಡ್‌ನಲ್ಲಿ ನಮ್ಮನ್ನು ಬಿಸಾಕಿ ಹೆಲಿಕಾಪ್ಟರ್ ಮೇಲಕ್ಕೆ ಹೋಗುತ್ತಿರುವ ಪ್ರಯಾಣಿಕರನ್ನು ಹೊತ್ತು ಮರೆಯಾಯಿತು.

ಕೆಳಗಿಳಿದು ನಮ್ಮ ಬ್ಯಾಗ್‌ಗಳನ್ನು ತೆಗೆದುಕೊಂಡು ಹೆಲಿಕಾಪ್ಟರ್ ಹೋದ ದಿಕ್ಕಿನತ್ತ ದೃಷ್ಟಿಸಿ ನೋಡಿದೆವಾದರೂ, ಅದು ಕಣ್ಮರೆಯಾಗಿಯಾಗಿತ್ತು. ಕಣ್ಣು ಮುಚ್ಚಿ ತೆಗೆಯುವಷ್ಟರಲ್ಲಿ ಗೋವಿಂದಘಾಟ್ ತಲುಪಿಯಾಗಿತ್ತು. ಮೇಲಕ್ಕೆ ಹೋಗುವಾಗ ಚಾರಣದ ಹಾದಿಯಲ್ಲಿ ಎಂಟು ಗಂಟೆಗಳ ಕಾಲ ನಡೆದು ಸಾಗಿದ್ದ ನಾವು ಹಿಂದಿರುಗಿ ಬರಲು ತೆಗೆದುಕೊಂಡ ಸಮಯ ಕೇವಲ ಮೂರು ನಿಮಿಷಗಳು! ಮೂರು ನಿಮಿಷಗಳ ಕಾಲದ ನಮ್ಮ ಮೊದಲ ಹೆಲಿಕಾಪ್ಟರ್ ಪ್ರಯಾಣಕ್ಕೆ ನಾವು ವ್ಯಯಿಸಿದ್ದು ತಲಾ ೨೩೦೦ ರೂಪಾಯಿಗಳು. ಹಣಕ್ಕಿಂತ ಆ ಅನುಭವ ಮಿಗಿಲಾದುದಾಗಿತ್ತು.

ಹೆಲಿಪ್ಯಾಡ್ ದಿಣ್ಣೆಯೊಂದರ ಕೆಳಗಿತ್ತು. ದಿಣ್ಣೆಯನ್ನೇರಿ ಹೆದ್ದಾರಿಗೆ ಹೋಗುತ್ತಾ, ಈ ಪ್ರವಾಸದಲ್ಲೇ ನಮ್ಮ ಮೊದಲ ಹೆಲಿಕಾಪ್ಟರ್ ಯಾನ ಸಹ ಮಾಡಿಯಾಯಿತಲ್ಲ ಎಂಬ ಸಂತೋಷದಿಂದ ಆ ಮೂರು ನಿಮಿಷಗಳನ್ನು ಮೆಲುಕು ಹಾಕಿಕೊಂಡು ನಡೆದೆವು. ಚಾಲಕನನ್ನೂ, ಕಾರನ್ನೂ ಹುಡುಕಿಕೊಂಡು ಹೆದ್ದಾರಿಯೆಡೆಗೆ ಹೋದಾಗ, ಅಲ್ಲಿ ರಘುವೀರ್ ಅವರು ಭೇಟಿಯಾದರು. ಉಭಯ ಕುಶಲೋಪರಿಗಳ ನಂತರ ಕೆಲವು ಮಾತುಗಳನ್ನಾಡಿ ಅವರನ್ನು ಬೀಳ್ಕೊಟ್ಟು, ನಾವು ಮೂರು ದಿನಗಳ ಹಿಂದೆ ತಿಂಡಿ ತಿಂದಿದ್ದ ಹೋಟೆಲ್‌ಗೆ ಹೋದೆವು.

ಗೋವಿಂದಘಾಟ್‌ನಲ್ಲೆಲ್ಲೂ ವಾಹನ ನಿಲ್ಲಿಸಲು ಸರಿಯಾದ ಸ್ಥಳ ದೊರಕದಿದ್ದರೆ ತಾನು ಅಲ್ಲಿಂದ ಮೂರು ಕಿ.ಮೀ. ದೂರದ ಪಾಂಡುಕೇಶ್ವರ ಗ್ರಾಮದ ಬಳಿಯಿರುತ್ತೇನೆಯೆಂದೂ, ನಾವು ಕೆಳಗೆ ಬರುವ ದಿವಸ ಬೆಳಿಗ್ಗೆಯೇ ಗೋವಿಂದಘಾಟ್‌ಗೆ ಬರುವೆನೆಂದೂ ಚಾಲಕ ಮೊದಲೇ ಹೇಳಿದ್ದ. ಅಂತೆಯೇ ಅವನು ಇಷ್ಟರಲ್ಲಿ ಬರಬೇಕಾಗಿತ್ತು. ಕರೆಯಾದರೂ ಮಾಡಿ ವಿಚಾರಿಸೋಣವೆಂದರೆ ನಮ್ಮ ಮೊಬೈಲ್ ಸಂಪರ್ಕ ಕಡಿತಗೊಂಡಿತ್ತು. ಅಪಾರ ಜನಸಂದಣಿಯಲ್ಲಿ ಈ ಪುಣ್ಯಾತ್ಮನನ್ನು ಎಲ್ಲಿ ಹುಡುಕುವುದೆಂದು ತೋಚಲಿಲ್ಲ. ಗೋವಿಂದಘಾಟ್‌ನ ಗುರುದ್ವಾರದ ರಸ್ತೆಯಲ್ಲಿ ದೂರವಾಣಿ ಕೇಂದ್ರಗಳಿವೆ, ಅಲ್ಲಿಂದ ಕರೆ ಮಾಡಬಹುದು ಎಂದು ಯಾರೋ ಹೇಳಿದರು. ಜಯರಾಮನನ್ನು ಹೋಟೆಲ್‌ನಲ್ಲಿಯೇ ಇರುವಂತೆ ತಿಳಿಸಿ, ಶ್ರೀಧರ್ ಮತ್ತು ನಾನು ದೂರವಾಣಿಯನ್ನು ಹುಡುಕಿಕೊಂಡು ಹೋದೆವು.

ಅರ್ಧಕ್ಕರ್ಧ ಪಂಜಾಬ್ ರಾಜ್ಯವೇ ಅಲ್ಲಿ ನೆರೆದಿದೆಯೇನೋ ಅನಿಸುವಷ್ಟು ಸಿಖ್ಖರು ಆ ರಸ್ತೆಯಲ್ಲಿದ್ದರು. ಅವರೆಲ್ಲರ ಮಧ್ಯೆ ನಡೆಯುತ್ತಾ ದೂರವಾಣಿಯೊಂದನ್ನು ಹುಡುಕುವಷ್ಟರಲ್ಲಿ ಸಾಕುಸಾಕಾಯಿತು. ಅಂತೂ ಸಿಕ್ಕ ದೂರವಾಣಿಯಿಂದ ಕರೆ ಮಾಡಿದರೆ, ಆ ಪುಣ್ಯಾತ್ಮನ ಮೊಬೈಲ್ "ಸ್ವಿಚ್ಡ್ ಆಫ್"! ಹೀಗೇ ನಾಲ್ಕೈದು ಬಾರಿ ಪ್ರಯತ್ನಿಸಿದರೂ ಅದೇ ಪುನರಾವರ್ತನೆ. ನಿಧಾನವಾಗಿ ಆ ಸ್ಥಿರ ದೂರವಾಣಿಗಳೂ ಕೆಲಸ ಮಾಡದಾದವು. ಮಳೆ ಬೇರೆ ಮತ್ತೊಮ್ಮೆ ಶುರುವಾಗುವ ಸೂಚನೆ ಕೊಡಲಾರಂಭಿಸಿತು. ಇನ್ನೇನು ಗತಿ ಎಂದು ಚಿಂತಿಸುತ್ತಾ ಮರಳಿ ಹೆದ್ದಾರಿಯ ಹೋಟೆಲ್‌ನತ್ತ ಸಾಗಿದರೆ, ಅಲ್ಲಿ ಜಯರಾಮ್ ಕಾರ್‌ನೆದುರು ನಿಂತಿದ್ದ!

ಚಾಲಕ ಬೆಳಿಗ್ಗೆಯೇ ಅಲ್ಲಿಗೆ ಬಂದಿದ್ದು, ಸುಮಾರು ಹೊತ್ತು ನಮ್ಮನ್ನು ಹುಡುಕಾಡುತ್ತಿದ್ದನಂತೆ. ಅವನ ಮೊಬೈಲ್ ಸಂಪರ್ಕ ಕೂಡಾ ಕಡಿತವಾಗಿತ್ತು. ಹೀಗೆ ಕಾರಣವಿಲ್ಲದೆ ಸುಮಾರು ಎರಡು ಗಂಟೆಗಳು ನಷ್ಟವಾಗಿದ್ದವು. ಆಗಿದ್ದನ್ನು ಯೋಚಿಸಿ ಲಾಭವಿಲ್ಲವೆಂದು, ತಿಂಡಿಯನ್ನು ತಿಂದು ಕಾರನ್ನೇರಿದೆವು. ಮುಂದಿನ ಪ್ರಯಾಣ ಬದರಿನಾಥ ಮತ್ತು ಮಾನಾ ಗ್ರಾಮಗಳಿಗೆ.

ಗೋವಿಂದಘಾಟ್‌ನಿಂದ ಬದರಿನಾಥ ಸುಮಾರು ೨೦ ಕಿ.ಮೀ. ದೂರದಲ್ಲಿದೆ. ಎತ್ತರದ ವ್ಯತ್ಯಾಸ ಸುಮಾರು ೧೮೦೦ ಮೀಟರ್ (ಬದರಿನಾಥದ ಎತ್ತರ ೩೨೦೦ ಮೀಟರ್ ಆಸುಪಾಸು). ದಾರಿಯಲ್ಲಿ ಪಾಂಡುಕೇಶ್ವರ ಮತ್ತು ಹನುಮಾನ್‌ಚಟ್ಟಿ ಎಂಬ ಗ್ರಾಮಗಳಿವೆ. ಎರಡೂ ಚಿಕ್ಕವೇ. ಹನುಮಾನ್‌ಚಟ್ಟಿಯವರೆಗೂ ರಸ್ತೆಯಲ್ಲಿನ ಏರಿಕೆ ಅಷ್ಟೇನಿಲ್ಲ. ಆದರೆ ಅಲ್ಲಿಂದ ಮುಂದೆ ೧೨ ಕಿ.ಮೀ. ಸಾಗುವಷ್ಟರಲ್ಲಿ ೧ ಕಿ.ಮೀ.ನಷ್ಟು ಎತ್ತರ ಗಳಿಸುತ್ತೇವೆ. ರಸ್ತೆ ಕೂಡಾ ಅಂಕುಡೊಂಕಾಗಿದ್ದು (zig-zag), ಎತ್ತರ ಕಠಿಣವಾಗಿದೆ. ವಾಹನ ಸಮರ್ಥವಾಗಿ ಓಡಿಸಲು ಎದೆಗಾರಿಕೆ, ಅನುಭವ ಬೇಕೆಂಬಂತಿದೆ. ಪಕ್ಕದಲ್ಲಿ ದೊಡ್ಡ ಸದ್ದು ಮಾಡುತ್ತಾ ಹರಿಯುವ ಅಲಕನಂದಾ ನದಿ ನಾವು ಬದರಿನಾಥದೆಡೆಗೆ ಸಾಗುತ್ತಿರುವಂತೆಯೇ ಹಳ್ಳದಲ್ಲಿ ಹರಿಯುವಂತೆ ಕಾಣುತ್ತದೆ.

ಬದರಿನಾಥದಲ್ಲಿ ಕಾಯ್ದಿರಿಸಿದ್ದ ಕೊಠಡಿ ಸೇರಿಕೊಳ್ಳುವ ಮುನ್ನ ಮಾನಾ ಗ್ರಾಮಕ್ಕೆ ಭೇಟಿ ಕೊಡೋಣವೆಂದು ಚಾಲಕ ಹೇಳಿದ. ಆಗಲೆಂದು ಸಮ್ಮತಿಸಿದೆವು. ಮಾನಾ ಗ್ರಾಮ ಬದರಿನಾಥದಿಂದ ಮೂರು ಕಿ.ಮೀ. ದೂರದಲ್ಲಿದ್ದು, ಆ ಸೀಮೆಯಲ್ಲಿ ಭಾರತದೇಶದ ಕಡೆಯ ಗ್ರಾಮವಾಗಿದೆ. ಮಾನಾ ಗ್ರಾಮದಿಂದಾಚೆಗೆ ಪರ್ವತವನ್ನೇರುತ್ತಾ ಹೋದರೆ ಚೀನಾ ದೇಶದ ಗಡಿ ತಲುಪಬಹುದು. ಆಯಕಟ್ಟಿನ ಸ್ಥಳದಲ್ಲಿರುವ ಮಾನಾ ಗ್ರಾಮದಲ್ಲಿ ಭಾರತೀಯ ಸೇನೆಯ ಛಾವಣಿಯಿದೆ. ಮಾನಾದಿಂದ ಮುಂದಕ್ಕೆ

ಸಾರ್ವಜನಿಕ ವಾಹನಗಳ ಸಂಚಾರ ನಿಷಿದ್ಧ. ಮುಂದಕ್ಕೆ ಸಾಗುವ ರಸ್ತೆ "ಮಾನಾ ಪಾಸ್" ಎಂಬಲ್ಲಿ ಚೀನಾದ ಗಡಿಯನ್ನು ಸೇರುತ್ತದೆ. ಸೇನೆಯವರಿಗೆ ಮಾತ್ರ ಅಲ್ಲಿಯವರೆಗೂ ಪ್ರವೇಶವುಂಟು.

ಮಾನಾ ಹಲವಾರು ಕಾರಣಗಳಿಂದಾಗಿ ಪ್ರಸಿದ್ಧಿ ಪಡೆದಿದೆ. ಗುಪ್ತಗಾಮಿನಿಯಾಗಿ ಹರಿಯುವ ಸರಸ್ವತಿ ನದಿ ಮಾನಾ ಸಮೀಪದ ಭೀಮ್‌ಪುಲ್ ಎಂಬಲ್ಲಿ ಗೋಚರಿಸುತ್ತದೆಂದು ಪ್ರತೀತಿ. ಇದಲ್ಲದೆ ಸತೋಪಂತ್ ಎಂಬಲ್ಲಿಯ ನೀರ್ಗಲ್ಲಿನ ಸನಿಹದಲ್ಲಿ ಅಲಕನಂದಾ ನದಿಯ ಉಗಮಸ್ಥಾನವಿದೆ. ವಸುಧಾರಾ ಎಂಬ ಜಲಪಾತವಿದೆ. ವ್ಯಾಸರು ಕುಳಿತು ಮಹಾಭಾರತವನ್ನು ರಚಿಸಿದರು ಎನ್ನಲಾದ ಗುಹೆಯೂ ಇದೆ. ಇವಿಷ್ಟೇ ಅಲ್ಲದೆ ಭಾರತದ ಕಟ್ಟಕಡೆಯ ಚಹಾ ಅಂಗಡಿಯೂ ಮಾನಾ ಗ್ರಾಮದಲ್ಲಿದೆ. ಅನೇಕ ಅಂಗಡಿಗಳು ತಮ್ಮದೇ ಕಡೆಯ ಚಹಾ ಅಂಗಡಿಯೆಂದು ಹೇಳಿಕೊಂಡರೂ ಸಹ ವ್ಯಾಸಗುಹೆಯ ಪಕ್ಕದಲ್ಲಿರುವ ಅಂಗಡಿಯೇ ಕಡೆಯ ಚಹಾ ಅಂಗಡಿ ಎಂದು ಅಧಿಕೃತ ಮಾನ್ಯತೆ ಪಡೆದಿದೆ.

ಮಾನಾ ಗ್ರಾಮದ ಬಾಗಿಲಿನವರೆಗೂ ವಾಹನ ಚಲಿಸುತ್ತದೆ. ಗ್ರಾಮದ ಒಳಕ್ಕೆ ಕಾಲಿಟ್ಟೊಡನೆ ಕಾಲುದಾರಿ ಕವಲೊಡೆಯುವುದು. ಎಡಕ್ಕೆ ಹೋದರೆ ಭೀಮ್‌ಪುಲ್‌ಗೂ, ಮುಂದೆ ವಸುಧಾರಾ ಜಲಪಾತಕ್ಕೂ ಹೋಗಬಹುದು. ಪ್ರಾಯಶಃ ಮುಂದುವರಿದರೆ ಸತೋಪಂತ್ ನೀರ್ಗಲ್ಲಿಗೂ, ಅಲ್ಲಿಂದ ಮುಂದೆ ಚೀನಾ ತೆಕ್ಕೆಯಲ್ಲಿರುವ ಟಿಬೆಟ್‌ಗೂ ಹೋಗಬಹುದೇನೋ, ಅದರ ಬಗ್ಗೆ ಮಾಹಿತಿ ಕೊಡುವವರು ಯಾರೂ ಇರಲಿಲ್ಲ. ಗಡಿಪ್ರದೇಶವಾಗಿರುವುದರಿಂದ ಭದ್ರತೆ ಹೆಚ್ಚಾಗಿಯೇ ಇತ್ತು. ಕವಲು ರಸ್ತೆಯ ಬಲಕ್ಕೆ ಹೋದಲ್ಲಿ ವ್ಯಾಸರ ಗುಹೆಗೂ, ಕಡೆಯ ಚಹಾ ಅಂಗಡಿಗೂ ಭೇಟಿ ನೀಡಬಹುದು.

ಭೀಮ್‌ಪುಲ್‌ನಲ್ಲಿ ಭೋರ್ಗರೆದು ಹರಿಯುವ ಸರಸ್ವತಿ ನದಿಯನ್ನು ನೋಡುವುದು ಕಣ್ಣಿಗೆ ಹಬ್ಬ. ಅದರ ಶಬ್ದ ಅದೆಷ್ಟು ಹೆಚ್ಚೆಂದರೆ ಪಕ್ಕದಲ್ಲಿ ನಿಂತಿರುವವರ ಮಾತು ಕೇಳಿಸದು. ಪಾಂಡವರು ಸ್ವರ್ಗಾರೋಹಣ ಮಾಡಲು ಹೋಗುತ್ತಿದ್ದಾಗ ಸರಸ್ವತಿ ನದಿ ದಾಟಲು ಸಹಕಾರಿಯಾಗುವಂತೆ ಎರಡು ದೊಡ್ಡ ಬಂಡೆಗಳನ್ನು ಭೀಮನು ಜೋಡಿಸಿಟ್ಟಿದ್ದಾನೆಂಬ ಕಾರಣದಿಂದ ಈ ಜಾಗಕ್ಕೆ ಭೀಮ್‌ಪುಲ್ ಎಂದು ಹೆಸರು. ಪಕ್ಕದಲ್ಲೊಂದು ದೇವಿಯ ಸಣ್ಣ ಗುಡಿಯಿದೆ. ತೀರ್ಥಕ್ಷೇತ್ರವಾದ್ದರಿಂದ ಬರುವ ಜನರ ಸಂಖ್ಯೆ ಸ್ವಲ್ಪ ಹೆಚ್ಚೇ.

ವ್ಯಾಸರ ಗುಹೆಯು ಶಾಂತವಾದ ಸ್ಥಳವಾಗಿದ್ದು, ಏಕಾಂತದಿಂದ ಬರವಣಿಗೆ ನಡೆಸಲು ಪ್ರಶಸ್ತ ಸ್ಥಳವಾಗಿದೆ! ಗುಹೆಯ ಹೊರಗಡೆ ನಿಂತರೆ ಬದರಿನಾಥ ಊರಿನ ಸುತ್ತಮುತ್ತಲ ವಿಶಾಲವಾದ ಸಮತಟ್ಟಾದ ಪ್ರದೇಶ ಕಾಣಿಸುತ್ತದೆ. ಕಟ್ಟಕಡೆಯ ಚಹಾ ಅಂಗಡಿಗೆ ಹೋಗಲು ಒಂದಷ್ಟು

ಮೆಟ್ಟಿಲುಗಳನ್ನೇರಬೇಕು. ಚಹಾ ವಿಶಿಷ್ಟವಾಗಿದೆಯೆಂದೇನೂ ಇಲ್ಲ. ಪುಣ್ಯಕ್ಕೆ ದರವೂ ಹೆಚ್ಚಿಲ್ಲ. ಕಟ್ಟಕಡೆಯ ಅಂಗಡಿಯೆಂಬ ಹೆಗ್ಗಳಿಕೆ ಚಹಾ ದರವನ್ನಾಗಲೀ, ಗುಣಮಟ್ಟವನ್ನಾಗಲೀ ಬದಲಾಯಿಸಿಲ್ಲ. ಬದರಿನಾಥದೆಲ್ಲೆಡೆ ಸಿಗುವ ಸಾಮಾನ್ಯ ಚಹಾವೇ ಇಲ್ಲೂ ಸಿಗುವುದು.

ಮಾನಾ ನೋಡಿಕೊಂಡು ಕಾರ್ ಏರುವಷ್ಟರಲ್ಲಿ ಮಳೆ ಮತ್ತೊಮ್ಮೆ ಪ್ರಾರಂಭವಾಗಿತ್ತು. ವಿಚಿತ್ರ ಹವಾಮಾನ! ಅರ್ಧಗಂಟೆಯ ಮುಂಚೆ ಬಿರುಬಿಸಿಲಿತ್ತು, ಈಗ ಜಡಿಮಳೆ. ಹೋಟೆಲ್ ಹುಡುಕುವಷ್ಟರಲ್ಲಿ ತಾಳ್ಮೆ ಸಹ ಕಳೆದುಕೊಂಡಿದ್ದೆವು. ಇದಕ್ಕೆ ಕಾರಣ ಹೋಟೆಲ್‌ನವ – ಕರೆ ಮಾಡಿ ವಿಚಾರಿಸಿದರೆ ಬೇಜವಾಬ್ದಾರಿತನದಿಂದ ಉತ್ತರವಿತ್ತಿದ್ದ. ಅಂತೂ ಇಂತೂ ಸಿಕ್ಕ ಹೋಟೆಲ್ ಕೊಠಡಿಯೊಳಕ್ಕೆ ಕಾಲಿಟ್ಟಾಗಲೂ ತಾಳ್ಮೆ ಮತ್ತಷ್ಟು ಕಡಿಮೆಯಾಗಿತ್ತು. ಇಡೀ ಪ್ರವಾಸದಲ್ಲಿ ಇದೇ ಅತ್ಯಂತ ಕೆಟ್ಟ ಕೊಠಡಿ, ಹರಿದ್ವಾರದ ನಮ್ಮ ಸಂಯೋಜಕ ಇಲ್ಲಿ ಸರಿಯಾಗಿ ಲಾಭ ಮಾಡಿಕೊಂಡಿದ್ದಾನೆಂದುಕೊಂಡೆವು.

ಒಂದೆರಡು ಗಂಟೆಗಳ ಕಾಲ ನಿದ್ದೆ ಮಾಡಿ ಎದ್ದರೂ ಮಳೆ ಕಡಿಮೆಯಾಗಿರಲಿಲ್ಲ. ನೆನೆಯುತ್ತಲೇ ದೇವಸ್ಥಾನಕ್ಕೆ ನಡೆಯುತ್ತ ಹೋದೆವು. ಮಳೆಯಿದ್ದರೂ ಸಹ ಜನರಿಗೇನೂ ಬರವಿರಲಿಲ್ಲ. ಬದರಿನಾಥದ ವಿಷ್ಣುದೇವರನ್ನು ಅಲ್ಲಿನ ಜನರು "ಬದರಿ ವಿಶಾಲ್ ಮಹಾರಾಜ್" ಎಂದು ಸಂಬೋಧಿಸುತ್ತಾರೆ. ದೇವರ ಮೂರ್ತಿ ಬಹಳ ಮುದ್ದಾಗಿರುವುದಲ್ಲದೆ, ತುಂಬಾ ಶ್ರೀಮಂತಿಕೆಯಿಂದ ಕೂಡಿದೆ. ಮಳೆಯಲ್ಲೇ ದೇವರ ದರ್ಶನ ಮಾಡಿದ ನಂತರ ದೇವಸ್ಥಾನದ ಪಕ್ಕದಲ್ಲಿ, ಅಲಕನಂದೆಯ ಬದಿಯಲ್ಲಿದ್ದ ತಪ್ತಕುಂಡಕ್ಕೆ ಹೋದೆವು. ತಪ್ತಕುಂಡವೆಂಬುದು ಬಿಸಿನೀರಿನ ಬುಗ್ಗೆ. ಕೊರೆಯುವ ಅಲಕನಂದೆಯ ನದಿಯ ನೀರು ಭುವಿಯೊಳಗಿಂದ ತಪ್ತಕುಂಡಕ್ಕೆ ಬರುವಾಗ ಬಿಸಿಯಾಗಿ ಬರುತ್ತದೆ. ಕೆಲವೊಮ್ಮೆ ಕುದಿಯುತ್ತಿರುತ್ತದೆ ಕೂಡಾ. ಪುರಾಣಗಳಲ್ಲಿ ಅದೇನು ಕಥೆಯಿದೆಯೋ ಗೊತ್ತಿಲ್ಲ, ಆದರೆ ನನಗೆ ತಿಳಿದ ಮಟ್ಟಿಗೆ ಇದು ಭೂಮಿಯಡಿಯಿರುವ ಗಂಧಕದಿಂದ (Sulphur) ಆಗುವ ಕಾರ್ಯ.

ತಪ್ತಕುಂಡದಲ್ಲಿ ಸ್ನಾನ ಮಾಡುವ ಬಯಕೆಯೇನೂ ಇರಲಿಲ್ಲ. ಅದಕ್ಕೆ ಬೇಕಾದ ಬಟ್ಟೆ ಸಹ ತೆಗೆದುಕೊಂಡು ಹೋಗಿರಲಿಲ್ಲ. ಹಾಗಾಗಿ ವಾಪಸ್ ಕೊಠಡಿಯತ್ತ ಹೊರಟೆವು. ಮಾರ್ಗಮಧ್ಯೆ ಇದ್ದ ಯಾವುದೋ ಹೋಟೆಲ್‌ನ ಫಲಕದಲ್ಲಿ ದಕ್ಷಿಣ ಭಾರತದ ತಿನಿಸುಗಳು ಲಭ್ಯ ಎಂಬ ಸಾಲನ್ನು ನೋಡಿ ಒಳಗೆ ಹೋಗಿ ಇಡ್ಲಿಯನ್ನು ಕೇಳಿದೆವು. ಆ ಇಡ್ಲಿಯಾದರೋ, ಮೆದುವಾದ ಕಲ್ಲು! ಹಿಮದಂತೆಯೇ ಕೊರೆಯುತ್ತಿದ್ದ ಚಟ್ನಿ ಪ್ರಾಯಶಃ ಒಂದು ವಾರ ಹಳೆಯದು! ಸಾಂಬಾರ್ ಬಿಸಿಯಿದ್ದುದೊಂದೇ ನಮಗೆ ಸಿಕ್ಕ ಲಾಭ. ಏನಾದರಾಗಲೀ, ತಿನ್ನೋಣವೆಂದು ಕುಳಿತೆವು. ನಂತರ ಬಿಸಿ ಕಾಫಿಯ ಸೇವೆ ಸಹ ಆಯಿತು.

ಹೊಟ್ಟೆ ತುಂಬಿಸಿಕೊಳ್ಳುವ ಕೆಲಸ ಮುಗಿಸಿದ ನಂತರ ಮರಳಿ ಕೊಠಡಿಗೆ ನಡೆದು ಬರುವಾಗ ಹರಿದ್ವಾರದ ಸಂಯೋಜಕನಿಗೆ ದೂರವಾಣಿ ಕರೆ ಮಾಡಿ ಮಾರನೆಯ ರಾತ್ರಿಗೆ ಹರಿದ್ವಾರದಿಂದ ದೆಹಲಿಗೆ ಬಸ್‌ನಲ್ಲಿ ಮೂರು ಸೀಟು ಕಾಯ್ದಿರಿಸುವಂತೆ ಕೋರಿದೆವು. ನಂತರ "ಅಂತೂ ಏನೂ ಕಷ್ಟವಿಲ್ಲದೆ ನಮ್ಮ ಪ್ರವಾಸವನ್ನು ಮುಗಿಸಿದೆವು, Tour completed successfully! ಎಂದು ಆನಂದದಿಂದ ಕುಣಿದಾಡಿದೆವು. ಪ್ರವಾಸ ನಿಜಕ್ಕೂ ಏನೇನೂ ತೊಂದರೆಯಿಲ್ಲದೆ ನೆರವೇರಿತ್ತು.

ನಮ್ಮ ಮುಂದಿನ ಪ್ರಯಾಣದ ಯೋಜನೆ ಹೀಗಿತ್ತು: ಮರುದಿನ ಬೆಳಿಗ್ಗೆ ಬದರಿನಾಥದಿಂದ ಹೊರಟು ಸಂಜೆಯ ವೇಳೆಗೆ ಹರಿದ್ವಾರವನ್ನು ತಲುಪುವುದು. ಅಲ್ಲಿಂದ ರಾತ್ರಿ ಬಸ್‌ನಲ್ಲಿ ಪಯಣಿಸಿ ಮುಂಜಾನೆ ದೆಹಲಿ ತಲುಪುವುದು. ದೆಹಲಿಯಲ್ಲಿ ಒಂದು ದಿನವಿದ್ದು, ೧೮ ಜೂನ್‌ರ ಬೆಳಿಗ್ಗೆಯ ವಿಮಾನದಲ್ಲಿ ಬೆಂಗಳೂರಿಗೆ ಮರಳುವುದು.

ಬದರಿನಾಥದಿಂದ ಹರಿದ್ವಾರ ಸುಮಾರು ೩೨೦ ಕಿ.ಮೀ ಆಗುತ್ತದೆ. ಅಷ್ಟು ದೂರ ಒಂದೇ ದಿನದಲ್ಲಿ ಹೋಗಲು ಸಾಧ್ಯವೇ ಎಂಬ ನಮ್ಮ ಪ್ರಶ್ನೆಗೆ "ಸಾಧ್ಯ" ಎಂದು ಚಾಲಕ ಉತ್ತರಿಸಿದ್ದ. ಸುಮಾರು ೧೧-೧೨ ಗಂಟೆಗಳ ಸುದೀರ್ಘ ಪ್ರಯಾಣವಾದ್ದರಿಂದ ಮುಂಜಾನೆ ಐದು ಗಂಟೆಗೇ ಹೊರಡೋಣವೆಂದು ಸೂಚಿಸಿದ್ದ. ಆಯಿತೆಂದು ಒಪ್ಪಿ, ನಮ್ಮ ಕೊಠಡಿಗೆ ಹೋಗಿ ಮಲಗಿಕೊಂಡೆವು.



ಹರಿದ್ವಾರದಲ್ಲಿನ ಗಂಗಾ ಆರತಿ



ದೇವಪ್ರಯಾಗದಲ್ಲಿ ಭಾಗೀರಥಿ–ಅಲಕನಂದಾ ನದಿಗಳು ಸಂಗಮವಾಗುವ ಅಪೂರ್ವ ಕ್ಷಣ



ರುದ್ರಪ್ರಯಾಗದ ಸಮೀಪದಲ್ಲೆಲ್ಲೋ ಕ್ಲಿಕ್ಕಿಸಿದ್ದು



ನದಿಯ ನಡುವೆ ತಪೋನಿರತನಾಗಿರುವ ಸನ್ಯಾಸಿ. ಕೇದಾರನಾಥದಲ್ಲೆಲ್ಲೋ ಕಂಡದ್ದು



ಕೇದಾರನಾಥದಲ್ಲಿನ ವಿಹಂಗಮ ನೋಟ



ಕೇದಾರನಾಥ ದೇಗುಲದ ಎದುರು



ನಾವಿದ್ದ ಕೊಠಡಿಯ ಹಿಂಭಾಗದಲ್ಲಿ ಹರಿಯುತ್ತಿದ್ದ ಮಂದಾಕಿನಿಯ ಚಂದದ ನೋಟ



ಕಾಡಿನ ಆಳದಿಂದ ಹರಿದುಬರುತ್ತಿರುವ ಅನಾಮಿಕ ನದಿ



ಭುವಿಯೋ ಸ್ವರ್ಗವೋ ತಿಳಿಯೆನು! ಚೋಪತಾ–ಗೋಪೇಶ್ವರ ನಡುವೆ ಸೆರೆಹಿಡಿದದ್ದು



ಸ್ವಿಟ್ಜರ್‌ಲ್ಯಾಂಡ್ ಎಂದು ಭಾವಿಸಿದಿರಾ? ಅಲ್ಲ! ಇದು ಚೋಪತಾ



ದಾರಿಯುದ್ದಕ್ಕೂ ಕಾಣಿಸಿಕೊಂಡ ಮಂಗಗಳು



ಚಮೋಲಿಯಿಂದ ಜೋಶೀಮಠಕ್ಕೆ ಹೋಗುವ ರಸ್ತೆ



ಘಾಂಘರಿಯಾ ಚಾರಣದುದ್ದಕ್ಕೂ ಕಾಣಸಿಗುವ ಪುಷ್ಪವತಿ ನದಿ



ಘಾಂಘರಿಯಾ ಚಾರಣದ ಹಾದಿಯಲ್ಲಿ ಕಂಡ ಸ್ಥಳೀಯ ಮಹಿಳೆ



ಘಾಂಘರಿಯಾದಿಂದ ಪುಷ್ಪಗಳ ಕಣಿವೆಗೆ ಹೋಗುವಾಗ



ಪುಷ್ಪಗಳ ಕಣಿವೆ – ಇಲ್ಲಿ ಹೂಗಳದೇ ಸಾಮ್ರಾಜ್ಯ



ಹೇಮಕುಂಡ ಸಾಹಿಬ್‌ನಲ್ಲಿ ಜೊತೆಗಾರರೊಡನೆ...



ಹೇಮಕುಂಡ ಸಾಹಿಬ್‌ನ ಗುರುದ್ವಾರ



ಹೇಮಕುಂಡದ ಸ್ಫಟಿಕಶುಭ್ರ ಸರೋವರ



ಗುರುದ್ವಾರದ ಎದುರಿನ ಹಿಮದ ದಿಣ್ಣೆಯ ಮೇಲೆ ಕಪಿಚೇಷ್ಟೆ



ಹೇಮಕುಂಡಕ್ಕೆ ಹೋಗುವಾಗ ಕಂಡ ಮನಮೋಹಕ ಜಲಪಾತ



ಪರ್ವತದ ನಡುವಿನ ನೀರ್ಗಲ್ಲು



ಭೀಮ್‌ಪುಲ್‌ನಲ್ಲಿ ಹರಿಯುವ ಸರಸ್ವತಿ ನದಿ



ಮಾನಾ ಗ್ರಾಮದಿಂದ ಕಾಣಿಸುವ ಬದರಿನಾಥದ ಮೈದಾನಪ್ರದೇಶ



ಹಿಮಾಚ್ಛಾದಿತ ಪರ್ವತ – ಮಾನಾ ಗ್ರಾಮದ ಬಳಿ



ನಮ್ಮ ಪ್ರೀತಿಯ ಪವನ್



ಜಯರಾಮ್ ಮತ್ತು ದಿನೇಶ್ – ಬದರಿನಾಥದಲ್ಲಿ ಸಿಲುಕಿದ್ದಾಗ ಹೊತ್ತು ಕಳೆಯಲು ಹೂದೋಟವೊಂದನ್ನು ಸುತ್ತುತ್ತಿರುವಾಗ



ಬದರಿನಾಥದಲ್ಲಿ ಸಿಲುಕಿದ್ದ ಜನರನ್ನು ರಕ್ಷಿಸಲು ಬರುತ್ತಿದ್ದ ಹೆಲಿಕಾಪ್ಟರ್

# ಮೊಟ್ಟಮೊದಲ ಆಘಾತ

೧೬ ಜೂನ್ ೨೦೧೩... ಹಿಂದಿನ ರಾತ್ರಿಯಿಡೀ ಮಳೆ ಎಡೆಬಿಡದ್ ಸುರಿಯುತ್ತಿತ್ತು. ಬೆಳಿಗ್ಗೆ ಐದು ಗಂಟೆಗೆ ಎದ್ದಾಗಲೂ ಸಹ ಮಳೆಯ ಆರ್ಭಟ ಕೊಂಚವೂ ಕಡಿಮೆಯಾಗಿರಲಿಲ್ಲ. ಆದರೂ ನಮ್ಮ ಯೋಜನೆಯ ಪ್ರಕಾರ ಹೊರಟುನಿಂತೆವು. ಸೌಜನ್ಯರಹಿತನಾದ ಹೋಟೆಲ್‌ನವನಿಗೆ ಒಂದು ಮಾತನ್ನೂ ತಿಳಿಸದೆ ಕೊಠಡಿಯ ಬಾಗಿಲನ್ನು ಎಳೆದುಕೊಂಡು ಹೊರಬಿದ್ದು ಕಾರ್ ಹತ್ತಿ ಕುಳಿತೆವು.

ನಮ್ಮ ಯೋಜನೆಯಂತೆ ನಾವು ಹರಿದ್ವಾರಕ್ಕೂ, ದೆಹಲಿಗೂ ಬಂದು ಅಲ್ಲಿಂದ ನಿರ್ಯೋಚನೆಯಿಂದ ಬೆಂಗಳೂರು ಸೇರಿಕೊಂಡೆವೆಂದು ಇಲ್ಲಿ ಬರೆಯಲು ಬಯಕೆಯಾಗುತ್ತಿದೆ. ಆದರೆ ವಾಸ್ತವ ಬೇರೆಯದೇ ಆಗಿತ್ತು. ನಮ್ಮ ಮೂವರ ಜೀವನಗಳನ್ನು ಶಾಶ್ವತವಾಗಿ ಬದಲಾಯಿಸುವ ಅನೇಕ ಅನುಭವಗಳಲ್ಲಿ ಮೊದಲನೆಯದನ್ನು ನೋಡಲಿದ್ದೆವು.

ಒಂದು ಕಿ.ಮೀ... ಬದರಿನಾಥದಿಂದ ಒಂದೇ ಒಂದು ಕಿ.ಮೀ. ಚಲಿಸಿದ್ದೆವಷ್ಟೇ. ರಸ್ತೆಯೆಂಬುದು ಮಾಯವಾಗಿತ್ತು! ಅದರ ಬದಲಾಗಿ ಅಲ್ಲೊಂದು ಜಲಪಾತ ಬಂದು ಕುಳಿತಿತ್ತು. ಹಿಂದಿನ ದಿನ ಬದರಿನಾಥಕ್ಕೆ ಬರುವಾಗ ಸಹ ಅದೇ ಜಾಗದಲ್ಲಿ ರಸ್ತೆಯ ಮೇಲೆ ನೀರು ಹರಿಯುತ್ತಿತ್ತಾದರೂ, ಇಂದಿನ ದೃಶ್ಯ ಸಂಪೂರ್ಣವಾಗಿ ಬೇರೆಯಾಗಿತ್ತು. ಇಂದು ನೀರು ಮಾತ್ರವಿತ್ತು, ರಸ್ತೆ ಮಂಗಮಾಯವಾಗಿತ್ತು!

ಮೊದಲ ಬಾರಿ ಅದನ್ನು ನೋಡಿದಾಗ ನನ್ನ ಕಣ್ಣುಗಳನ್ನು ನಂಬಲಾಗಲಿಲ್ಲ. ಯಾವುದೋ ತಪ್ಪು ದಾರಿಯಲ್ಲಿ ಬಂದಿದ್ದೇವೆ, ನಾವು ಹೋಗಬೇಕಾದ ರಸ್ತೆ ಇದಲ್ಲ ಎಂಬ ಆಲೋಚನೆ ಮೊದಲು ನನ್ನ ತಲೆಗೆ ಬಂದಿತು. ಆದರೆ ಜಲಪಾತವನ್ನೇ ದಿಟ್ಟಿಸಿ ನೋಡುತ್ತಾ ತಾಳ್ಮೆಯಿಂದ ಯೋಚಿಸಿದಾಗ ಬದರಿನಾಥಕ್ಕೆ ಇರುವುದು ಒಂದೇ ರಸ್ತೆ, ಇದು ಅದೇ ರಸ್ತೆಯೇ ಎಂದು ಹೊಳೆಯಿತು.

ನಮಗೆ ತಿಳಿದಂತೆ ಬದರಿನಾಥದಿಂದ ಹೊರಗೆ ಹೊರಟಿದ್ದ ಎರಡನೆಯ ವಾಹನ ನಮ್ಮದಾಗಿತ್ತು. ಮೊದಲ ವಾಹನ ನಾವು ಬದರಿನಾಥದಿಂದ ಹೊರಗೆ ಬರುವಾಗಲೇ ಮರಳಿ ಹೋಗುತ್ತಿತ್ತು. ಅದಕ್ಕೆ ಕಾರಣ ಈಗ ತಿಳಿದುಬಂತು. ಜಯರಾಮ್ ಮತ್ತು ಶ್ರೀಧರ್ ಅವರುಗಳಿಗೆ ಈ ರೀತಿಯ ಅನುಭವ ಹೊಸದಲ್ಲ. ಅವರ ಲದಾಖ್ ಪ್ರವಾಸದಲ್ಲಿ ಈ ರೀತಿಯಾದ ಅನುಭವಗಳನ್ನು ಎದುರಿಸಿದ್ದರು. ಕಾರ್ಗಿಲ್‌ನ ಹತ್ತಿರದಲ್ಲಿ ಭೂಕುಸಿತವಾಗಿ ರಸ್ತೆಯಲ್ಲಿ ಸಿಲುಕಿಕೊಂಡಿದ್ದರು. ಸೇನೆಯವರು ಒಂದೇ ದಿನದಲ್ಲಿ ಭೂಕುಸಿತದಿಂದುಂಟಾದ ಮೂವತ್ತೊಂದು ತಡೆಗಳನ್ನು ನಿವಾರಿಸಿ ವಾಹನಸಂಚಾರವನ್ನು

ಸುಗಮಗೊಳಿಸಿದ್ದರಂತೆ. ಅವರ ಪ್ರಕಾರ ಈ ಜಲಪಾತದ ರಸ್ತೆ ಅಲ್ಲಿಗೆ ಹೋಲಿಸಿದರೆ ಏನೇನೂ ಅಲ್ಲ, ಸೇನೆ ಮತ್ತು Border Roads Organisation ಸಂಘಟನೆಯವರು ಸ್ವಲ್ಪವೇ ಸಮಯದಲ್ಲಿ ಬಂದು ರಸ್ತೆಯನ್ನು ಸರಿಮಾಡಿ ನಮ್ಮನ್ನು ಹೊರಬಿಡುತ್ತಾರೆ ಎಂದು ಅವರ ಲೆಕ್ಕಾಚಾರ. ಹಾಗಾದಲ್ಲಿ ಹೊರಗೆ ಹೋಗುವ ವಾಹನಗಳು ಸಾಲುಗಟ್ಟಿ ನಿಂತು ಬಹಳ ಸಮಯ ವ್ಯಯವಾಗುವುದರಿಂದ ಜಲಪಾತಕ್ಕೆ ಸಮೀಪವಾಗಿಯೇ ರಸ್ತೆಬದಿಯಲ್ಲಿ ಕಾರನ್ನು ನಿಲ್ಲಿಸಿ ಅದರಲ್ಲೇ ಕುಳಿತಿರೋಣವೆಂದು ಚಾಲಕ ಹೇಳಿದ. ನಮಗೂ ಅದು ಸರಿಯೆಂದು ತೋರಿತು.

ಕಾರಿನ ಹೊರಗೆ ಮಳೆ, ಒಳಗೆ ಚಳಿ. ಹಾಕಿಕೊಂಡಿದ್ದ ಬಟ್ಟೆಗಳೂ ಕೊಂಚ ಒದ್ದೆಯಾಗಿದ್ದವು. ಅದು ಹೇಗೋ ಚಾಲಕ, ಶ್ರೀಧರ್ ಮತ್ತು ಜಯರಾಮ್ ಕುಳಿತಲ್ಲೇ ನಿದ್ದೆ ಮಾಡಿದರಾದರೂ ನನ್ನೊಳು ಆತಂಕ ಮನೆಮಾಡಿತ್ತು. ಇಂದು ಹೋಗಲಾಗುತ್ತದೆಯೇ, ಅದೆಷ್ಟು ಗಂಟೆಗೆ ಇಲ್ಲಿಂದ ಹೊರಡಲು ಸಾಧ್ಯ, ಹರಿದ್ವಾರಕ್ಕೆ ತಲುಪುವುದು ಯಾವಾಗ, ಇಂದು ಹೋಗಲಾಗದಿದ್ದರೆ ಏನು ಮಾಡುವುದು... ತಲೆಯೊಳಗೆ ಓಡುತ್ತಿದ್ದ ಯೋಚನೆಗಳು ನೂರಾರು. ಒಂದು ಗಂಟೆಯಾದರೂ ಸೇನೆಯವರ ಸುಳಿವಿಲ್ಲ! ಅನೇಕ ವಾಹನಗಳು ಬಂದ ದಾರಿಯಲ್ಲೇ ಮರಳಿ ಬದರಿನಾಥಕ್ಕೆ ಹೋದವು. ಚಳಿ, ಮಳೆಗಳ ಕಾಟ ಅತಿಯಾಯಿತು. ಓದಲು ಇದ್ದ ಒಂದೇ ಪುಸ್ತಕವನ್ನು ಕಾರಿನ ಹಿಂಬದಿಯಲ್ಲಿ ಬ್ಯಾಗಿನಲ್ಲಿ ಹಾಕಿಟ್ಟಿದ್ದೆನಾದ್ದರಿಂದ ಓದುವುದು ಕೂಡಾ ಅಸಾಧ್ಯವಾಗಿತ್ತು. ಕೈಲಿದ್ದ ಕ್ಯಾಮೆರಾ ಹಿಡಿದು ಒಂದಷ್ಟು ಹೊತ್ತು ಏನೇನೋ ಪ್ರಯೋಗಗಳನ್ನು ಮಾಡಿದೆ. ಆದರೂ ಆತಂಕ ಕಡಿಮೆಯಾಗಲಿಲ್ಲ. ಅಷ್ಟರಲ್ಲಿ ನಿದ್ದೆಯಿಂದೆದ್ದ ಚಾಲಕ, ಚಳಿಯಲ್ಲಿ ಕಾಯುವುದರಲ್ಲಿ ಅರ್ಥವಿಲ್ಲವೆಂದು ಹೇಳುತ್ತಾ, ಕಾರನ್ನು ಬದರಿನಾಥದೆಡೆಗೆ ತಿರುಗಿಸಿದ.

ಹಿಂದಿನ ರಾತ್ರಿಯಿದ್ದ ಕೊಠಡಿಗೆ ಹೋಗುವುದು ಬೇಡವೇ ಬೇಡವೆಂದು ಒಮ್ಮತದ ನಿರ್ಣಯ ಕೈಗೊಂಡೆವು. ಈಗ ಹೊಸದೊಂದು ಕೊಠಡಿ ಹುಡುಕುವ ಕೆಲಸ ಬೇರೆ! ಮುಖ್ಯರಸ್ತೆಯಲ್ಲಿ ಹೋಟೆಲ್‌ವೊಂದರ ಎದುರು ಒಬ್ಬ ಯುವಕನನ್ನು ಕಂಡ ಚಾಲಕ ಕಾರನ್ನು ನಿಲ್ಲಿಸಿದ. "ಕೊಠಡಿ ಇದೆಯೇ?" ಎಂಬ ನಮ್ಮ ಪ್ರಶ್ನೆಗೆ, "ಹೌದು, ಬನ್ನಿ" ಎಂದು ಉತ್ತರಿಸಿದ. ಮುಂಭಾಗದಲ್ಲಿ ಭೋಜನಾಲಯವಿದ್ದು, ಹಿಂಭಾಗದಲ್ಲಿ ಅನೇಕ ಕೊಠಡಿಗಳಿದ್ದವು. ಟಿ.ವಿ. ಇರುವ ಕೊಠಡಿಗಾದರೆ ೨೦೦೦ ರೂಪಾಯಿ, ಇಲ್ಲವಾದಲ್ಲಿ ೧೦೦೦ ರೂಪಾಯಿ ಎಂದು ದರಗಳನ್ನು ವಿವರಿಸಿದ. ಸಾವಿರ ರೂಪಾಯಿಯದ್ದೇ ಸಾಕೆಂದು ಹೇಳಿ, ಕೊಠಡಿಯನ್ನು ಹೊಕ್ಕಿಕೊಂಡೆವು. ನಮ್ಮನ್ನು ಬರಮಾಡಿಕೊಂಡು ಕೊಠಡಿ ತೋರಿಸಿದವನ ಹೆಸರು ದಿನೇಶ್.

ಇಡೀ ಪ್ರವಾಸದಲ್ಲಿ ನಾವು ಇಳಿದುಕೊಂಡಿದ್ದ ಎಲ್ಲ ಕಡೆ ಜಯರಾಮ್‌ನ ಹೆಸರಿನಲ್ಲೇ ಕೊಠಡಿಗಳನ್ನು ಕಾಯ್ದಿರಿಸಲಾಗಿತ್ತು. ಆದರೆ ಇಲ್ಲಿ ದಿನೇಶ್ ಬಂದು ವಿವರಗಳನ್ನು ನಮೂದಿಸಬೇಕೆಂದು ಕೇಳಿದಾಗ ಒಪ್ಪಿ ಹೋದ ನಾನು ವಿಳಾಸ ಬರೆಯುವಾಗ ಹಿಂದೆಮುಂದೆ ಯೋಚಿಸದೆ ನನ್ನ ಮೈಸೂರಿನ ವಿಳಾಸವನ್ನು ಬರೆದಿಟ್ಟೆ. ಸಾವಿರ ರೂಪಾಯಿ ಕೈಗಿತ್ತು ಬರುವಷ್ಟರಲ್ಲಿ ಚಳಿಯಿಂದ ಮೈ ನಡುಗುತ್ತಿತ್ತು.

ಮೂರು ಜನರು ಇರಬಹುದಾದಂತಹ ಕೊಠಡಿಯಲ್ಲಿ ಚಾಲಕನನ್ನೂ ಸೇರಿಸಿ ನಾಲ್ಕು ಜನರಿದ್ದೆವು. ದಿನೇಶ್ ಮತ್ತೊಂದು ಹೊದಿಕೆಯನ್ನು ತಂದಿಟ್ಟು ಹೋದ. ಹೊದ್ದಿಕೊಂಡು ಮಲಗಲು ಪ್ರಯತ್ನಪಟ್ಟರೂ ಬಟ್ಟೆ, ಹಾಸಿಗೆ ಎಲ್ಲ ತಣ್ಣಗಿದ್ದುದರಿಂದ ನಿದ್ದೆ ಮಾಡಲಾಗಲಿಲ್ಲ. ವಿಪರ್ಯಾಸವೆಂದರೆ ಗೋಡೆ ಕೂಡಾ ಕೊರೆಯುವಷ್ಟು ತಣ್ಣಗಿದ್ದು, ದೇಹ ಅದಕ್ಕೆ ಅಪ್ಪಿತಪ್ಪಿಯಾಗಿ ಸೋಕಿದರೂ ಪ್ರಾಣ ಹೋಗುವಂತಾಗುತ್ತಿತ್ತು.

ಯಾರಿಗೂ ಏನೂ ಮಾಡಲು ತೋಚುತ್ತಿರಲಿಲ್ಲವಾಗಿ ಕೊಠಡಿಯಲ್ಲಿ ಮೌನ ಮನೆಮಾಡಿತ್ತು. ಸಾಮಾನ್ಯವಾಗಿ ಮಳೆಯ ಶಬ್ದ ನನ್ನಲ್ಲಿ ಆನಂದ ಮೂಡಿಸುವುದಾದರೂ ಇಂದೇಕೋ ಮಳೆ ತೀವ್ರವಾದ ನಿರುತ್ಸಾಹವನ್ನು ಮೂಡಿಸಿತ್ತು. ಹಾಗೆಯೇ ಎರಡು–ಮೂರು ಗಂಟೆಗಳು ಹೀಗೇ ಬಿದ್ದುಕೊಂಡಿದ್ದೆವು. ಚಳಿ–ಹಸಿವು ತಡೆಯಲಾರದೆ, ಮುಂಭಾಗದ ಹೋಟೆಲ್‌ನಲ್ಲಿ ಕೆಲಸ ಮಾಡುತ್ತಿದ್ದ ಹದಿಹರೆಯದ ಬಾಲಕನೊಬ್ಬನನ್ನು ತಿನ್ನಲು ಏನಾದರೂ ಸಿಗುವುದೇ ಎಂದು ಕೇಳಿದೆವು. ಬಿಸಿಬಿಸಿ ಪನೀರ್ ಪಕೋಡಾ, ಚಹಾ ತಂದು ನಮ್ಮ ಮುಂದಿಟ್ಟ. ಚಾಲಕ ಪಕೋಡಾ ಚೆನ್ನಾಗಿಲ್ಲವೆಂದು ಗೊಣಗಾಡಿದರೂ ನಾವು ತುಟಿಪಿಟಕ್ಕೆನ್ನದೆ ತಿಂದು ಮುಗಿಸಿದೆವು. ಈಗ ಸ್ವಲ್ಪ ಸಮಾಧಾನವಾಗಿತ್ತು. ಹೋಟೆಲ್‌ನ ಬಾಲಕ ಪವನ್‌ಗೆ ಮತ್ತೊಮ್ಮೆ ಚಹಾ ತರುವಂತೆ ಹೇಳಿದೆವು.

ಮಳೆಯ ಅಬ್ಬರ ಕಡಿಮೆಯಾಗುವ ಸೂಚನೆಯೇ ಇರಲಿಲ್ಲ. ಇಡೀ ದಿನವನ್ನು ಬದರಿನಾಥದಲ್ಲೇ ಕಳೆದು ಮರುದಿನ ಹೊರಡೋಣವೆಂದು ನಿರ್ಧರಿಸಿದೆವು. ದುರದೃಷ್ಟಕ್ಕೆ ನಮ್ಮ ಮೊಬೈಲ್‌ಗಳ ಸಂಪರ್ಕಜಾಲವು ಇಲ್ಲವಾಗಿ, ಮೂವರ ಮೊಬೈಲ್‌ಗಳೂ ಸ್ತಬ್ಧವಾಗಿಬಿಟ್ಟಿದ್ದವು. ದೆಹಲಿ ಸುತ್ತುವ ಯೋಜನೆಯನ್ನು ಕೈಬಿಟ್ಟು, ನೇರ ವಿಮಾನ ನಿಲ್ದಾಣಕ್ಕೆ ಹೋಗಿ ಬೆಂಗಳೂರು ತಲುಪಿಬಿಡೋಣವೆಂದು ಚರ್ಚಿಸಿದೆವು.

ಆ ಕ್ಷಣದಲ್ಲಿ ನಮಗೆ ಮಿಕ್ಕೆಲ್ಲ ಕಡೆ ಏನಾಗಿದೆಯೆಂಬ ಅರಿವೇ ಇರಲಿಲ್ಲ. ಈ ಮಳೆ ಬೇಗನೇ ನಿಂತುಬಿಡುತ್ತದೆ, ಹಾಗಾಗಿ ನಾವು ನಾಳೆಯೇ ಹೊರಬೀಳುತ್ತೇವೆ ಎಂಬ ಭಾವನೆಯಲ್ಲೇ ಸುಮಾರು ಹೊತ್ತು ಕಳೆದೆವು. ಪರಿಸ್ಥಿತಿಯ  ಬೇರೆಯೇ ಆಗಿದ್ದು, ಅದರ ಗಾಂಭೀರ್ಯದ ಅರಿವೇ ನಮಗಿರಲಿಲ್ಲ.

ಮಳೆಯ ಆರ್ಭಟ ಕೇವಲ ಬದರಿನಾಥದಲ್ಲಷ್ಟೇ ಇರಲಿಲ್ಲ. ಘಡವಾಲ್ ಪ್ರಾಂತ್ಯದ ಬೇರೆಲ್ಲ ಕಡೆಯೂ ಭೀಕರ ಮಳೆಯಾಗಿತ್ತು. ವಾಸ್ತವವಾಗಿ ಬದರಿನಾಥದಲ್ಲೇ ಕಡಿಮೆ ಮಳೆಯಾಗಿತ್ತಂತೆ. ಕೇದಾರನಾಥ, ಗೌರಿಕುಂಡ, ಗುಪ್ತಕಾಶಿ, ಗೋವಿಂದಘಾಟ್, ಘಾಂಘರಿಯಾ, ಹೇಮಕುಂಡ – ನಾವು ಹೋಗಿದ್ದ ಈ ಜಾಗಗಳಷ್ಟೇ ಅಲ್ಲದೆ ದೂರದ ಉತ್ತರಕಾಶಿ, ಹರ್ಸಿಲ್, ಗಂಗೋತ್ರಿಗಳಲ್ಲೂ ವಿಪರೀತ ಮಳೆಯಾಗಿತ್ತು. ಕೇದಾರನಾಥದಲ್ಲಿ ಮಳೆಯಲ್ಲ, ಮೇಘಸ್ಫೋಟವೇ (Cloudburst) ಉಂಟಾಗಿತ್ತು. ಇದಾವುದೂ ಗೊತ್ತಿಲ್ಲದ ನಾವು ಮಳೆ ಬಿಡುವುದನ್ನೂ, ಸೇನೆಯವರು ಹೆದ್ದಾರಿಯ ರಿಪೇರಿ ಮಾಡುವುದನ್ನೂ ಕಾಯುತ್ತಾ ಕುಳಿತಿದ್ದೆವು.

ಹಲವಾರು ಗಂಟೆಗಳ ನಂತರ ಮಳೆರಾಯ ಕೊಂಚ ಮೆತ್ತಗಾದ. ಹೊರಗೆ ಮಳೆ ಬೀಳುವ ಸದ್ದು ಕಡಿಮೆಯಾಗಿದ್ದು ನಮ್ಮ ಗಮನಕ್ಕೆ ಬರುತ್ತಲೇ ಎದ್ದು ಕುಳಿತೆವು. ನನಗಂತೂ ಆ ಒದ್ದೆ ಬಟ್ಟೆ, ತಣ್ಣಗಿನ ಹಾಸಿಗೆಗಳಿಂದಾಗಿ ಮೈಯೆಲ್ಲಾ ನೋವಾಗಿತ್ತು. ನಿದ್ದೆಯು ಸಮೀಪಕ್ಕೂ ಸುಳಿದಿರಲಿಲ್ಲ. ಹೀಗಾಗಿ ಮಳೆ ಕಡಿಮೆಯಾಗಿದ್ದು ಸ್ವಲ್ಪ ನೆಮ್ಮದಿ ಮೂಡಿಸಿತ್ತು. ಕೊಠಡಿಯ ಬಾಗಿಲು ತೆರೆದು ಹೊರಬಂದೆವು.

ಹೊರಗೆ ಬಂದೊಡನೆ ದಿನೇಶ್ ಎದುರಿಗೆ ಸಿಕ್ಕಿದ. ನಮ್ಮನ್ನು ಕಂಡ ಕೂಡಲೇ "ಎಲ್ಲೆಡೆ ಭಾರೀ ಮಳೆಯಾಗಿದೆ, ರಸ್ತೆಗಳೆಲ್ಲ ಕೊಚ್ಚಿಕೊಂಡು ಹೋಗಿವೆ. ಕೇದಾರನಾಥದಲ್ಲಂತೂ ಭೀಕರ ಮಳೆ, ಮೇಘಸ್ಫೋಟವಾಗಿದ್ದು, ಸಾವಿರಾರು ಜನ ಸಾವನ್ನಪ್ಪಿದ್ದಾರೆ! ಕೇದಾರನಾಥ, ಗೌರಿಕುಂಡ ಸಂಪೂರ್ಣ ಧ್ವಂಸವಾಗಿವೆ. ಸದ್ಯಕ್ಕೆ ಬದರಿನಾಥವೇ ಅತ್ಯಂತ ಸುರಕ್ಷಿತ ಸ್ಥಳ" ಎಂಬ ವಾರ್ತೆ ತಿಳಿಸಿದ. ಇದೇನು ಹೀಗೆ ಮಾತನಾಡುತ್ತಿದ್ದಾನೆ ಇವನು! ಹಾಗೆಲ್ಲ ಆಗಲು ಸಾಧ್ಯವೇ ಇಲ್ಲ, ಇವನೇಕೆ ವಿಚಿತ್ರವಾಗಿ ಏನೇನೋ ಹೇಳಿ ನಮನ್ನು ಹೆದರಿಸುತ್ತಿದ್ದಾನೆ! "ನಿನಗೆಲ್ಲಿಂದ ಈ ಮಾಹಿತಿ ಗೊತ್ತಾಯಿತು" ಎಂದು ಕೇಳಿದ್ದಕ್ಕೆ, "ಪೊಲೀಸರಿಂದ ಗೊತ್ತಾಯಿತು. ಅವರನ್ನೇ ಕೇಳಿ ನೋಡಿ" ಎಂದ. ಭಗವಂತ! ಪ್ರವಾಸ ಮುಗಿಸುವ ವೇಳೆಯಲ್ಲಿ ಇದೇನಪ್ಪಾ ಕಷ್ಟ ಎಂದುಕೊಳ್ಳುತ್ತಾ ಹತ್ತಿರದಲ್ಲೇ ಇದ್ದ ಪೊಲೀಸ್ ಠಾಣೆಗೆ ಓಡಿದೆವು.

ಠಾಣೆಯಲ್ಲಿದ್ದ ಕೆಲವೇ ಪೊಲೀಸರು ಮಂಕಾಗಿ ಕುಳಿತಿದ್ದರು. ಸುತ್ತಲೂ ಕುತೂಹಲ–ಆತಂಕಮಿಶ್ರಿತ ಜನ ನೆರೆದಿದ್ದರು. "ಸಾಬ್, ರಸ್ತೆ ಯಾವಾಗ ಸರಿಯಾಗುತ್ತದೆ? ನಾವು ಇಲ್ಲಿಂದ ಯಾವಾಗ ಹೊರಗೆ ಹೋಗಬಹುದು" ಎಂಬ ನಮ್ಮ ಪ್ರಶ್ನೆಗೆ ಅವರು ಕೊಟ್ಟ ಉತ್ತರ ಅದುವರೆಗೂ ನಾನು ಕಂಡು ಕೇಳರಿಯದಂತಹ ಪ್ರಕೃತಿವಿಕೋಪವೊಂದರ ವಿವರಣೆಯ ಸಾರಾಂಶವಾಗಿತ್ತು.

"ನೀವೆಲ್ಲರೂ ಬದುಕಿ ಉಳಿದಿರುವುದೇ ಭಗವಂತನ ಆಶೀರ್ವಾದ. ಕೇದಾರನಾಥದಲ್ಲಿ ಭಯಂಕರ ಮೇಘಸ್ಫೋಟವಾಗಿದೆ, ದೇವಸ್ಥಾನವೊಂದನ್ನು ಬಿಟ್ಟು ಮಿಕ್ಕವೆಲ್ಲವೂ ನೆಲಸಮವಾಗಿವೆ. ಬದುಕುಳಿದಿರುವವರ ಸಂಖ್ಯೆ ಬಹಳವೇ ಕಡಿಮೆಯಿರುವ ಸಾಧ್ಯತೆಯಿದೆ. ಗೌರಿಕುಂಡದಿಂದ ಕೇದಾರನಾಥಕ್ಕೆ ಹೋಗುವ ಚಾರಣದ ರಸ್ತೆ ಸಂಪೂರ್ಣವಾಗಿ ಹಾಳಾಗಿದ್ದು, ಅಲ್ಲಿದ್ದ ಯಾತ್ರಿಕರ ಬಗ್ಗೆ ಏನೇನೂ ಮಾಹಿತಿ ಸಿಗುತ್ತಿಲ್ಲ. ಬದರಿನಾಥ ಸಮೀಪದ ಜೆ.ಪಿ. ಕಂಪೆನಿಯ ಜಲವಿದ್ಯುತ್ ಕಾರ್ಯಾಗಾರ ಪೂರ್ತಿಯಾಗಿ ನೆಲಸಮವಾಗಿದೆ. ನದಿಗೆ ಅಡ್ಡಲಾಗಿ ಕಟ್ಟಿದ್ದ ಅಣೆಕಟ್ಟೆ ಒಡೆದು ಹೋಗಿದೆ. ಸುಮಾರು ನಾಲ್ಕೈದು ಕಿ.ಮೀ. ರಸ್ತೆ ಕೊಚ್ಚಿಕೊಂಡು ಹೋಗಿದೆ. ಗೋವಿಂದಘಾಟ್‌ನಲ್ಲಿ ರಸ್ತೆ ಕೊಚ್ಚಿಕೊಂಡು ಹೋಗಿ, ನೂರಾರು ವಾಹನಗಳೂ, ಅದರಲ್ಲಿದ್ದ ಚಾಲಕರೂ ನೋಡುನೋಡುತ್ತಿರುವಂತೆಯೇ ಜಲಸಮಾಧಿಯಾಗಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಬದರಿನಾಥಕ್ಕಿಂತ ಸುರಕ್ಷಿತ ಪ್ರದೇಶವಿಲ್ಲ. ದೇವರು ನಿಮ್ಮನ್ನು ಈ ದಿನದಂದು ಇಲ್ಲಿರಿಸಿ ಬದುಕುಳಿಯುವಂತೆ ಮಾಡಿದ್ದಾನೆ, ಅವನಿಗೆ ಕೃತಜ್ಞರಾಗಿರಿ."

ಸಿಡಿಲು ಬಡಿದಂತಾಗಿತ್ತು. ಮೊದಲೇ ಚಳಿಯಲ್ಲಿ ನಡುಗುತ್ತಿದ್ದ ನಾವು ಈಗ ಭಯದಿಂದಲೂ ನಡುಗತೊಡಗಿದೆವು. ಅವರ ಖಡಾಖಂಡಿತವಾದ ಮಾತುಗಳನ್ನು ಕೇಳಿದರೂ ನಮ್ಮಲ್ಲಿ ನಂಬಿಕೆ ಹುಟ್ಟುತ್ತಲೇ ಇರಲಿಲ್ಲ. ಅಷ್ಟೊಂದು ಜನ ಒಮ್ಮೆಲೇ ಸಾಯುವುದೆಂದರೆ ಏನರ್ಥ! ವಾಹನಗಳು ಅದು ಹೇಗೆ ಆಟಿಕಗಳಂತೆ ಕೊಚ್ಚಿಕೊಂಡು ಹೋಗುವವೇ! ಯಾಕೆ ಈ ಜನ ಈ ರೀತಿ ಭಯ ಹುಟ್ಟಿಸುತ್ತಿದ್ದಾರೆ... ಮನದಲ್ಲೋಡುತ್ತಿದ್ದ ಯೋಚನೆಗಳಿಗೆ ಕೊನೆಮೊದಲಿರಲಿಲ್ಲ. ಈ ಪೊಲೀಸರು ಬೇಗನೇ ರಸ್ತೆ ಸರಿಮಾಡಿಸುವ ಯೋಗ್ಯತೆಯಿಲ್ಲದೆ ಸುಮ್ಮನೆ ಎಲ್ಲರನ್ನೂ ಅಂಕೆಯಲ್ಲಿಟ್ಟುಕೊಂಡಿರಲು ಹೀಗೆಲ್ಲ ಮಾತನಾಡುತ್ತಿದ್ದಾರೇನೋ ಎಂಬ ಶಂಕೆ ಮೂಡತೊಡಗಿತು.

"ರಸ್ತೆ ಹಾಗಾದರೆ ಯಾವಾಗ ಸರಿಹೋಗುತ್ತದೆ?" ಎಂದು ಯಾರೋ ಕೇಳಿದ್ದಕ್ಕೆ, "ರಸ್ತೆ ಸರಿಯಾಗಿ ವಾಹನಗಳು ಓಡಾಡಲು ಮೂರು ತಿಂಗಳು ಬೇಕಾಗುತ್ತದೆ" ಎಂದು ಚುಟುಕಾದ ಉತ್ತರ ದೊರಕಿತು. ಮೂರು ತಿಂಗಳು! ಇದೆಂತಹ ರೀತಿಯ ತಮಾಷೆ! ಹಾಗಾದರೆ ನಾವಿಲ್ಲಿ ಮೂರು ತಿಂಗಳು ಕಾಯುತ್ತಾ ಕೂರಬೇಕೇ! ನಮಗಿನ್ನೂ ಎಲ್ಲವೂ ಅಸತ್ಯವೆಂದೇ ತೋರುತ್ತಿತ್ತು.

"ಸಾಬ್, ವಿದ್ಯುತ್ ಇಲ್ಲ. ಯಾವುದೇ ಮೊಬೈಲ್ ಕೂಡಾ ಕೆಲಸ ಮಾಡುತ್ತಿಲ್ಲ. ನಮ್ಮ ಕುಟುಂಬದವರು ಗಾಬರಿಗೊಳ್ಳುತ್ತಾರೆ. ದಯವಿಟ್ಟು ನಾವೆಲ್ಲಿದ್ದೇವೆಂದು ಅವರಿಗೆ ತಿಳಿಸುವ ಸಲುವಾಗಿಯಾದರೂ ವಿದ್ಯುತ್ ಸಂಪರ್ಕ ಒದಗಿಸುವಂತೆ ವ್ಯವಸ್ಥೆ ಮಾಡಿ" ಎಂದೊಬ್ಬ ಕೇಳಿಕೊಂಡ. "ನಿಮ್ಮ ತೊಂದರೆ ನಮಗೂ

ಅರ್ಥವಾಗುತ್ತದೆ. ಆದರೇನು ಮಾಡುವುದು, ನಮ್ಮ ವೈರ್‌ಲೆಸ್ ಸೆಟ್‌ಗಳಿಗೂ ವಿದ್ಯುತ್ ಇಲ್ಲ. ಸದ್ಯಕ್ಕೆ ಬ್ಯಾಟರಿಯಿಂದ ನಡೆಸುತ್ತಿದ್ದೇವೆ. ಇದು ಇನ್ನೆಷ್ಟು ಹೊತ್ತು ನಡೆಯುವುದೋ ನಮಗೂ ಗೊತ್ತಿಲ್ಲ" ಎಂದು ಅವರ ಸ್ಥಿತಿಯನ್ನು ವಿವರಿಸಿದರು. ವೈರ್‌ಲೆಸ್ ಸೆಟ್‌ನಲ್ಲಿ ನಿರಂತರವಾಗಿ ಮಾಹಿತಿ ಬಿತ್ತರಗೊಳ್ಳುತ್ತಲೇ ಇತ್ತು. ಎತ್ತರದ ಪ್ರದೇಶಗಳಾದ ಕೇದಾರನಾಥ, ಗಂಗೋತ್ರಿಗಳಲ್ಲದೆ ಕೆಳಗಿನ ಜಾಗಗಳಾದ ಗೋವಿಂದಘಾಟ್, ಚಮೋಲಿ ಮತ್ತು ರುದ್ರಪ್ರಯಾಗ ಜಿಲ್ಲೆಗಳ ಇತರ ಭಾಗಗಳು, ಕಡೆಗೆ ದೂರದ ಶ್ರೀನಗರ (ಕಾಶ್ಮೀರವಲ್ಲ, ಉತ್ತರಾಖಂಡದ "ಪೌಡೀ ಘಡವಾಲ್" ಜಿಲ್ಲೆಯ ಕೇಂದ್ರಸ್ಥಾನ) ಊರಿನಲ್ಲೂ ಪರಿಸ್ಥಿತಿ ಬಿಗಡಾಯಿಸಿರುವ ಬಗ್ಗೆ ಒಂದೇ ಸಮ ಸುದ್ದಿ ಬಿತ್ತರವಾಗುತ್ತಿತ್ತು. ಆದರೂ ಪ್ರವಾಹವಾಗಿದೆಯೆಂಬ ಸಂಗತಿಯನ್ನು ಜೀರ್ಣಿಸಿಕೊಳ್ಳುವುದು ಕಷ್ಟವಾಗುತ್ತಲೇ ಇತ್ತು.

"ದಯವಿಟ್ಟು ತಾಳ್ಮೆಯಿಂದಿರಿ. ಸರ್ಕಾರದ ವತಿಯಿಂದ, ದೇವಸ್ಥಾನದ ವತಿಯಿಂದ ಉಚಿತ ಊಟದ ವ್ಯವಸ್ಥೆ ಮಾಡಲಾಗುತ್ತದೆ. ನೀವು ಯಾವಯಾವ ಹೋಟೆಲ್‌ಗಳಲ್ಲಿ ಬಿಡಾರ ಹೂಡಿರುವಿರೋ ಅಲ್ಲೇ ಇರಿ. ವಸತಿಯೂ ಉಚಿತವೆಂದು ಸರ್ಕಾರ ಘೋಷಿಸಿದೆ. ಯಾರಾದರೂ ಹಣ ಕೇಳಿದರೆ ನಮಗೆ ಬಂದು ಸೂಚಿಸಿ. ದೇವರು ನಿಮ್ಮನ್ನು ಬದುಕುಳಿಸಿದ್ದಾನೆ, ಮನೆಗೆ ಹಿಂದಿರುಗಲು ಒಂದಷ್ಟು ದಿನಗಳು ಕಾಯಬೇಕಾಗುತ್ತದೆಯಷ್ಟೇ, ದಯವಿಟ್ಟು ಶಾಂತರಾಗಿರಿ" ಎಂದು ಪೊಲೀಸರು ಅಲ್ಲಿ ನೆರೆದಿದ್ದ ಜನರಲ್ಲಿ ಮನವಿ ಮಾಡಿಕೊಂಡರು.

ಅವರೊಡನೆ ಮಾತನಾಡಲು ಮತ್ತೇನೂ ಉಳಿದಿರಲಿಲ್ಲ. ಪೊಲೀಸರನ್ನು, ಉತ್ತರಾಖಂಡದ ಘನ ಸರ್ಕಾರವನ್ನು ಮನಸಾರೆ ಬಯ್ದುಕೊಳ್ಳುತ್ತಾ ಮರಳಿ ಕೊಠಡಿಯತ್ತ ನಡುಗುತ್ತಲೇ ಹೆಜ್ಜೆಹಾಕಿದೆವು.

(ವಾಸ್ತವವಾಗಿ ಈ ಎಲ್ಲ ಸಂಭಾಷಣೆಗಳು ಹಿಂದಿಯಲ್ಲೇ ಆಗಿದ್ದವಾದರೂ, ಅದನ್ನು ಇಲ್ಲಿ ಕನ್ನಡಕ್ಕೆ ಅನುವಾದಿಸಿದ್ದೇನೆ. ಮಾತ್ರವಲ್ಲದೆ, ಇದು ಕೇವಲ ಪದಗಳು ಮಾತ್ರ, ಈ ಪದಗಳು ಸಂಭಾಷಣೆಯ ಸಮಯದಲ್ಲಿ ಅಲ್ಲಿದ್ದವರ, ಪೊಲೀಸರ, ನಮ್ಮ ಮನಸ್ಥಿತಿಗಳನ್ನಾಗಲೀ, ಆತಂಕ–ಭೀತಿಯನ್ನಾಗಲೀ ವಿವರಿಸಲು ಸಂಪೂರ್ಣವಾಗಿ ವಿಫಲವಾಗುತ್ತವೆ. ಆ ದಿನಗಳಲ್ಲಿ ಜನರ ಮಾನಸಿಕ ಯಾತನೆಯ ಸ್ಥೂಲ ಪರಿಚಯವನ್ನಷ್ಟೇ ಮಾಡಿಸಲು ಶಕ್ತವಾಗಿವೆ ಈ ಪದಗಳು. ನಿಜವಾಗಿ ನಾವೇನೇನು ಅನುಭವಿಸಿದೆವೋ, ಅವೆಲ್ಲವೂ ನಮ್ಮ ಮನದಲ್ಲಿ ಅಚ್ಚೊತ್ತಿದೆಯಾದರೂ ವಿವರಿಸಲು ಸಾಧ್ಯವೇ ಇಲ್ಲದಷ್ಟು ಕಠಿಣವಾಗಿವೆ.)

# ನಮ್ಮನ್ನು ಹೊರಕಳಿಸಿ, ದೇಹರಾಡೂನ್ ತಲುಪಿಸಿ

"ಸುಳ್ಳು ಹೇಳುತ್ತಿದ್ದಾರೆ ಈ ಜನ. ತಮ್ಮ ವೈಫಲ್ಯವನ್ನು ಮುಚ್ಚಿಕೊಳ್ಳಲು ಪರಿಸ್ಥಿತಿಯ ತೀವ್ರತೆಯ ಬಗ್ಗೆ ತಮ್ಮದೇ ಧಾಟಿಯಲ್ಲಿ ಕಥೆಗಳನ್ನು ಕಲ್ಪಿಸುತ್ತಾ ಎಲ್ಲರನ್ನೂ ಹೆದರಿಸುತ್ತಿದ್ದಾರೆ." ಎಂದು ನಮ್ಮ ಖಚಿತವಾದ ಅನಿಸಿಕೆ. ಚಾಲಕ ಮಾತ್ರ ಏನೂ ಆಗದವನಂತೆ ಆನಂದದಿಂದಿದ್ದ. ಏನು ಮಾಡುವುದೆಂದು ಅವನನ್ನು ಕೇಳಿದ್ದಕ್ಕೆ, "ಮತ್ತೇನು ಮಾಡುವುದು, ಒಂದು ತಿಂಗಳ ಕಾಲ ಹಾಯಾಗಿ ಇಲ್ಲೇ ನೆಲೆಸುವುದು" ಎಂದು ಅತ್ಯಂತ ಬೇಜವಾಬ್ದಾರಿ ಉತ್ತರ ಕೊಟ್ಟ. ನಾಲ್ಕು ಬಾರಿಸೋಣವೆನಿಸಿತಾದರೂ, ಊಟಕ್ಕೇನು ಮಾಡುವುದೆಂದು ಕೇಳಿದೆ. "ಭಂಡಾರಾ" ಇದೆಯಲ್ಲ, ಅಲ್ಲಿ ಉಚಿತವಾಗಿ ಊಟ ಹಾಕುತ್ತಾರೆ. ಅಲ್ಲಿಗೆ ಹೋಗಿ ಆರಾಮವಾಗಿ ತಿಂದು ಬರಬಹುದು ಎಂಬ ಮತ್ತೊಂದು ಹಾರಿಕೆಯ ಉತ್ತರ ಅವನಲ್ಲಿ ಸಿದ್ಧವಾಗಿತ್ತು.

ಭಂಡಾರಾ ಎನ್ನುವುದು ಅನೇಕ ಸಂಘಸಂಸ್ಥೆಗಳು ಬಡ ಯಾತ್ರಿಕರಿಗೆ ಉಚಿತವಾಗಿ ಊಟ–ತಿಂಡಿಯನ್ನು ನೀಡುವ ಸಲುವಾಗಿ ಮಾಡಿಕೊಂಡಿರುವ ವ್ಯವಸ್ಥೆ. ಹಿಮಾಲಯದ ಗಡಸು ಪರ್ವತಪ್ರದೇಶದಲ್ಲಿ ಏನನ್ನೂ ಬೆಳೆಯಲು ಅಸಾಧ್ಯವಾದ್ದರಿಂದ ಎಲ್ಲ ಆಹಾರ ಪದಾರ್ಥಗಳನ್ನೂ ಬಯಲುಸೀಮೆಯಿಂದಲೇ ಆಮದು ಮಾಡಿಕೊಳ್ಳಬೇಕು. ಅದರಲ್ಲೂ ಬದರಿನಾಥದಂತಹ ತೀರ್ಥಕ್ಷೇತ್ರಕ್ಕೆ ಭೇಟಿ ನೀಡುವ ಯಾತ್ರಿಕರ ಸಂಖ್ಯೆ ದೊಡ್ಡದೇ ಇರುವುದರಿಂದ, ಅವರಿಗೆ ಬೇಕಾಗುವಷ್ಟು ಆಹಾರವನ್ನು ಬೆಳೆಯಲು ಸ್ಥಳೀಯರಿಗೆ ಸಾಧ್ಯವಾಗುವುದೇ ಇಲ್ಲ. ಹಾಗಾಗಿ ಬಯಲುಸೀಮೆಯಿಂದ ದೂರವಿರುವ ಈ ಊರುಗಳಲ್ಲಿ ತಿನಿಸುಗಳು ದುಬಾರಿ. ಆ ದುಬಾರಿ ಹಣವನ್ನು ತೆತ್ತು ಉಣ್ಣುವ ಶಕ್ತಿಯಿಲ್ಲದ ಮಂದಿ ಭಂಡಾರಾದ ಮೊರೆ ಹೋಗುವರು.

ಅವನ ಮಾತು ಕೇಳಿಸಿಕೊಳ್ಳುವುದನ್ನು ಅಲ್ಲಿಗೇ ನಿಲ್ಲಿಸಿ, ಮುಂದೇನು ಮಾಡಬಹುದೆಂದು ಯೋಚಿಸತೊಡಗಿದೆವು. ಮನೆಯವರನ್ನು ಸಂಪರ್ಕಿಸಿ ಏನಾದರೂ ಮಾಡಲು ಅವರಿಗೆ ತಿಳಿಸಬಹುದಿತ್ತಾದರೂ, ಸ್ತಬ್ಧವಾಗಿದ್ದ ಮೊಬೈಲ್‌ಗಳು ಅದಕ್ಕೆ ಆಸ್ಪದ ಕೊಡಲಿಲ್ಲ. ನಮ್ಮಲ್ಲಿ ಹಣವೆಷ್ಟಿದೆಯೆಂದು ನೋಡಿಕೊಂಡಾಗ ಬಹಳ ಕಡಿಮೆಯಿರುವುದೆಂದು ಗೊತ್ತಾಯಿತು. ದೇವಸ್ಥಾನದ ಬಳಿಯಲ್ಲೊಂದು ATM ಇದೆಯೆಂದೂ, ಅಲ್ಲಿಗೆ ಹೋಗೋಣವೆಂದೂ ಸೂಚಿಸಿದೆ. ತಡಮಾಡಿದರೆ ಕೆಲಸ ಕೆಡುತ್ತದೆಂದು ಜಯರಾಮ್ ನನ್ನನ್ನು ಎಳೆದುಕೊಂಡು ದೇವಸ್ಥಾನದತ್ತ ಹೆಜ್ಜೆಹಾಕಿದ.

ಪುಣ್ಯಕ್ಕೆ ATM ಬಳಿ ಜನರಿರಲಿಲ್ಲ. ಒಳನುಗ್ಗಿದ್ದ ಜಯರಾಮ್ ಹಿಂದೆಮುಂದೆ ನೋಡದೆ ಹನ್ನೆರಡು ಸಾವಿರ ರೂಪಾಯಿಗಳನ್ನೆಳೆದುಕೊಂಡ. "ಜಯರಾಮು, ಎರಡು–ಮೂರು ದಿನದಲ್ಲಿ ಇಲ್ಲಿಂದ ಹೊರಡುತ್ತೇವೆ. ಇಷ್ಟೊಂದು ದುಡ್ಡು ಯಾತಕ್ಕೆ" ಎಂಬ ನನ್ನ ಪ್ರತಿಭಟನೆಯನ್ನು ಕಿವಿಯ ಮೇಲೆ ಹಾಕಿಕೊಳ್ಳದೆ ಅಷ್ಟೂ ಹಣವನ್ನು ಜೇಬಿಗೆ ತುರುಕಿಕೊಂಡ. ಮತ್ತೊಮ್ಮೆ ಕೇಳಿದ್ದಕ್ಕೆ, "ಯಾರಿಗೆ ಗೊತ್ತು ಏನಾಗುತ್ತದೋ ಅಂತ. ಇರಲಿ ಬಿಡು" ಎಂದು ನನ್ನ ಬಾಯಿ ಮುಚ್ಚಿಸಿದ.

ಜಿಟಿಜಿಟಿ ಮಳೆ ಮತ್ತೊಮ್ಮೆ ಶುರುವಾಗಿತ್ತು. ಮುಂದೇನು ಎಂಬ ಚಿಂತೆಯಲ್ಲಿ ಮುಳುಗಿದ್ದ ನಮಗೆ ರಾತ್ರಿಯ ಊಟದ ಯೋಚನೆಯಿರಲಿಲ್ಲ. ಖಾಲಿ ಹೊಟ್ಟೆಯಲ್ಲಿ ಮಲಗಿದೆವಾದರೂ, ಹಾಳು ಚಳಿಯಿಂದ ನಿದ್ದೆಯೂ ಸರಿಯಾಗಿ ಬರಲಿಲ್ಲ. ಇಷ್ಟು ಹೊತ್ತಿಗಾಗಲೇ ನಮ್ಮ ಪತ್ರಕರ್ತರು, ಟಿ.ವಿ.ಯವರು ಉತ್ತರಾಖಂಡದ ವಿಚಾರವಾಗಿ ಸುದ್ದಿಯನ್ನು ಬಿತ್ತರಿಸಿರುತ್ತಾರೆ, ಮನೆಯಲ್ಲಿ ಎಲ್ಲರೂ ಗಾಬರಿಯಾಗಿರುತ್ತಾರೆ, ನಾವು ಬದುಕಿದ್ದೇವೆಂದು ಹೇಳಲು ಸಹ ಸಾಧ್ಯವಾಗುತ್ತಿಲ್ಲವಲ್ಲ ಎಂಬ ಕೊರಗು ಸತತವಾಗಿ ಕಾಡುತ್ತಿತ್ತು. ಏನೂ ಮಾಡುವಂತಿರಲಿಲ್ಲ.

ಹೆಚ್ಚಿಗೆ ಕೆಲಸವಿಲ್ಲದ ದಿನೇಶ್, ತಲೆಕೆಡಿಸಿಕೊಂಡು ಕುಳಿತಿದ್ದ ನಮ್ಮೊಂದಿಗೆ ಬಂದು ಕುಳಿತ. "ಅದೃಷ್ಟಶಾಲಿಗಳು ನೀವು. ಬೇರೆಲ್ಲಾದರೂ ಇದ್ದಿದ್ದರೆ ಈ ವೇಳೆಗೆ ದೇವರ ಪಾದ ಸೇರಿರುತ್ತಿದ್ದಿರಿ. ಚಿಂತೆ ಮಾಡಬೇಡಿ, ಎಲ್ಲ ಸರಿ ಹೋಗುತ್ತದೆ" ಎಂದು ಭರವಸೆಯ ಮಾತುಗಳನ್ನಾಡಿದ. ಕೇದಾರನಾಥದಲ್ಲಿ ಅಷ್ಟೆಲ್ಲಾ ಅವಘಡ ಸಂಭವಿಸಿದೆಯಾ ಎಂದು ಕೇಳಿದ್ದಕ್ಕೆ, ಅಲ್ಲಿ ಏನೂ ಉಳಿದಿಲ್ಲ, ಎಲ್ಲವೂ ನಿರ್ನಾಮವಾಗಿದೆ ಎಂದ. ಗೌರಿಕುಂಡಕ್ಕೂ ಹೊಡೆತ ಬಿದ್ದಿದೆಯಲ್ಲ, ಮಧ್ಯೆಯಿದ್ದ ರಾಮಬಾಡಾದ ಕಥೆಯೇನು ಎಂದಿದ್ದಕ್ಕೆ "ರಾಮಬಾಡಾ ಕಾ ರಾಮ್ ನಾಮ್ ಹೋ ಗಯಾ ಹೈ" ಎಂದ! "ಮಳೆ ನಿಲ್ಲುವವರೆಗೂ ಏನೂ ನಡೆಯುವುದಿಲ್ಲ, ಬೆಚ್ಚಗೆ ಮಲಗಿಕೊಳ್ಳಿ" ಎಂದು ಹೇಳಿ ಎದ್ದುಹೋದ. ನಾಲ್ಕು ಜನರಿಗೂ ಮಾತು ಹೊರಡದೆ, ಮೌನವೇ ನಮ್ಮ ಸಂಗಾತಿಯಾಗಿತ್ತು. ತೆಪ್ಪಗೆ ಬಿದ್ದುಕೊಂಡೆವು. ಬೆಳಗಿನ ತಿಂಡಿಯಾಗಲೀ, ಮಧ್ಯಾಹ್ನದ ಊಟವಾಗಲೀ ಮಾಡಿರದಿದ್ದರೂ ಹಸಿವಿರಲಿಲ್ಲ. ಪ್ರಾಣ ಉಳಿಸಿಕೊಳ್ಳುವ ಬಗ್ಗೆಯೇ ಚಿಂತೆ ಮಾಡುತ್ತಿದ್ದರಿಂದ ಬೇರೆಲ್ಲ ಅವಶ್ಯಕತೆಗಳೂ ಗೌಣವಾಗಿದ್ದವು.

ಸಂಜೆಯಾಗುತ್ತಿರುವಂತೆಯೇ ಮಳೆ ನಿಲ್ಲುವಂತೆ ಕಂಡುಬಂತು. ನಿಧಾನವಾಗಿ ಅದರ ಅಬ್ಬರ ಕಡಿಮೆಯಾಯಿತು. ಕಡೆಗೊಮ್ಮೆ ಕೋಣೆಯಿಂದ ಹೊರಗೆ ಬಂದು ನೋಡಿದಾಗ ಮಳೆ ನಿಂತಿರುವುದೂ, ಆದರೂ ಕಾರ್ಮೋಡ ಕವಿದಿರುವುದೂ ಕಣ್ಣಿಗೆ ಬಿತ್ತು. ನಾವು ಅಲ್ಲಿಂದ ಹೊರಗೋಡಲು ಅಷ್ಟು ಮಾತ್ರ ಸಾಕಾಗಿತ್ತು. ಒಡನೆಯೇ ವಿವರ ಸಂಗ್ರಹಿಸಲು ದೇವಸ್ಥಾನದತ್ತ ಓಡಿದೆವು.

ದೇವಸ್ಥಾನಕ್ಕೆ ಹೋಗುವ ದಾರಿಯಲ್ಲೇ ಬಹಳಷ್ಟು ಜನ ಸೇರಿದ್ದರು. ಬದರಿನಾಥ–ಕೇದಾರನಾಥ ಮಂದಿರ ಸಮಿತಿಯ (Badrinath-Kedarnath Temple Committee - BKTC) ಸದಸ್ಯರು ಜನರ ಕೋಪವನ್ನು ತಡೆಯಲು ಸಾಹಸ ಪಡುತ್ತಿದ್ದರು. ಚಮೋಲಿ ಜಿಲ್ಲೆಯ ಕಲೆಕ್ಟರ್ ಅಲ್ಲಿಗೆ ಬರುವನೆಂದೂ, ಜನರು ಅಲ್ಲಿಯವರೆಗೂ ತಾಳ್ಮೆಯಿಂದ ಕಾಯಬೇಕೆಂದೂ ಅವರು ಮಾಡುತ್ತಿದ್ದ ಮನವಿ ಗದ್ದಲದಲ್ಲಿ ಕರಗಿಹೋಗಿ, ಯಾರೂ ಅದರತ್ತ ಗಮನಹರಿಸಲೇ ಇಲ್ಲ. ನೂರಾರು ಜನ ನೆರೆದಿದ್ದು, ಸಾವಿರಾರು ಪ್ರಶ್ನೆಗಳ ಮಳೆಯನ್ನು ಸುರಿಸುತ್ತಿದ್ದರು. ಮಂದಿರ ಸಮಿತಿಯ ಸದಸ್ಯರಿಗೂ ಪರಿಸ್ಥಿತಿಯನ್ನು ನಿಭಾಯಿಸುವುದು ಹೇಗೆಂದು ಗೊತ್ತಿಲ್ಲದೆ ಬಾಯಿಗೆ ಬಂದಂತೆ ಮಾತಾಡುತ್ತಿದ್ದರು. ಒಬ್ಬ ಮುದಿಯ ಸದಸ್ಯ "ಇವರೆಲ್ಲರನ್ನೂ ಹವಾನಿಯಂತ್ರಿತ ಕೋಣೆಗಳಲ್ಲಿಟ್ಟು ಊಟ ಕೊಟ್ಟರೆ ಮೂರು ತಿಂಗಳು ಇಲ್ಲೇ ಇರುವರು" ಎಂದು ಹೀನವಾಗಿ ನೆರೆದಿದ್ದ ಜನರನ್ನು ಅಲ್ಲಗಳೆಯುವಂತೆ ಮಾತನಾಡುತ್ತಿದ್ದ. ಅದನ್ನು ಕೇಳಿ ಉರಿದುಹೋದೆ. ಹತ್ತಕ್ಕಿಂತ ಹೆಚ್ಚು ಜನರಿಗೆ ಆ ಮಾತು ಕೇಳಿಸಿದ್ದರೆ ಅವನು ಅಂದು ಅಲಕನಂದೆಯಲ್ಲಿ ಜಲಸಮಾಧಿಯಾಗುವುದರಲ್ಲಿ ಸಂಶಯವಿರಲಿಲ್ಲ. ಜನರನ್ನು ಅವ್ಯವಸ್ಥೆಗಿಂತ ಹೆಚ್ಚಾಗಿ ಕಾಡಿದ್ದು ಈ ರೀತಿಯ ಬೇಜವಾಬ್ದಾರಿ ಹೇಳಿಕೆಗಳೇ.

ಕಲೆಕ್ಟರ್ ಬಂದು ನಮ್ಮೆದುರು ನಿಂತ. ಅವನತ್ತ ಎಸೆದ ಪ್ರಶ್ನೆಗಳ ಬಾಣಗಳನ್ನೆದುರಿಸಲು ಅವನ ಕೈಲಿ ಸಾಧ್ಯವಾಗಲಿಲ್ಲ. ಅಥವಾ ಅವನ ತಲೆ ಪೂರ್ತಿಯಾಗಿ ಕೆಟ್ಟಿತ್ತೆಂದು ಕಾಣುತ್ತದೆ. "ನಿಮ್ಮನ್ನು ಬದರಿನಾಥಕ್ಕೆ ಬರುವಂತೆ ಹೇಳಿದ್ದು ಯಾರು?" ಎಂದು ದುರಹಂಕಾರದಿಂದ ಮರುಪ್ರಶ್ನಿಸಿದ. ಮೊದಲೇ ಕುದಿಯುತ್ತಿದ್ದ ಜನರು ಈಗ ತಿರುಗಿಬಿದ್ದರು. "ಸರ್ಕಾರದ ಒಬ್ಬ ಪ್ರತಿನಿಧಿಯಾಗಿ, ಜನಸೇವಕನಾಗಿ ನೀವು ಈ ರೀತಿಯ ಮುಠ್ಠಾಳ ಪ್ರಶ್ನೆ ಕೇಳಬಾರದು. ಬದರಿನಾಥವು ಇಲ್ಲಿಗೆ ಬರುವ ಯಾತ್ರಿಕರಿಂದಲೇ ಪ್ರಸಿದ್ಧಿಗೆ ಬಂದಿರುವುದೆಂದು ನೀವು ಮೊದಲು ಮನದಟ್ಟು ಮಾಡಿಕೊಳ್ಳಬೇಕು. ನಾವುಗಳು ಬರದೆ ಹೋದರೆ ನಿಮಗೆಯೇ ಆದಾಯ ಹುಟ್ಟುವುದಿಲ್ಲ, ಹುಚ್ಚರಂತೆ ಮಾತನಾಡುತ್ತಿರುವ BKTC ಜನರಿಗೆ ಕೆಲಸವಿರುವುದಿಲ್ಲ. ಪ್ರವಾಸಿಗರು ಬರಬಾರದೆಂದು ನಿಮ್ಮ ಇಚ್ಛೆಯಾದಲ್ಲಿ, ಹೆದ್ದಾರಿಯ ಮೇಲೆ ವಿವಿಧ ಭಾಷೆಗಳಲ್ಲಿರುವ ಫಲಕಗಳನ್ನು ಮೊದಲು ಕಿತ್ತೆಸೆಯಿರಿ. ಹೀಗೆ ಅಸಹ್ಯವಾಗಿ ಮಾತನಾಡಲು ನೀವು ಬಂದಿದ್ದಾದರೆ ನಾವು ನಿಮ್ಮ ಮಾತು ಕೇಳುವುದಿಲ್ಲ" ಎಂದು ಜನ ಅವನ ಬಾಯಿ ಮುಚ್ಚಿಸಿದರು. ಕಠಿಣವಾದ ಆ ಪರಿಸ್ಥಿತಿಯನ್ನು ಎದುರಿಸುವುದು ಇವನ ಯೋಗ್ಯತೆಗೆ ಮೀರಿದ್ದ ಕೆಲಸವೆಂದು ಎಲ್ಲರಿಗೂ ಅನ್ನಿಸಿತು. ಇವನ ಜೊತೆ ಮಾತನಾಡಿ ಪ್ರಯೋಜನವಿಲ್ಲವೆಂದರಿತ ಜನಸಾಗರ ಮಾರನೆಯ ದಿನ ಮಂದಿರ ಮುಂಭಾಗದಲ್ಲಿ ಪ್ರತಿಭಟನೆ ಹೊಮ್ಮಿಕೊಳ್ಳುವ ನಿರ್ಣಯ ಕೈಗೊಂಡಿತು.

ಮೂರು ಸಾವಿರ ಮೀಟರ್‌ಗಳ ಎತ್ತರದ ಜಾಗದಲ್ಲಿ ರಾತ್ರಿ ಕಳೆಯುವುದು ಕಷ್ಟದ ಕೆಲಸವೇ ಸರಿ. ಅದರಲ್ಲೂ, ಚಳಿಯ ತೀವ್ರತೆ ಅಷ್ಟಾಗಿ ಅನುಭವಿಸದ ಬೆಂಗಳೂರಿನ ನಾವುಗಳು ಪರದಾಡುವಂತಾಗಿತ್ತು. ಪುಣ್ಯಕ್ಕೆ ಮಾನಾದಿಂದ ಬರುವಾಗ ಉಣ್ಣೆಯ ಟೋಪಿಗಳನ್ನು ಕೊಂಡುಕೊಂಡಿದ್ದೆ, ನನ್ನ ಅಪ್ಪ–ಅಮ್ಮನಿಗೆಂದು. ಆ ಟೋಪಿಗಳು ಜಯರಾಮ್ ಮತ್ತು ನನ್ನ ಉಪಯೋಗಕ್ಕೆ ಬಂದವು. ವಿಪರ್ಯಾಸವೆಂದರೆ ಆ ಟೋಪಿಗಳು ನಮ್ಮನ್ನು ಬೆಚ್ಚಗೆ ಇರಿಸಿದರೂ, ತುರಿಕೆ ತರಿಸುತ್ತಿದ್ದವು. ವಿಧಿಯಿರಲಿಲ್ಲ, ತುರಿಕೆ ತಡೆದುಕೊಳ್ಳಲೇಬೇಕಿತ್ತು. ಸ್ವೆಟರ್, ಟೋಪಿ, ಕೈಗವಸುಗಳನ್ನು (Gloves) ಧರಿಸಿಕೊಂಡು ನಿದ್ದೆ ಮಾಡುವ ಪರಿಸ್ಥಿತಿ ನಮ್ಮದಾಗಿತ್ತು.

ಬೆಳಗಾಗುವಷ್ಟರಲ್ಲಿ ಮಳೆಯ ಮೋಡದ ಸುಳಿವೇ ಇರಲಿಲ್ಲ. ಏನೂ ಆಗೇ ಇಲ್ಲವೇನೋ ಎಂಬಂತೆ ಆಗಸ ನೀಲವಾಗಿಯೂ, ಶುಭ್ರವಾಗಿಯೂ ಇತ್ತು. ಪ್ರತಿಭಟನೆ ನಡೆಸಲು ದಿವಸ ಹೇಳಿ ಮಾಡಿಸಿದಂತಿತ್ತು. ಚಹಾ–ಬಿಸ್ಕತ್‌ಗಳ ಸೇವನೆಯ ನಂತರ ದೇವಾಲಯದತ್ತ ಹೆಜ್ಜೆಹಾಕಿದೆವು.

ದೇವಾಲಯದ ಮುಂಭಾಗದಲ್ಲಿ ಅದಾಗಲೇ ನೂರಾರು ಜನ ಸೇರಿದ್ದರು. ಮುಂಬೈನ ಡಾಕ್ಟರ್‌ರೊಬ್ಬರ ನೇತೃತ್ವದಲ್ಲಿ ಪ್ರತಿಭಟನೆ ಆಗಲೇ ಪ್ರಾರಂಭವಾಗಿತ್ತು. "ಮಂದಿರ್ ಸಮಿತಿ, ಹಮ್ ಕೋ ಬಾಹರ್ ನಿಕಾಲೋ", "ಹಮೇಂ ದೇಹರಾಡೂನ್ ಪಹುಂಚಾಯೋ", "ಉತ್ತರಾಖಂಡ ಸರ್ಕಾರ್, ಮಂದಿರ್ ಸಮಿತಿ ಮುರ್ದಾಬಾದ್" ಎಂಬ ಘೋಷಣೆಗಳು ಸತತವಾಗಿ ಕೇಳಿಬರುತ್ತಿದ್ದವು. ಇವೆಲ್ಲವೂ ನಮ್ಮ ಆತ್ಮತೃಪ್ತಿಗಾಗಿ ಮಾತ್ರವೇ ಮಾಡುತ್ತಿದ್ದುದು, ಅಲ್ಲಿ ನಮ್ಮ ಬವಣೆ ಕೇಳಲು, ಪ್ರತಿಸ್ಪಂದಿಸಲು ಸರ್ಕಾರದ ಒಬ್ಬನೇ ಒಬ್ಬ ಪ್ರತಿನಿಧಿಯೂ ಇರಲಿಲ್ಲ. ಸುಮಾರು ಒಂದು ಗಂಟೆಗಳ ಕಾಲ ಒಬ್ಬರಾದ ನಂತರ ಮತ್ತೊಬ್ಬರು ನೇತೃತ್ವ ವಹಿಸಿಕೊಂಡು ಘೋಷಣೆ ಕೂಗುತ್ತಲೇ ಇದ್ದೆವು.

ಬಿಸಿಲಿನಲ್ಲೇ ನಮ್ಮ ಹರತಾಳ ಮುಂದುವರಿದಿತ್ತು. ಅಲ್ಲಿ ನೆರೆದಿದ್ದ ಜನರಲ್ಲಿ ಬಹುತೇಕರು ಮಧ್ಯವಯಸ್ಸನ್ನು ಮೀರಿದ್ದವರು. ಎಪ್ಪತ್ತು ವರ್ಷ ಮೇಲ್ಪಟ್ಟ ವೃದ್ಧರೂ ಸಾಕಷ್ಟಿದ್ದರು. ಚಳಿಯು ಬಹುತೇಕ ಜನರನ್ನು ಎರಡೇ ದಿನಗಳಲ್ಲಿ ನಿತ್ರಾಣರಾಗುವಂತೆ ಮಾಡಿತ್ತು. ದೈನ್ಯದಿಂದ ಕುಳಿತಿದ್ದ ಹಲವಾರು ವೃದ್ಧರನ್ನು ಕಂಡು ಎಲ್ಲರ ಮನಸ್ಸಿಗೂ ಬೇಸರವಾಗುತ್ತಿತ್ತು. ಆದರೆ ಏನಾದರೂ ಮಾಡಲು ಸಾಮರ್ಥ್ಯವಿದ್ದ, ಅಧಿಕಾರವಿದ್ದ ಮಂದಿ ಮಾತ್ರ ಹೆಬ್ಬಂಡೆಯಂತೆ ಕುಳಿತಿದ್ದುದು ನಮ್ಮ ಪಾಲಿಗೆ ನುಂಗಲಾರದ ಬಿಸಿತುಪ್ಪವಾಗಿತ್ತು.

ಬಿಸಿಲಿನಲ್ಲಿ ಬಳಲಿ ಬೆಂಡಾಗುತ್ತಿದ್ದರೂ ಯಾರೂ ಕೇಳುವವರಿಲ್ಲವೇ ಎಂಬ ಭಾವನೆ ಜನರ ಮನದಲ್ಲಿ ದಟ್ಟವಾಗಿ ಮೂಡುತ್ತಿರುವಂತೆಯೇ BKTCಯ ಒಬ್ಬ ಹಿರಿಯ ವ್ಯಕ್ತಿ ದೇವಾಲಯದ ಆವರಣದಿಂದ ಹೊರಬಂದ. ಅವನನ್ನು ಗುರುತಿಸಿದ ಜನ ಇವನೇನು ಹೇಳುವನೋ ಎಂಬ ಕುತೂಹಲದಿಂದ ಗದ್ದಲವನ್ನು ಕಡಿಮೆ ಮಾಡಿದರು. ಆತಂಕಭರಿತ ಮುಖಗಳಲ್ಲಿ ಆಸೆಯ ಗೆರೆಯೊಂದು ಕಾಣತೊಡಗಿತು.

"ನಿಮ್ಮೆಲ್ಲರನ್ನೂ ಬದರಿ ವಿಶಾಲ್ ಮಹಾರಾಜ್ ಕಾಪಾಡಿದ್ದಾನೆ. ಸದ್ಯದ ಸ್ಥಿತಿಯಲ್ಲಿ ಬದರಿನಾಥವೊಂದೇ ಏನೂ ಆಗದೆ ಉಳಿದಿರುವುದು, ಕೇದಾರನಾಥದ ಸ್ಥಿತಿ ಚಿಂತಾಜನಕವಾಗಿದೆ. ಸರ್ಕಾರ ರಕ್ಷಣಾಪಡೆಗಳನ್ನು ಅಲ್ಲಿಗೆ ಕಳಿಸಿ, ಬದುಕುಳಿದವರ ಶೋಧನಾಕಾರ್ಯ ನಡೆಸುತ್ತಿದೆ" ಎಂದು ತನ್ನ ಭಾಷಣ ಶುರುಮಾಡಿದ. ನನ್ನ ತಾಳ್ಮೆ ಬತ್ತಿಹೋಗಿತ್ತು. "ಸಾಬ್, ಮತ್ತೆಮತ್ತೆ ಕೇದಾರನಾಥದ ವಿಚಾರವನ್ನೆತ್ತಬೇಡಿ. ಅಲ್ಲಿ ತೀವ್ರ ಪ್ರಾಣಹಾನಿಯಾಗಿರುವುದು ಖೇದವೇ. ಹಾಗೆಂದು ಬದರಿನಾಥದಲ್ಲಿರುವ ನಾವೆಲ್ಲರೂ ಸಾಯುವವರೆಗೂ ಸರ್ಕಾರ ನಮ್ಮತ್ತ ಗಮನಹರಿಸುವುದಿಲ್ಲವೇ? ಇಲ್ಲೂ ರಕ್ಷಣಾಕಾರ್ಯ ನಡೆಸಲು ನಮ್ಮಲ್ಲೂ ಅನೇಕ ಜನ ಸಾಯಬೇಕೇ?" ಎಂದು ಖಾರವಾದ ಪ್ರಶ್ನೆಯೊಂದನ್ನು ತೂರಿಬಿಟ್ಟೆ. ಮತ್ತೆಮತ್ತೆ ಕೇದಾರನಾಥದ ಹೆಸರು ಕೇಳಿಯೇ ರೋಸಿಹೋಗಿದ್ದ ನಾನು ಪುನಃ ಅದೇ ಹಳೆಕಥೆಯನ್ನು ಕೇಳಲು ತಯಾರಿರಲಿಲ್ಲ. ಶ್ರೀಧರ್, ಜಯರಾಮ್ ಕೂಡಾ ನನ್ನ ಜೊತೆಗೆ ದನಿಗೂಡಿಸಿದರು.

ನನ್ನ ಪ್ರಶ್ನೆಗೆ ಉತ್ತರಿಸಲು ಅವನಿಗೆ ಸಾಧ್ಯವಾಗಲಿಲ್ಲವೇನೋ. ಅದರತ್ತ ಕಿವಿಗೊಡದೆ ತನ್ನದೇ ಕಥೆಯನ್ನು ಮುಂದುವರಿಸಿದ. ಆದರೆ ಅಷ್ಟರಲ್ಲಿ ಜನತೆ ಎಚ್ಚೆತ್ತುಕೊಂಡಿದ್ದರು. ಅವನ ಮಾತಿನಲ್ಲಿದ್ದ ಸೂಕ್ಷ್ಮ ಅರ್ಥವಾಗಿಹೋಗಿತ್ತು. ಸರ್ಕಾರಕ್ಕಾಗಲೀ, BKTCಗಾಗಲೀ ನಮ್ಮನ್ನು ಇಲ್ಲಿಂದ ಹೊರಹಾಕಲು ಶಕ್ತಿಯಿಲ್ಲವೆಂಬ ಸತ್ಯಾಂಶವನ್ನು ಜನತೆ ಗ್ರಹಿಸಿತು. "ಇಲ್ಲಿಯ ಹವೆ ಕಷ್ಟಕರವಾಗಿದೆ, ನಮ್ಮಲ್ಲಿದ್ದ ಔಷಧಿಗಳು ಮುಗಿದುಹೋಗಿದ್ದು, ಇಲ್ಲಿ ಅವು ದೊರೆಯುತ್ತಿಲ್ಲ. ನಮ್ಮನ್ನು ಇಲ್ಲಿಂದ ಹೊರಗೋಡಿಸಿ" ಎಂದು ಜನ ಕೂಗಲಾರಂಭಿಸಿದರು. ಮೌನವೇ ಅದಕ್ಕುತ್ತರವಾಯಿತು. ಜನರನ್ನೆದುರಿಸಲು ಸಾಧ್ಯವಾಗದ ವ್ಯಕ್ತಿ ದೇವಸ್ಥಾನದ ಒಳಗೆ ಹೊರಟುಹೋದ.

ಬೀದಿಗೆ ಬಿದ್ದಂತಾಗಿತ್ತು ನಮ್ಮ ಬದುಕು! "ಮಂದಿರ್ ಸಮಿತಿ ಹಮ್ ಕೋ ಬಾಹರ್ ಭೇಜೋ!" ಎಂಬ ಕೂಗು ಹೆಚ್ಚಾಯಿತು. ಒಂದೇ ಸಮನೆ ಕೂಗಿ ಕೂಗಿ ಆಯಾಸವಾದರೂ ಅದರಿಂದ ಉಪಯೋಗವಾಗುತ್ತಿರಲಿಲ್ಲ. ಯಾರೊಬ್ಬ ಪತ್ರಕರ್ತನೂ ಬದರಿನಾಥದಲ್ಲಿರಲಿಲ್ಲ. ನಮ್ಮನ್ನು ಆ ಭಗವಂತನೂ ಮರೆತಿದ್ದನೆಂದು ಕಾಣುತ್ತದೆ.

ಇದ್ದಕ್ಕಿದ್ದಂತೆಯೇ ಧ್ವನಿವರ್ಧಕದಲ್ಲಿ ಪ್ರಕಟಣೆಯೊಂದು ತೇಲಿಬಂತು. "ಸೇನೆಯ ಹೆಲಿಕಾಪ್ಟರ್‌ಗಳು ಜನರನ್ನು ಜೋಶೀಮಠಕ್ಕೆ ಕರೆದೊಯ್ಯುತ್ತವೆ, ಹೋಗಲಿಚ್ಛಿಸುವವರು ಮಂದಿರ ಸಮಿತಿಯ ಕಛೇರಿಯಲ್ಲಿ ನಿಂತು ಸರದಿಯಲ್ಲಿ ಹೆಸರು ಬರೆಸಬೇಕು" ಎಂಬ ಪ್ರಕಟಣೆ ಜನರನ್ನು ಗೊಂದಲಕ್ಕೀಡುಮಾಡಿತು. ಇದು ಜನರನ್ನು ಒಡೆಯುವ ತಂತ್ರವೆಂದರಿತ ಜನ ದೇವಾಲಯದಿಂದ ಕದಲದೆ ಪ್ರತಿಭಟನೆ ಮುಂದುವರಿಸಿದರು. ಪುನಃ ಮಂದಿರ ಸಮಿತಿಯ ವೃದ್ಧ ಹೊರಬಂದ. "ನೋಡಿ, ಎಲ್ಲರೂ ಹೋಗಿ ಹೆಸರು ಬರೆಸಿ, ನಾಳೆಯಿಂದ ಸೇನೆಯ ಹೆಲಿಕಾಪ್ಟರ್‌ಗಳು ನಿಮ್ಮನ್ನು ಹೊತ್ತೊಯ್ಯುತ್ತವೆ. ಜೋಶೀಮಠಕ್ಕೆ ತಲುಪಿಸುತ್ತವೆ" ಎಂದು ಅಧಿಕಾರಯುತವಾಗಿ ಹೇಳಿದ. "ಜೋಶೀಮಠಕ್ಕೆ ಹೋಗಿ ನಾವೇನು ಸಾಯಬೇಕೇ? ಅಲ್ಲಿಂದ ಮುಂದಕ್ಕೆ ರಸ್ತೆ ಸರಿಯಾಗಿದೆಯೆಂದು ಪುರಾವೆಯೇನು? ಎಲ್ಲೆಡೆ ಭಾರೀ ಮಳೆಯಾಗಿದೆಯೆಂದು ಎಲ್ಲರಿಗೂ ಗೊತ್ತು. ರಸ್ತೆ ಸರಿಯಿಲ್ಲದಿದ್ದರೆ ಏನು ಮಾಡುವುದು? ಸ್ಪಷ್ಟವಾಗಿ ಉತ್ತರಿಸಿ" ಎಂದು ಅರಚಾಡಿದೆವು. "ಅಲ್ಲಿಂದ ಮುಂದೆ ಹರಿದ್ವಾರದವರೆಗೂ ರಸ್ತೆ ಸರಿಯಾಗಿದೆ, ಏನೂ ತೊಂದರೆಯಿಲ್ಲ. ಮೊದಲು ನೀವು ಹೊರಡಿ" ಎಂದ. ಖದೀಮ, ಸುಳ್ಳು ಬೊಗಳುತ್ತಿದ್ದಾನೆ ಎಂದು ಬಗೆದ ಜನ ಇನ್ನೂ ಜೋರಾಗಿ ಘೋಷಣೆಗಳನ್ನು ಕೂಗತೊಡಗಿದರು.

"ಉತ್ತರಾಖಂಡ್ ಸರ್ಕಾರ್, ಜವಾಬ್ ದೋ. ಹಮೇ ಜೋಶೀಮಠ್ ನಹೀ, ದೇಹರಾಡೂನ್ ತಕ್ ಛೋಡೋ" ಎಂಬ ಕೂಗು ಮುಗಿಲುಮುಟ್ಟಿತು. ನೇತೃತ್ವ ವಹಿಸಿದ್ದ ಮುಂಬೈನ ಡಾಕ್ಟರ್ "ಮಂದಿರ ಸಮಿತಿ ನಮ್ಮನ್ನು ದೇಹರಾಡೂನ್‌ವರೆಗೆ ಹೆಲಿಕಾಪ್ಟರ್‌ನಲ್ಲಿ ಸಾಗಿಸುತ್ತೇವೆ ಎಂದು ಭರವಸೆ ಕೊಡುವವರೆಗೂ ನಾನು ಉಪವಾಸ ಸತ್ಯಾಗ್ರಹ ಮಾಡುತ್ತೇನೆ. ನಿಮ್ಮಲ್ಲಿ ಯಾರು ಬೇಕಾದರೂ ನನ್ನೊಂದಿಗೆ ಸೇರಬಹುದು" ಎಂದು ಆಹ್ವಾನವಿತ್ತರು. ಪ್ರತಿಭಟನೆ ತಾರಕಕ್ಕೇರಿತು. ಹಾಗೆಯೇ ದೇವಾಲಯದ ಧ್ವನಿವರ್ಧಕದಿಂದ ಬರುತ್ತಿದ್ದ ಪ್ರಕಟಣೆಯೂ ನಿಲ್ಲದೆ ಮುಂದುವರಿದಿತ್ತು. ಅಷ್ಟರಲ್ಲಿ ಮಂದಿರ ಸಮಿತಿಯ ಮುಖ್ಯಕಛೇರಿಯ ಬಳಿ ಕಲೆಕ್ಟರ್ ಮತ್ತೆ ಬಂದಿರುವನೆಂದೂ, ಅಲ್ಲಿಗೆ ಹೋಗಬೇಕೆಂದೂ ಯಾರೋ ಹೇಳಿದರು. ಡಾಕ್ಟರ್ ಸಮೇತ ಎಲ್ಲರೂ ಅಲ್ಲಿಗೆ ಓಡಿದೆವು.

ಕಲೆಕ್ಟರ್ ಬಂದಿದ್ದು ದಿಟ. ಮಂದಿರ ಸಮಿತಿಯ ಕಛೇರಿಯ ಹೊರಗಡೆ ಅವನನ್ನು ಕಂಡು ನೂರಾರು ಪ್ರಶ್ನೆಗಳನ್ನು ಕೇಳತೊಡಗಿದ ಜನರಿಗೆ ಉತ್ತರ ಹೇಳುವುದು ಅವನ ಕೈಲಿ ಸಾಧ್ಯವಾಗಲಿಲ್ಲ. "ನಿಮ್ಮಲ್ಲಿ ಕೆಲವರು ಪ್ರತಿನಿಧಿಗಳು ದಯವಿಟ್ಟು ನನ್ನೊಡನೆ ಬನ್ನಿ, ಹೀಗೆ ಎಲ್ಲರೂ ಒಟ್ಟಿಗೆ ಮಾತನಾಡಿದರೆ ನಾನೇನೂ ಮಾಡಲು ಸಾಧ್ಯವಿಲ್ಲ" ಎಂದು ಹತಾಶೆಯಿಂದ ಕಲೆಕ್ಟರ್ ನುಡಿದ. ನೆರೆದಿದ್ದ ಎಲ್ಲರೂ ಡಾಕ್ಟರ್‌ರನ್ನು ನಮ್ಮ ಮುಂದಾಳತ್ವ ವಹಿಸುವಂತೆ ಕೋರಿದರು. ಇದಕ್ಕೆ ಸಮ್ಮತಿ ಸೂಚಿಸಿದ ಡಾಕ್ಟರ್,

ಕಲೆಕ್ಟರ್‌ನೊಂದಿಗೆ ಚರ್ಚಿಸಲು ಸೇನೆಯ ಛಾವಣಿಯೆಡೆಗೆ ನಡೆದುಹೋದರು. ಪ್ರತಿಭಟನೆ ತಾತ್ಕಾಲಿಕವಾಗಿ ನಿಂತಿತ್ತು. ಹೊಸದೊಂದು ಆಶಾಕಿರಣ ಮೂಡಿತ್ತು.

# ಸೇನೆಯ ತೆಕ್ಕೆಗೆ ಬಿದ್ದ ರಕ್ಷಣಾಕಾರ್ಯ

ಕಲೆಕ್ಟರ್‌ನೊಂದಿಗೆ ಹೋಗಿದ್ದ ಡಾಕ್ಟರ್ ಎಷ್ಟು ಹೊತ್ತು ಕಾದರೂ ಮರಳಿ ಬರಲಿಲ್ಲ. ಈ ಡಾಕ್ಟರ್‌ನನ್ನು ಮಂದಿರ ಸಮಿತಿಯವರು ಮರುಳು ಮಾಡಿ ರಕ್ಷಿಸಿ ಕಳುಹಿಸಿಬಿಟ್ಟರೆಂಬ ಸಂದೇಹ ದಟ್ಟವಾಗಿ ಆವರಿಸತೊಡಗಿತು. ಊಹಾಪೋಹಗಳಿಗೆ ಪುಷ್ಟಿ ಕೊಡುವಂತೆ ಆ ಡಾಕ್ಟರ್ ಮತ್ತೆಂದೂ ನಮ್ಮ ಕಣ್ಣಿಗೆ ಬೀಳಲಿಲ್ಲ! ಒಡೆದು ಆಳುವ ತಂತ್ರವನ್ನು ಕರಗತಮಾಡಿಕೊಂಡಿರುವ ಜನ ರಕ್ಷಣಾಕಾರ್ಯದ ಉಸ್ತುವಾರಿ ವಹಿಸಿರುವಂತಿತ್ತು.

ಬಿ.ಎಸ್.ಎನ್.ಎಲ್ ದೂರವಾಣಿ ಸಂಪರ್ಕ ಕೆಲಸಮಾಡುತ್ತಿದೆಯೆಂದು ಯಾರೋ ತಿಳಿಸಿದರು. ಮೂವರಲ್ಲೂ ಬಿ.ಎಸ್.ಎನ್.ಎಲ್ ದೂರವಾಣಿ ಇಲ್ಲವಾಗಿದ್ದರಿಂದ ಮುಖ್ಯರಸ್ತೆಯಲ್ಲಿ ದೂರವಾಣಿಗಳನ್ನು ಹುಡುಕಾಡುತ್ತಾ ಹೊರಟೆವು. ಅಂಗಡಿಯೊಂದನ್ನು ಪತ್ತೆಹಚ್ಚಿ, ಅಲ್ಲಿದ್ದ ದೂರವಾಣಿಯಿಂದ ಜಯರಾಮ್‌ನ ಅಣ್ಣನಿಗೆ ಮೊದಲ ಕರೆ ಮಾಡಿದೆವು.

ನಾವು ಬದುಕಿರುವುದಾಗಿಯೂ, ಕ್ಷೇಮವಾಗಿರುವುದಾಗಿಯೂ ಹೇಳಿ, ಇಲ್ಲಿನ ಪರಿಸ್ಥಿತಿಯನ್ನು ಸ್ಥೂಲವಾಗಿ ವಿವರಿಸಿದೆವು. ಕರ್ನಾಟಕದ ಮುಖ್ಯಮಂತ್ರಿಗಳವರೆಗೂ ವಿಷಯ ತಲುಪಿಸಬೇಕೆಂದು ಕೇಳಿಕೊಂಡೆವು. ಮುಖ್ಯಮಂತ್ರಿಗಳ ಕಾರ್ಯಾಲಯದಲ್ಲಿ ಕೆಲಸ ಮಾಡುವವರೊಬ್ಬರು ತನಗೆ ಪರಿಚಯವಿರುವರೆಂದೂ, ಅವರಿಗೆ ಕರೆಮಾಡಿ ಹೇಳುತ್ತೇನೆಂದೂ, ಅವರು ನಿಮ್ಮ ಸಂಪರ್ಕ ಸಾಧಿಸುವರೆಂದೂ ಅಣ್ಣ ಭರವಸೆ ನೀಡಿದ. ಅಷ್ಟರಲ್ಲಿ ಸಂಪರ್ಕ ತುಂಡಾಯಿತು.

ಸುಮಾರು ಹನ್ನೆರಡು ಸಾವಿರ ಜನ ಬದರಿನಾಥದಲ್ಲಿ ಸಿಲುಕಿದ್ದರು. ಉತ್ತರಾಖಂಡದ ಘನ ಸರ್ಕಾರ ನಮ್ಮನ್ನು ರಕ್ಷಿಸಲು ಏನಾದರೂ ಮಾಡುವುದಿರಲಿ, ಆ ವಿಚಾರವಾಗಿ ಯೋಚನೆ ಕೂಡಾ ಮಾಡಿರಲಿಲ್ಲವೇನೋ. ಆದರೆ ದೇವರು ಬೇರೆಯ ರೂಪದಲ್ಲಿ ನಮ್ಮ ಸಹಾಯ ಮಾಡುತ್ತಿದ್ದ. ಅದೆಷ್ಟೋ ಕೋಟಿ ದೇವತೆಗಳಲ್ಲಿ ಸುಮಾರು ಇನ್ನೂರು ದೇವತೆಗಳು ಮಾನವರೂಪದಲ್ಲಿ ಭೂಮಿಗಿಳಿದು ನಮ್ಮ ಸೇವೆಗಾಗಿ ನಿರಂತರ ಪ್ರಯತ್ನ ಮಾಡುತ್ತಿದ್ದರು. ಅವರೇ ಭಾರತೀಯ ಸೇನೆಯ ಯೋಧರು.

ಆಗಸದಲ್ಲಿ ಪುಟ್ಟದೊಂದು ಹೆಲಿಕಾಪ್ಟರ್ ಹಾರಾಡುತ್ತಿತ್ತು. ಅದು ಸೇನೆಯದೇ ಹೆಲಿಕಾಪ್ಟರ್ ಎಂದು ಬಣ್ಣದಿಂದಲೇ ಖಚಿತವಾಗಿ ಹೇಳಬಹುದಿತ್ತು. ಅಲ್ಲಿಗೆ ಮಂದಿರ ಸಮಿತಿಯವರು ಹೇಳಿದ್ದು ಸುಳ್ಳಲ್ಲ!

ನಾವು ಅವರ ಮಾತು ನಂಬದೆ ಮೋಸ ಹೋದೆವೆಂದು ಬೇಸರವಾಯಿತು. ಸಮಯ ಮಿಂಚಿತ್ತು, ಈ ದಿನ ಏನೂ ಮಾಡುವಂತಿರಲಿಲ್ಲ. ಮರುದಿನ ಬೆಳಿಗ್ಗೆ ಮಂದಿರ ಸಮಿತಿಯ ಕಛೇರಿಗೆ ಹೋಗಿ ಅಲ್ಲಿ ನಮ್ಮ ಹೆಸರು ಬರೆಸೋಣವೆಂದು ನಿರ್ಧರಿಸಿ ಮಲಗುವ ಪ್ರಯತ್ನ ಮಾಡಿದೆವು.

ಮರುದಿನ ಬೆಳಿಗ್ಗೆಯೇ ಶ್ರೀಧರ್ ಮತ್ತು ನಾನು ಮಂದಿರ ಸಮಿತಿಯ ಮುಖ್ಯಕಛೇರಿಗೆ ಹೋದೆವು. ಅಲ್ಲಿ ನೂರಾರು ಜನ ದೊಡ್ಡದೊಂದು ಸಾಲಿನಲ್ಲಿ ನಿಂತು ಹೆಸರು ಬರೆಸಲು ಉತ್ಸುಕರಾಗಿದ್ದರು. ಶ್ರೀಧರ್ ತಾನು ಹೆಸರು ಬರೆಸುವೆನೆಂದೂ, ನಾನು ದೇವಸ್ಥಾನದ ಬಳಿ ಹೋಗಿ ಬೇರೇನಾದರೂ ವಿಷಯವಿದ್ದರೆ ತಿಳಿದುಕೊಂಡು ಬರುವಂತೆಯೂ ನನ್ನನ್ನು ಕಳುಹಿಸಿದರು. ಸೇನೆಯ ಹೆಲಿಕಾಪ್ಟರ್ ಆಗಾಗ ಹಾರಾಡುತ್ತಿದ್ದು, ಸಾವಿರಾರು ಜನರಿಗೆ ತನ್ನ ಸದ್ದಿನಿಂದಲೇ ಧೈರ್ಯ, ಸಾಂತ್ವನ ಹೇಳುತ್ತಿತ್ತು. ಅಂತೂ ಇಂತೂ ಗಂಟೆಗಳ ಕಾಲ ನಿಂತು ನಮ್ಮ ಹೆಸರು ಬರೆಸಿ ಹೊರಬಂದ ಶ್ರೀಧರ್, ಒಳಗೆ ಸರದಿಯಲ್ಲಿ ಸಂಖ್ಯೆಯನ್ನು ಕೊಡುತ್ತಿದ್ದಾರೆಂದೂ, ಅದರಂತೆ ಸಾಗಿದರೆ ನಾವು ಇನ್ನೆರಡು ದಿನಗಳಲ್ಲಿ ಇಲ್ಲಿಂದ ಹೋಗುತ್ತೇವೆಂದೂ ಹೇಳಿದರು. ಅವರ ಮಾತು ನೆಮ್ಮದಿಯನ್ನು ತಂದಿತ್ತು.

ಈ ಮಾಹಿತಿಯನ್ನು ಬೆಂಗಳೂರಿಗೆ ತಲುಪಿಸೋಣವೆಂದು ದೂರವಾಣಿ ಕೇಂದ್ರವಾಗಿದ್ದ ಮುಖ್ಯರಸ್ತೆಯ ಚಿಕ್ಕ ಅಂಗಡಿಯತ್ತ ಹೋದರೆ ಅಲ್ಲೂ ದೊಡ್ಡ ಸಾಲು! ಎಲ್ಲೆಲ್ಲಿ ನೋಡಿದರೂ ಭೀತಿಯಿಂದ ತುಂಬಿದ ಜನಸಾಗರವೇ ನೆರೆದಿರುತ್ತಿತ್ತು. ಇಲ್ಲಿ ಕಾಯುವುದರಲ್ಲಿ ಅರ್ಥವಿಲ್ಲವೆಂದೆನಿಸಿ ಕೊಠಡಿಗೆ ಮರಳಿದೆವು. ರಮೇಶ್‌ನ ಮೊಬೈಲ್ ಕೇಳಿ ಪಡೆದು ಈ ಸುದ್ದಿಯನ್ನು ಅಣ್ಣನಿಗೆ ಮುಟ್ಟಿಸಿದೆವು. ಮರುದಿನ ಮುಂಜಾನೆಯೇ ಹೆಲಿಪ್ಯಾಡ್‌ನ ಬಳಿ ಹೋಗಿ ಕಾಯುವುದೆಂದೂ ತೀರ್ಮಾನಿಸಿಕೊಂಡೆವು.

ಮಾರನೆಯ ದಿನ ಬೆಳಿಗ್ಗೆ ಬೇಗ ಹೊರಡುತ್ತೇವೆಂದೂ, ಅಂದು ನಮಗೆ ಅವಕಾಶ ದೊರಕದಿದ್ದರೆ ಮರಳಿ ಅದೇ ಕೊಠಡಿಗೆ ಬರುತ್ತೇವೆಂದೂ ದಿನೇಶ್‌ಗೆ ತಿಳಿಸಿ, ಅವನ ಸಮ್ಮತಿ ಪಡೆದೆವು. ಇಷ್ಟೆಲ್ಲಾ ಪ್ರಯತ್ನ ನಡೆದಿದ್ದರೂ ನಮ್ಮ ಚಾಲಕ ತನಗೂ ಅದಕ್ಕೂ ಸಂಬಂಧವಿಲ್ಲವೆನ್ನುವಂತೆ ಹಾಯಾಗಿ ತಪ್ತಕುಂಡದಲ್ಲಿ ಸ್ನಾನಮಾಡಿ, "ಭಂಡಾರಾ"ದಲ್ಲಿ ಉಚಿತ ಊಟ ಮಾಡಿಕೊಂಡು ಕೊಠಡಿಯಲ್ಲಿ ಬಂದು ಬಿದ್ದುಕೊಂಡಿದ್ದನು. ಬದರಿನಾಥದಲ್ಲಿ ಆ ದಿನಗಳಲ್ಲಿ ಎರಡು "ಭಂಡಾರಾ"ಗಳು ಕಾರ್ಯನಿರ್ವಹಿಸುತ್ತಿದ್ದವು. ಪ್ರಳಯದ ನಂತರದ ದಿನಗಳಲ್ಲಿ ಸ್ಥಳೀಯ ಮಂದಿಯ ಹೊರತಾಗಿ ಯಾವುದೇ ಯಾತ್ರಿ ಬೇಕಾದರೂ ಅಲ್ಲಿ ಹೋಗಿ ಉಚಿತವಾದ ಊಟವನ್ನು ಮಾಡಬಹುದಾಗಿತ್ತು. ನಮ್ಮ ಚಾಲಕ ಈ ವ್ಯವಸ್ಥೆಯ ಸದುಪಯೋಗವನ್ನು ಪಡೆದುಕೊಂಡು ದಿನಕ್ಕೆ ಮೂರು ಬಾರಿಯೂ ಸುಖವಾದ ಭೋಜನ ಸವಿಯುತ್ತಿದ್ದನು.

ಮಾರನೆಯ ಮುಂಜಾನೆ ಹೆಲಿಪ್ಯಾಡ್‌ನ ಸಮೀಪ ಹೋದರೆ ಅಲ್ಲಿ ಜನಸಾಗರ. ಅಸ್ತವ್ಯಸ್ತವಾಗಿ ನಿಂತಿದ್ದ ಜನರು, ಸಾಲಿನಲ್ಲಿ ನಿಂತರೆ ಎಲ್ಲರಿಗೂ ಅನುಕೂಲವೆನ್ನುವ ಚಿಕ್ಕ ಅಂಶವನ್ನೂ ಪರಿಗಣಿಸದೆ ತಾವೇ ಮೊದಲು ಹೋಗಬೇಕೆಂಬ ಹಠದಿಂದ ಹೆಲಿಪ್ಯಾಡ್‌ನ ಗೇಟ್‌ನ ಬಳಿಯಲ್ಲಿಯೇ ಜಮಾಯಿಸಿದ್ದರು. ಯಾರೊಬ್ಬರೂ ಉಸ್ತುವಾರಿ ವಹಿಸುತ್ತಿರುವಂತೆ ಕಾಣಿಸಲಿಲ್ಲ. ಸೇನೆಯವರು ಬರುವಷ್ಟರಲ್ಲಿ ಗೇಟ್‌ನ ಬಳಿ ಸೂಜಿ ಬಿದ್ದರೂ ನೆಲತಾಕದಷ್ಟು ಜನ ಸೇರಿದ್ದರು. ಅನೇಕರು ರಾತ್ರಿಯಿಡೀ ಚಳಿಯಲ್ಲಿ ನಡುಗುತ್ತ ಅಲ್ಲೇ ಕಾಲ ತಳ್ಳಿದ್ದರು.

ಸೇನೆಯವರು ಬಂದೊಡನೆಯೇ ನೂಕುನುಗ್ಗಲು ಪ್ರಾರಂಭವಾಯಿತು. ಗಟ್ಟಿಮುಟ್ಟಾಗಿರುವ ಜನ ಮುಂದೆ ತೂರಲು ಸತತವಾಗಿ ಪ್ರಯತ್ನಪಡುತ್ತಿದ್ದು, ಹೆಲಿಪ್ಯಾಡ್‌ನ ಬದಿಯಲ್ಲಿ ಯುದ್ಧದ ವಾತಾವರಣ ಕಲ್ಪಿತವಾಗಿತ್ತು. ಸೇನೆಯವರು ಬಂದ ತಕ್ಷಣ ಮಾಡಿದ ಮೊದಲ ಕೆಲಸವೆಂದರೆ ಗೇಟ್‌ನ ಬಳಿ ನೆರೆದಿದ್ದ ಜನರನ್ನು ಚದುರಿಸಿದ್ದಲ್ಲದೆ, ಬೇಲಿಯ ಪಕ್ಕದಲ್ಲಿ ಯೋಧರನ್ನು ನಿಲ್ಲಿಸಿ, ಯಾರೊಬ್ಬರೂ ಬೇಲಿ ಹಾರುವುದಿರಲಿ, ಮುಟ್ಟಲೂ ಸಹ ಆಗದಂತೆ ಮುನ್ನೆಚ್ಚರಿಕೆ ವಹಿಸಿದರು. ಸುಮಾರು ಇನ್ನೂರು ಜನ ಸೈನಿಕರು, ಅಧಿಕಾರಿಗಳು ತಮ್ಮತಮ್ಮ ಜವಾಬ್ದಾರಿಗಳನ್ನರಿತು ಶಿಸ್ತಿನಿಂದ ಕಾರ್ಯನಿರ್ವಹಿಸಲಾರಂಭಿಸಿದರು.

ಮಂದಿರ ಸಮಿತಿ ಕೊಟ್ಟ ಸರದಿ ಸಂಖ್ಯೆಯ ಪ್ರಸ್ತಾಪವನ್ನು ಯಾರೋ ಮಾಡಿದರು. "ನಮಗೆ ಈ ಸಂಖ್ಯೆಗೆ ಮಾನ್ಯತೆ ನೀಡುವಂತೆ ಯಾರಿಂದಲೂ ಯಾವುದೇ ಸೂಚನೆ ಬಂದಿಲ್ಲ. ನಮ್ಮ ಕೆಲಸವಿಷ್ಟೇ. ಸೇನೆಯ ವೈದ್ಯರು ಯಾರು ಅನಾರೋಗ್ಯಪೀಡಿತರೆಂದೂ, ಅವರನ್ನು ಕೂಡಲೇ ಇಲ್ಲಿಂದ ಬೆಚ್ಚಗಿನ ಪ್ರದೇಶಕ್ಕೆ ಕಳುಹಿಸಬೇಕೆಂದು ದೃಢೀಕರಿಸುವರೋ, ಅವರನ್ನು ಮಾತ್ರ ನಾವು ರಕ್ಷಿಸುತ್ತಿದ್ದೇವೆ. ಮಂದಿರ ಸಮಿತಿಯ ಈ ಸಂಖ್ಯೆಗೂ, ಅವರು ಕೊಟ್ಟ ಚೀಟಿಗೂ ಮೂರು ಕಾಸಿನ ಬೆಲೆಯಿಲ್ಲ." ಸೇನೆಯವರ ಮಾತೇ ಹಾಗಿರುತ್ತದೆ – ಖಂಡತುಂಡವಾಗಿ. ಅವರು ಏನು ಹೇಳುತ್ತಾರೋ, ಅದನ್ನೇ ಮಾಡುತ್ತಾರೆ. ಏನು ಮಾಡುತ್ತಾರೋ, ಅದನ್ನೇ ಹೇಳುತ್ತಾರೆ. ಈ ಪರಿಸ್ಥಿತಿಯಲ್ಲೂ ಅವರ ವರ್ತನೆ ಹಾಗೆಯೇ ಇತ್ತು. "ನಿಮಗೆ ತೊಂದರೆಯಾಗುತ್ತಿದೆಯೆಂದು ಅನ್ನಿಸಿದಲ್ಲಿ ನಮ್ಮ ವೈದ್ಯರ ಬಳಿ ಹೋಗಿ ಪ್ರಮಾಣಪತ್ರ ತನ್ನಿ. ನಂತರ ನಿಮ್ಮನ್ನು ಹೆಲಿಕಾಪ್ಟರ್‌ನಲ್ಲಿ ಇಲ್ಲಿಂದ ಕಳುಹಿಸಲಾಗುತ್ತದೆ" ಎಂದು ಹೇಳಿಬಿಟ್ಟರು.

ತಲೆಕೆಟ್ಟುಹೋಯಿತು. ಮಂದಿರ ಸಮಿತಿಯವರು ಮಾಡಿದ್ದು ಬರಿಯ ಮೋಸವಷ್ಟೇ ಅಲ್ಲ, ಅದು ನಂಬಿಕೆದ್ರೋಹ. ತಮ್ಮ ಜವಾಬ್ದಾರಿಯಿಂದ ನುಣುಚಿಕೊಳ್ಳಲು ಈ ರೀತಿಯ ದರಿದ್ರ ಕೆಲಸಕ್ಕೆ ಕೈಹಾಕಿದ್ದ ಮಂದಿರ ಸಮಿತಿಯವರು ನಿಂದನಾರ್ಹರು. ದೇವರ ಹೆಸರಿನಲ್ಲಿ ದುಡ್ಡು ಮಾಡಿಕೊಂಡು ಹಾಯಾಗಿ

ತಿರುಗುವ ಇವರು ನಿಸ್ಸಂಶಯವಾಗಿ ಇದರ ಫಲವನ್ನುಣ್ಣುತ್ತಾರೆಂದು ಮನಸಾರೆ ಶಪಿಸುತ್ತಾ ಸಣ್ಣ ಮೋರೆಯೊಂದಿಗೆ ಹೋಟೆಲ್‌ಗೆ ಮರಳಿದೆವು. ಹೊರಪ್ರಪಂಚಕ್ಕೆ ನಮ್ಮ ವಿಷಯ ತಿಳಿಸಲು ಸಾಧ್ಯವೇ ಇಲ್ಲವೆನ್ನುವಂತಿತ್ತು ನಮ್ಮ ಪರಿಸ್ಥಿತಿ. ದೂರವಾಣಿಯ ಅಂಗಡಿಯಲ್ಲಿ ಜನಸಾಗರದೊಳಗೆ ಮುಳುಗಿ ಕಾರ್ಯ ಸಾಧಿಸುವಷ್ಟು ಚೈತನ್ಯ ಉಳಿದಿರಲಿಲ್ಲ. ವಂಚನೆಗೆ ಒಳಗಾದ ನಾವು ತೀವ್ರವಾಗಿ ನೊಂದಿದ್ದೆವು. ನಮ್ಮಂತೆಯೇ ಇನ್ನೂ ಅದೆಷ್ಟು ಜನ ಹಾಗೆ ವ್ಯಾಕುಲಗೊಂಡಿದ್ದರೋ.

ಇನ್ನು ನಮ್ಮ ದಾರಿ ನಾವು ನೋಡಿಕೊಳ್ಳಬೇಕಿತ್ತು. ಉತ್ತರಾಖಂಡ ಸರ್ಕಾರವಾಗಲೀ, ಮಂದಿರ ಸಮಿತಿಯಾಗಲೀ ಏನೇನೂ ಮಾಡಲು ಶಕ್ತರಲ್ಲ ಎಂಬುದು ತಿಳಿದುಹೋಯಿತು. ಸೇನೆಯವರು ಶಕ್ತಿಮೀರಿ ಪ್ರಯತ್ನಿಸುತ್ತಿದ್ದರಾದರೂ ವೃದ್ಧರಿಗೆ, ಅನಾರೋಗ್ಯಪೀಡಿತರಿಗೆ ಹೆಚ್ಚಿನ ಪ್ರಾಮುಖ್ಯತೆ ಕೊಡುತ್ತಿದ್ದರು. ಯುವಕರೂ, ಸದೃಢರೂ ಆದ ನಮ್ಮನ್ನು ಅವರು ಯಾವುದೇ ಕಾರಣಕ್ಕೂ ಮೊದಲು ಕರೆದೊಯ್ಯುವ ಸಂಭವವಿರಲಿಲ್ಲ. ಇದಕ್ಕೆ ಒಂದೇ ಮದ್ದು: ಉನ್ನತಮಟ್ಟದ ಸರ್ಕಾರಿ ಅಧಿಕಾರಿಗಳು ಅಥವಾ ರಾಜಕಾರಣಿಗಳಿಂದ ಒತ್ತಡ ತರಿಸುವುದು. ಆದರೆ ಅದಕ್ಕೂ ದೂರವಾಣಿ ಬೇಕಿದ್ದು, ಮತ್ತೊಮ್ಮೆ ರಮೇಶ್‌ನನ್ನು ಕೇಳುವುದು ಅಷ್ಟು ಸಮಂಜಸವೆನಿಸಲಿಲ್ಲ. ಏನು ಮಾಡುವುದೆಂದು ಚಿಂತಾಕ್ರಾಂತರಾಗಿ ಕೊಠಡಿಯ ಹೊರಗೆ ಕುಳಿತಿದ್ದೆವು.

ನಮ್ಮ ಮುಖ ನೋಡಿದ ದಿನೇಶ್‌ಗೆ ನಾವು ತೊಂದರೆಯಲ್ಲಿ ಸಿಲುಕಿದ್ದೇವೆಂದು ತಿಳಿಯಿತೇನೋ. ನಮ್ಮ ಬಳಿ ಬಂದು ಏನಾಯಿತು ಎಂದು ವಿಚಾರಿಸಿದ. ನಮ್ಮ ಯಡವಟ್ಟು ಪರಿಸ್ಥಿತಿಯನ್ನು ವಿವರಿಸಿ, ದೂರವಾಣಿಯ ವಿಚಾರವನ್ನೂ ಹೇಳಿದೆವು.

ಅನಿರೀಕ್ಷಿತ ಘಟನೆಯೊಂದು ಮರುಕ್ಷಣದಲ್ಲೇ ನಡೆಯಿತು. ಮಾನವ–ಮಾನವನ ನಡುವೆ ಅಪನಂಬಿಕೆಯೇ ತುಂಬಿರುವ ಈ ಕಾಲದಲ್ಲಿ, ಪರಸ್ಪರ ಕಾಲೆಳೆದುಕೊಳ್ಳುವುದರಲ್ಲೇ ಜನ ನಿರತರಾಗಿರುವ ಈ ಯುಗದಲ್ಲಿ ನಮಗೆ ಮಾನವೀಯತೆಯ ವಿರಾಟ್ ರೂಪದ ದರ್ಶನವಾಯಿತು. ದಿನೇಶ್ ತನ್ನ ಕಿಸೆಗೆ ಕೈಹಾಕಿ ಮೊಬೈಲ್ ಹೊರತೆಗೆದು ಜಯರಾಮ್‌ನ ಕೈಲಿಡುತ್ತಾ, ಇದು ಬಿ.ಎಸ್.ಎನ್.ಎಲ್ ಕಂಪೆನಿಯ ಸಿಮ್ ಕಾರ್ಡ್ ಹೊಂದಿರುವುದಾಗಿಯೂ, ಉಪಯೋಗಿಸಿಕೊಳ್ಳಬೇಕೆಂದೂ ಹೇಳಿದನು. "ನಿಮ್ಮಲ್ಲೇ ಇಟ್ಟುಕೊಂಡಿರಿ, ನನಗಾಗಿ ಯಾವುದಾದರೂ ಕರೆ ಬಂದರೆ ಅದನ್ನೆತ್ತದೆ ತುಂಡರಿಸಿ. ನಾನು ಅನಂತರ ಅವರಿಗೆ ಕರೆ ಮಾಡುತ್ತೇನೆ. ನೀವು ಇಲ್ಲಿಂದ ಹೊರಹೋಗುವವರೆಗೂ ಇದನ್ನು ನಿಮ್ಮ ಬಳಿಯೇ ಇಟ್ಟುಕೊಂಡಿರಿ" ಎಂದು ಹೇಳಿದ ದಿನೇಶ್ ಆ ಕ್ಷಣದಿಂದ ನಮ್ಮ ಪಾಲಿನ ದೇವರಾಗಿಬಿಟ್ಟ. ನಮ್ಮದು ಕೇವಲ ಎರಡು ದಿನಗಳ ಪರಿಚಯವಷ್ಟೇ.

ನಮ್ಮಿಂದ ಅವನಿಗೆ ಯಾವುದೇ ರೀತಿಯ ಲಾಭವೂ ಇರಲಿಲ್ಲ. ಆದರೂ ಇಷ್ಟೆಲ್ಲಾ ಸಹಾಯ ಮಾಡುತ್ತಿದ್ದಾನೆಯೆಂದರೆ ಅವನಲ್ಲಿ ಮಾನವೀಯತೆಯ ಗುಣ ಎಷ್ಟಿರಬೇಕು!

ಅದು ಹೇಗೆ ನಾವು ಅವನ ನಂಬಿಕೆ ಗಳಿಸಿದ್ದೇವೆಂದು ದೇವರಿಗೇ ಗೊತ್ತು! ಹಿಂದಿನ ದಿವಸ ಸಹ, ವಿದ್ಯುತ್ ಕೊಡುವ ಸಲುವಾಗಿ ಎಲ್ಲರಿಂದಲೂ ಡೀಸೆಲ್‌ಗಾಗಿ ಹಣ ವಸೂಲಿ ಮಾಡಿದ್ದ ದಿನೇಶ್ ನಮ್ಮಿಂದ ಮಾತ್ರ ಏನೂ ಕೇಳಿರಲಿಲ್ಲ. ಇದು ಹೇಗೆ ಸಾಧ್ಯವಾಯಿತೆಂಬ ಪ್ರಶ್ನೆಗೆ ಉತ್ತರ ಹುಡುಕಲು ನಮ್ಮಿಂದಂತೂ ಎಂದೆಂದಿಗೂ ಸಾಧ್ಯವಿಲ್ಲ.

ಅವನಿಗೆ ಹೇಗೆ ಧನ್ಯವಾದಗಳನ್ನರ್ಪಿಸಬೇಕೆಂಬುದೇ ತೋಚಲಿಲ್ಲ. ಸ್ವಲ್ಪ ಹೊತ್ತು ಅವನ ಈ ಕ್ರಿಯೆಯು ನಮ್ಮನ್ನು ಮೂಕರನ್ನಾಗಿ ಮಾಡಿತ್ತು. ನಂತರ ಕರ್ತವ್ಯಪ್ರಜ್ಞೆ ಮರುಕಳಿಸಿ, ದಿನೇಶ್‌ನ ಮೊಬೈಲ್‌ನಿಂದ ಅಣ್ಣನಿಗೆ ದೂರವಾಣಿ ಕರೆ ಮಾಡಿ, ನಮ್ಮ ಕಥೆಯನ್ನೆಲ್ಲಾ ತಿಳಿಸಿ, ನಮ್ಮ ಮೊಬೈಲ್‌ಗಳು ಸತ್ತುಹೋಗಿರುವುದರಿಂದ ಏನೇ ಇದ್ದರೂ ಇದೇ ಸಂಖ್ಯೆಗೇ ಕರೆ ಮಾಡಬೇಕೆಂದೂ, ಇದು ನಮ್ಮದಲ್ಲದಿದ್ದರೂ ನಮ್ಮ ಬಳಿಯೇ ಇರುತ್ತದೆಯೆಂದೂ ತಿಳಿಸಿದೆವು. ಅಲ್ಲಿಗೆ ನಮ್ಮ ಪ್ರೀತಿಪಾತ್ರರೊಂದಿಗೆ ವಿಚಾರ ವಿನಿಮಯ ಮಾಡಿಕೊಳ್ಳಲು ದಾರಿ ಸಿಕ್ಕಿತ್ತು. ಶ್ರೀಧರ್ ಸಹ ಆ ಮೊಬೈಲ್‌ನಿಂದ ತಮ್ಮ ಪತ್ನಿಗೆ ಕರೆಮಾಡಿ, ಕ್ಷೇಮವಾಗಿದ್ದೇವಾದರೂ ಹಿಂದಿರುವುದು ತಡವಾಗುತ್ತದೆಯೆಂದು ವಿವರಿಸಿದರು.

ರಾತ್ರಿ ಮತ್ತೊಮ್ಮೆ ಬೆಂಗಳೂರಿನಿಂದ ನಮಗೆ ಕರೆ ಬಂದಿತು. 'ಸಬ್‌ಸೇ ತೇರಝ್' ಎಂದು ತನ್ನ ಬೆನ್ನನ್ನು ತಾನೇ ತಟ್ಟಿಕೊಳ್ಳುವ ವಾರ್ತಾವಾಹಿನಿಯೊಂದು ಬದರಿನಾಥದಿಂದ ೨೦೦೦ ಯಾತ್ರಿಕರನ್ನು ಹೆಲಿಕಾಪ್ಟರ್ ಮೂಲಕ ಹೊರಹಾಕಲಾಗಿದೆಯೆಂಬ ಹಸಿಹಸಿ ಸುಳ್ಳನ್ನು ಬಿತ್ತರಿಸಿತ್ತಂತೆ. ಇದನ್ನು ಕೇಳಿದ ಕಿವಿಗೆ ಕಾದ ಸೀಸ ಬಿಟ್ಟಂತಾಯಿತು. "ದಯವಿಟ್ಟು ಈ ದರಿದ್ರ ಟಿ.ವಿ. ಚಾನೆಲ್‌ಗಳನ್ನು ನಂಬಬೇಡಿ. ಎರಡು ಸಾವಿರವಲ್ಲ, ನೂರು ಜನರೂ ಇಂದು ಹೊರಹೋಗಿಲ್ಲ. ಸರ್ಕಾರವು ತಾನೇನೋ ಮಾಡುತ್ತಿರುವೆನೆಂದು ಜನರಿಗೆ ತೋರಿಸಲು ಈ ಆಟ ಹೂಡಿದೆ, ಇಲ್ಲಿ ಏನಾಗುತ್ತಿದೆಯೆಂಬುದು ನಮಗಷ್ಟೇ ಗೊತ್ತು, ಇವರನ್ನು ನಂಬಬೇಡಿ" ಎಂದು ಅವರಿಗಿದ್ದ ಸುಳ್ಳು ಕಲ್ಪನೆಯನ್ನು ಹೋಗಲಾಡಿಸುವ ಪ್ರಯತ್ನ ಮಾಡಿದೆವು. ಈ ತಪ್ಪು ಸುದ್ದಿ ಕೊಟ್ಟ ವರದಿಗಾರನಿಗೆ ಬಲವಾಗಿ ನಾಲ್ಕು ಬಿಗಿಯಬೇಕೆನ್ನುವಷ್ಟು ಸಿಟ್ಟು ಬಂದಿತು.

ಹೆಲಿಪ್ಯಾಡ್ ಸಮೀಪ ಇಷ್ಟೆಲ್ಲಾ ರಾದ್ಧಾಂತ ನಡೆದಿದ್ದರೂ ನಮಗೆ ಮರುದಿನವೂ ಅಲ್ಲಿ ಹೋಗಿ ಕಾಯದೆ ಬೇರೆ ವಿಧಿಯೇ ಇಲ್ಲವೆಂದು ಗೊತ್ತಿತ್ತು. ಮಂದಿರ ಸಮಿತಿಯ ಚೀಟಿಗೆ ಮಾನ್ಯತೆಯಿಲ್ಲದ್ದರಿಂದ, ಮೊದಲು ಬಂದವರಿಗೆ ಆದ್ಯತೆ ಸಿಗುವುದೆಂಬ ಹುಸಿ ಭರವಸೆಯಿಂದ ನಾವು ಮುಂಜಾನೆ ಮೂರು ಗಂಟೆಗೇ ಮತ್ತೊಮ್ಮೆ ಹೆಲಿಪ್ಯಾಡ್‌ನ ಪಕ್ಕದ ಸಾಲಿನಲ್ಲಿ ಹೋಗಿ ಕೂರುವುದೆಂದು ನಿಶ್ಚಯಿಸಿಕೊಂಡು ನಮ್ಮ ಬ್ಯಾಗುಗಳನ್ನೆಲ್ಲವನ್ನು ತಯಾರು ಮಾಡಿಟ್ಟುಕೊಂಡೆವು. ದಿನೇಶ್‌ನನ್ನು ಕರೆದು ಅವನ ಮೊಬೈಲ್ ನಮ್ಮ ಬಳಿಯೇ ಇರುತ್ತದೆಯೆಂದೂ, ನಾವು ಹೊರಡುವಂತಹ ಸಂದರ್ಭವೇನಾದರೂ ಬಂದಲ್ಲಿ ಕರೆ ಮಾಡಿ ತಿಳಿಸುತ್ತೇವೆಂದೂ, ಅವನು ಹೆಲಿಪ್ಯಾಡ್ ಹತ್ತಿರ ಬಂದು ಇಸಿದುಕೊಳ್ಳಬೇಕೆಂದೂ ಹೇಳಿ, ಎರಡು–ಮೂರು ಗಂಟೆಗಳಾದರೂ ನಿದ್ದೆ ತೆಗೆಯೋಣವೆಂದು ಬಿದ್ದುಕೊಂಡೆವು.

# ಹೆಲಿಪ್ಯಾಡ್ ಪಕ್ಕದಲ್ಲೊಂದು ಸರ್ಕಸ್!

ಮಲಗುವ ಮುನ್ನವೇ ನಿರ್ಧರಿಸಿದ್ದಂತೆ ರಾತ್ರಿ ಎರಡೂವರೆ ಗಂಟೆಗೆ ಎದ್ದು ತಯಾರಾಗಿ ನಿಂತೆವು. ನಮ್ಮ ಚಾಲಕ ತಾನು ನಂತರ ಬಂದು ಸೇರುವನೆಂದೂ, ನಾವು ಹೋಗಿರಬೇಕೆಂದೂ ಹೇಳುತ್ತಾ ಮುಸುಕು ಹೊದೆದುಕೊಂಡು ಬಿದ್ದುಕೊಂಡಿದ್ದನು. ಇವನನ್ನು ಯಾವುದೇ ಕಾರಣಕ್ಕೂ ಸಾಲಿನಲ್ಲಿ ನಮ್ಮೊಡನೆ ಸೇರಿಸಿಕೊಳ್ಳಬಾರದೆಂದು ನಿಶ್ಚಯಿಸಿ, ಕೊರೆಯುವ ಚಳಿಯಲ್ಲಿ ನಡುಗುತ್ತಾ ಒಂದೂವರೆ ಕಿ.ಮೀ. ದೂರದ ಹೆಲಿಪ್ಯಾಡ್‌ಗೆ ನಡೆಯುತ್ತ ಹೊರಟೆವು.

ಅಂದು ನಾವು ಬೇಗ ಹೋಗಿದ್ದರಿಂದ ಗೇಟ್‌ಗೆ ಸಮೀಪದಲ್ಲೇ ಸಾಲನ್ನು ಸೇರಿದ್ದೆವು. ಗೇಟ್‌ನಿಂದ ಸುಮಾರು ನೂರು ಅಡಿ ದೂರದಲ್ಲೇ ನಾವಿದ್ದದ್ದು. ಬ್ಯಾಗುಗಳನ್ನಿಳಿಸಿ ತೂಕಡಿಸುತ್ತಾ ಕುಳಿತಿದ್ದರೆ, ಹಿಂದಕ್ಕೆ ಸಾಲು ಬೆಳೆಯುತ್ತಲೇ ಹೋಗುತ್ತಿತ್ತು. ಹಿಂದಷ್ಟೇ ಏನು, ನಮ್ಮ ಮುಂದೆಯೂ ಅಕ್ಕಪಕ್ಕದಲ್ಲೂ ಸಾಲಿನ ಗಾತ್ರ ಹಿಗ್ಗುತ್ತಿತ್ತು! ಅನೇಕ ವಾಹನಗಳಲ್ಲಿ ಜನರು ಗೇಟ್‌ನ ಮುಂದಿನವರೆಗೂ ಬಂದು ಅಲ್ಲಿಳಿದು ಅಲ್ಲೇ ನಿಂತುಬಿಡುತ್ತಿದ್ದರು. ಸಾಲಿನಲ್ಲಿ ಅವರಿಗಿಂತ ಮುಂಚೆ ನೂರಾರು ಮಂದಿ ಬಂದು ಕಾಯುತ್ತಾ ಕುಳಿತಿದ್ದರೆ, ಅವರ ಸರದಿ ಮೊದಲು ಬರುವುದೆಂಬ ಕನಿಷ್ಠ ಪ್ರಜ್ಞೆಯೂ ಅವರಿಗಿರಲಿಲ್ಲ. ಅನಾಗರಿಕ ಜನ! ಪ್ರಪಂಚ ಮುಳುಗಿದರೂ ಸರಿ, ತಾವೊಬ್ಬರು ಮಾತ್ರ ಪಾರಾಗಿಬಿಡಬೇಕೆಂಬ ಧೋರಣೆಯಿಂದಿದ್ದರು. ಬಾಯಿ ಜೋರಾಗಿರುವ ಅನೇಕರು ರಾತ್ರಿಯಿಡೀ ಗೇಟ್‌ನ ಬಳಿಯೇ ನಿಂತಿದ್ದರಿಂದ ಅವರಿಗೂ, ನಸುಕಿನಲ್ಲಿ ಬಂದವರಿಗೂ ದೊಡ್ಡ ಕಲಹವೇ ನಡೆಯುತ್ತಿತ್ತು. ಒಬ್ಬ ವ್ಯಕ್ತಿಯಂತೂ ಜನರನ್ನು ಹಿಂದೆ ಹೋಗಲು ಮನವಿ ಮಾಡಿಕೊಳ್ಳುತ್ತಿದ್ದ ಪರಿ ಕರುಣಾಜನಕವಾಗಿತ್ತು. ಹಿಂದೆ ಹೋಗಿರೆಂದು ಹೇಳುತ್ತಿದ್ದ ಅವನು ಜನರ ಕಾಲಿಗೆ ಬಿದ್ದು ಬೇಡುವುದೊಂದು ಬಾಕಿಯಿತ್ತು. ಪಾಪ, ಅವನು ಹಿಂದಿನ ರಾತ್ರಿ ಎಂಟು ಗಂಟೆಗೇ ಅಲ್ಲಿ ಬಂದು ಕುಳಿತಿದ್ದನಂತೆ. ರಾತ್ರಿಯಿಡೀ ಚಳಿಯಲ್ಲಿ ನಡುಗುತ್ತ ಅಲ್ಲೇ ಕಾದು ಕುಳಿತಿದ್ದ ಆ ವ್ಯಕ್ತಿಯ ಮನವಿಯನ್ನು ಯಾರೊಬ್ಬರೂ ಪುರಸ್ಕರಿಸಲಿಲ್ಲ.

ನಮಗೂ ಅವನ ಪರಿಸ್ಥಿತಿಯನ್ನು ನೋಡಿ ಮರುಕ ಉಂಟಾಗಿತ್ತು. ಜಯರಾಮ್ ಸಾಲಿನಲ್ಲಿ ಕುಳಿತು ನಮ್ಮ ಸಾಮಾನುಗಳತ್ತ ಗಮನವಹಿಸುವೆನೆಂದು ಹೇಳಿದ ನಂತರ ಶ್ರೀಧರ್ ಮತ್ತು ನಾನು ಆ ವ್ಯಕ್ತಿಯ ಸಹಾಯಕ್ಕೆ ಹೋಗಿ ನಿಂತೆವು. ಸಾಧ್ಯವಾದಷ್ಟೂ ಜನರನ್ನು ಸಾಲಿನಲ್ಲಿ ನಿಲ್ಲುವಂತೆ ಮನವಿ ಮಾಡಿಕೊಂಡೆವು. ಜಗಳ ಮಾಡಿದವರ ಜೊತೆ ಜಗಳಕ್ಕೂ ಇಳಿದೆವು.

ಶ್ರೀಧರ್ ಅವರ ತಾಳ್ಮೆ ಹೆಚ್ಚೇ ಇತ್ತಾದರೂ ನಾನು ಬಹಳ ಸಿಟ್ಟಾಗಿದ್ದೆ. ಅನೇಕರೊಂದಿಗೆ ಹಿಂದೆಮುಂದೆ ನೋಡದೆ ವಾಗ್ಯುದ್ಧಕ್ಕಿಳಿದೆ. ಭಿಕ್ಷುಕನೊಬ್ಬನನ್ನು ಹಿಂದೆ ಹೋಗುವಂತೆ ಅಬ್ಬರಿಸಿದೆ. ಸೋಜಿಗವೆಂಬಂತೆ, ಅವನು ನನಗೇ ತಿರುಗಿ ಅಬ್ಬರಿಸಿದ. ನೀನ್ಯಾರು ನನಗೆ ಹೇಳಲಿಕ್ಕೆ ಎಂದು ಜಗಳಕ್ಕಿಳಿದ. ಅವನೊಂದಿಗೆ ಜಗಳವಾಡಲು ಬೇಕಾದಷ್ಟು ಶಬ್ದಸಂಪತ್ತು ನನ್ನಲ್ಲಿರಲಿಲ್ಲ. ನನ್ನ ಹಿಂದಿ ಭಾಷೆಯ ಜ್ಞಾನ ಕಡಿಮೆಯಾದ್ದರಿಂದ ಸೋಲೊಪ್ಪಿ ಅಲ್ಲಿಂದ ನಡೆಯಬೇಕಾಯಿತು. ಮತ್ತೊಬ್ಬಳು ಭಿಕ್ಷುಕಿ ತನ್ನ ಮೂವರು ಎಳೆಯ ಸಹೋದರರೊಂದಿಗೆ ಸಾಲಿನಲ್ಲಿ ನುಗ್ಗಲು ಪ್ರಯತ್ನಿಸುತ್ತಿದ್ದಳು. ಚಿಕ್ಕ ಮಕ್ಕಳಿದ್ದರೆಂಬ ಸಂಗತಿಯನ್ನೂ ಗಮನಿಸದೆ ಅವಳಿಗೂ ಗದರಿದೆ. ಅದೇನೋ ಉತ್ತರ ಕೊಟ್ಟಳಾದರೂ ಅದು ಹಿಂದಿ ಭಾಷೆಯಲ್ಲಿತ್ತೆಂದು ನನಗೆ ಅನ್ನಿಸಲಿಲ್ಲ. ಭಾಷೆ ಅರ್ಥವಾಗದಿದ್ದರೆ ಅವಳನ್ನು ಅಲ್ಲೇ ಇರಬಿಡದೆ ಮತ್ತೇನು ಮಾಡುವುದು!

ಮೂರು–ನಾಲ್ಕು ಕುಟುಂಬಗಳೊಂದಿಗೂ ನನ್ನ ಜಗಳ ಮುಂದುವರಿಯಿತು. ಒಬ್ಬ ಮಧ್ಯವಯಸ್ಕ ಹೆಂಗಸು ಅದೆಷ್ಟೇ ಹೇಳಿದರೂ ವಾದ ಮಾಡುತ್ತಲೇ ಇದ್ದಳು. ಸಹನೆಯ ಕಟ್ಟೆಯೊಡೆದು ಅವಳಿಗದೆಷ್ಟು ಬಯ್ದೆನೆಂದರೆ ಪಕ್ಕದಲ್ಲಿದ್ದ ಅವಳ ಮಗಳು ಜೋರಾಗಿ ಅಳತೊಡಗಿದಳು. ಹದಿಮೂರು–ಹದಿನಾಲ್ಕು ವರ್ಷದ ಆ ಬಾಲಕಿಯ ಕಣ್ಣೀರು ನನ್ನಲ್ಲಿ ಯಾವುದೇ ಕರುಣೆಯನ್ನುಂಟುಮಾಡಲು ವಿಫಲವಾಯಿತು. ಆದರೂ ತಾಳ್ಮೆ ತಂದುಕೊಂಡು ಸಮಾಧಾನದಿಂದ ವಿವರಿಸಲು ಪ್ರಯತ್ನಿಸಿದೆ. ಅವಳು ನನ್ನನ್ನೂ ಮೀರಿಸಿದ ಮಾತುಗಾರ್ತಿ. ಕಣ್ಣೀರು ಬೇರೆ ಜೊತೆ ನೀಡಿದ್ದರಿಂದ ಅವಳೇ ವಿಜಯಿಯಾದಳು. ಹಾಳಾಗಿ ಹೋಗಲಿ, ನಿಂತು ಸಾಯಿ ಎಂದು ಮನದಲ್ಲೇ ಬಯ್ದುಕೊಂಡು ಸಾಲನ್ನು ಸೇರಿ ಜಯರಾಮ್‌ನ ಪಕ್ಕ ಕುಳಿತು ತೂಕಡಿಸಿದೆ.

ಬೆಳಕು ಹರಿಯುತ್ತಿದ್ದಂತೆಯೇ ಯೋಧರು ಹೆಲಿಪ್ಯಾಡ್‌ನ ಆವರಣದಲ್ಲಿ ಪ್ರತ್ಯಕ್ಷರಾದರು. ಅಧಿಕಾರಿ ಪ್ರತೀಕ್ ಸಾಬ್‌ರವರು ಕಣ್ಣಿಗೆ ಬಿದ್ದೊಡನೆ ಜನ ಬೇಡಿಕೊಂಡರು. "ಸಾಬ್, ಜನ ಬೇಕಾಬಿಟ್ಟಿ ನುಗ್ಗುತ್ತಿದ್ದಾರೆ, ದಯವಿಟ್ಟು ಇದನ್ನು ತಡೆಯಲು ಏನಾದರೂ ಪ್ರಯತ್ನ ಮಾಡಿ. ನಾವೆಲ್ಲ ಮುಂಜಾನೆ ಬಹಳ ಮುಂಚೆಯೇ ಬಂದು ಕುಳಿತಿದ್ದೇವೆ. ಈಗ ಬಂದವರು ಮಧ್ಯದಲ್ಲಿ ತೂರುತ್ತಿದ್ದಾರೆ" ಎಂದು ಅಲವತ್ತುಕೊಂಡರು. ಪ್ರತೀಕ್ ಸಾಬ್ ಖಡಕ್ಕಾದ ಅಧಿಕಾರಿ, ಬಹು ಉತ್ಸಾಹಿ ತರುಣ ಕೂಡ. ಅವರ ಕಂಚಿನ ಕಂಠದ ಶಕ್ತಿ ಹೇಗಿತ್ತೆಂದರೆ ನೂರಾರು ಜನ ನೆರೆದಿದ್ದರೂ ಎಲ್ಲರಿಗೂ ಕೇಳಿಸುವಂತೆ ಮಾತನಾಡುತ್ತಿದ್ದರು.. "ಮೊಟ್ಟಮೊದಲು, ನಿಮ್ಮನ್ನೆಲ್ಲ ಇಲ್ಲಿಗೆ ಬಂದು ಸಾಲುಗಟ್ಟಿ ನಿಲ್ಲಲು ಯಾರು ಹೇಳಿದ್ದು, ನೀವು ಅದೆಷ್ಟು ಕಾಲ ನಿಂತರೂ ವೈದ್ಯರ ಅಪ್ಪಣೆಯಿಲ್ಲದೆ ಯಾರೂ ಹೆಲಿಕಾಪ್ಟರ್ ಹತ್ತುವುದಿಲ್ಲ. ದಯವಿಟ್ಟು ಇಲ್ಲಿಂದ ಹೊರಡಿ" ಎಂದು ಹೇಳಿಬಿಟ್ಟರು. "ಸಾಬ್, ಸೇನೆಯೇ ದಿಕ್ಕು

ನಮಗೆ. ಯಾವ ಅಧಿಕಾರಿಯೂ, ಸರ್ಕಾರವೂ ನೆರವಾಗುತ್ತಿಲ್ಲ. ನೀವೇ ನಮಗೆ ಆಶಾಕಿರಣ. ದಯವಿಟ್ಟು ನಮ್ಮನ್ನು ರಕ್ಷಿಸಿ" ಎಂದು ಬೇಡಿಕೊಳ್ಳುತ್ತಿದ್ದ ಜನರನ್ನು ಸಮಾಧಾನಪಡಿಸುವ ಗೋಜಿಗೆ ಅವರು ಹೋಗಲಿಲ್ಲ.

ಹಿಂದಿನ ದಿನ ಕಾಲುಜಾರಿ ಬಿದ್ದ ನಾನು ಹಿಮ್ಮಡಿಯಲ್ಲಿ ಸಣ್ಣ ಗಾಯವೊಂದನ್ನು ಮಾಡಿಕೊಂಡಿದ್ದೆ. ಗಾಯದ ಗಾತ್ರಕ್ಕಿಂತಲೂ ನನ್ನನ್ನು ಕಾಡಿದ್ದು ಅರ್ಧಗಂಟೆಯ ಕಾಲ ಎಡೆಬಿಡದೆ ಸುರಿಯುತ್ತಲೇ ಇದ್ದ ರಕ್ತ. ಸ್ಥಳೀಯ ವೈದ್ಯನೊಬ್ಬನನ್ನು ಕಂಡು ಬ್ಯಾಂಡೇಜ್ ಹಾಕಿಸಿಕೊಂಡಿದ್ದೆನಾದರೂ, ಬೂಟನ್ನು ಧರಿಸಿದಾಗ ಇದು ಮತ್ತೇನು ತೊಂದರೆ ಕೊಡುವುದೋ ಎಂಬ ಚಿಂತೆ ಮೂಡಿತ್ತು. ಪ್ರಥಮ ಚಿಕಿತ್ಸೆಗಾಗಿ ಸೇನೆಯ ವೈದ್ಯರನ್ನು ಕಾಣಲು ಅವರ ಡೇರೆಯೆತ್ತ ಹೋದೆ.

ಡೇರೆಯೆದುರೂ ಜನ ಸಾಲಾಗಿ ನೆರೆದಿದ್ದರು. ವೈದ್ಯರಿನ್ನೂ ಬಂದಿರಲಿಲ್ಲವಾಗಿ ಕಾಯುತ್ತಾ ನಿಲ್ಲಬೇಕಾಯಿತು. ಅಲ್ಲಿ ನಿಂತಿದ್ದವರಲ್ಲಿ ನನ್ನನ್ನು ಹೊರತುಪಡಿಸಿ ಮಿಕ್ಕವರೆಲ್ಲರೂ ವೃದ್ಧರು! ಬಹುತೇಕ ಮಂದಿ ತೀವ್ರವಾಗಿ ಅಸ್ವಸ್ಥರಾಗಿದ್ದರೆಂಬಂತೆ ಕಂಡುಬಂದರು. ಡೇರೆಯೆದುರು ನಾನು ನಿಂತಿದ್ದ ಸ್ಥಳದಿಂದ ಹೆಲಿಪ್ಯಾಡ್ ಸಾಲಿನಲ್ಲಿ ನೆರೆದಿದ್ದ ಜನರ ಮುಖಗಳನ್ನು ಸ್ಪಷ್ಟವಾಗಿ ನೋಡಬಹುದಿತ್ತು. ಅಲ್ಲೂ ಅದೇ ಪರಿಸ್ಥಿತಿ – ನೂರರಲ್ಲಿ ಎಂಭತ್ತರಷ್ಟು ಜನ ಮಧ್ಯವಯಸ್ಸನ್ನು ಮೀರಿದ್ದವರೇ. ಹಲವರ ಬಳಿ ಚಳಿ ತಡೆಯಲು ಅಗತ್ಯವಾದ ಸ್ವೆಟರ್‌ಗಳಾಗಲೀ, ಇತರ ಉಣ್ಣೆಯ ಬಟ್ಟೆಗಳಾಗಲೀ ಇಲ್ಲವೆಂಬುದು ಗೊತ್ತಾಗುತ್ತಿತ್ತು. ಸುತ್ತಮುತ್ತಲಿನ ಪರಿಸ್ಥಿತಿಯನ್ನು ಅವಲೋಕಿಸುತ್ತಾ ವೈದ್ಯರು ಬರುವುದನ್ನು ಕಾಯುತ್ತಾ ಅಲ್ಲೇ ನಿಂತಿದ್ದೆ.

ಇದ್ದಕ್ಕಿದ್ದಂತೆ ನನ್ನ ಮೇಲೆ ನನಗೇ ಜಿಗುಪ್ಸೆ ಬರಲಾರಂಭಿಸಿತು. "ಸೇನೆಯ ಯೋಧರನ್ನೊಮ್ಮೆ ನೋಡು. ಅವರ ಕಷ್ಟವನ್ನು ಲೆಕ್ಕಿಸದೆ, ಇಲ್ಲಿ ನೆರೆದಿರುವ ಜನರ ಕಷ್ಟಗಳಿಗೆ ಸ್ಪಂದಿಸುತ್ತಿದ್ದಾರೆ. ನಿಃಸ್ವಾರ್ಥ ಸೇವೆ ಮಾಡುತ್ತಿದ್ದಾರೆ. ಜನರಲ್ಲೂ, ವೈದ್ಯಕೀಯ ನೆರವು ಅಗತ್ಯವಿರುವ ಅನೇಕರು ಹಿಂದೆ ನಿಂತಿದ್ದಾರೆ. ಒಂದೇ ಒಂದು ಚಿಕ್ಕ ಗಾಯಕ್ಕೆ ಹೆದರಿ ನೀನಿಲ್ಲಿ ಬಂದು ನಿಂತಿರುವೆಯಲ್ಲ, ಇದು ಸರಿಯೇ? ನಿನಗೆ ನಾಚಿಕೆಯಾಗುತ್ತಿಲ್ಲವೇ?" ಎಂದು ಕೇಳಿದ ಆತ್ಮಸಾಕ್ಷಿ ನನ್ನನ್ನು ಬಲವಾಗಿ ಚುಚ್ಚತೊಡಗಿತು. "ಹೌದು, ನಾನಿಲ್ಲಿ ನಿಂತಿರುವುದು ತಪ್ಪು. ಈ ಗಾಯ ಏನೇನೂ ಅಲ್ಲ. ಜೊತೆಗೆ ಒಣಗಿಯೂ ಇರುವುದರಿಂದ ಇದರಿಂದ ತೊಂದರೆಯಂತೂ ಇಲ್ಲ. ಸುಮ್ಮನೆ ಅನವಶ್ಯಕವಾಗಿ ಹೇಡಿಯಂತೆ ನಾನಿಲ್ಲಿ ನಿಲ್ಲಬಾರದು" ಎಂದು ಅನ್ನಿಸುತ್ತಲೇ ವೈದ್ಯರ ಡೇರೆಯಿಂದ ಹೊರಬಿದ್ದೆ.

ಬಿಸಿಲು ನಿಧಾನವಾಗಿ ಏರುತ್ತಿತ್ತು. ಹಾಕಿಕೊಂಡಿರುವ ಸ್ವೆಟರ್, ಜ್ಯಾಕೆಟ್ ಬಿಚ್ಚೆಸೆಯಬೇಕೆನಿಸುವಷ್ಟು ಸೆಖೆಯಾಗಲಾರಂಭಿಸಿತು. ಅಷ್ಟರಲ್ಲಿ ದೂರದಿಂದ ಗುಡುಗುಡು ಎಂದು ಹೆಲಿಕಾಪ್ಟರ್‌ನ ಸದ್ದು ತೇಲಿಬರತೊಡಗಿದ್ದು, ಆ ಸದ್ದು ಹಿಂದಿನ ದಿನಕ್ಕಿಂತ ಬೇರೆಯದಾಗಿತ್ತು. ಕತ್ತೆತ್ತಿ ನೋಡಿದರೆ, ಇಂದು ದೊಡ್ಡ ಹೆಲಿಕಾಪ್ಟರ್ ಬಂದಿದೆ! ಜನ ಸಂತೋಷದಿಂದ ಉದ್ಗರಿಸಿದರು! ದೊಡ್ಡ ಹೆಲಿಕಾಪ್ಟರ್ ಒಮ್ಮೆಲೇ ಮೂವತ್ತು ಜನರನ್ನು ಹೊತ್ತೊಯ್ಯುವ ಸಾಮರ್ಥ್ಯ ಪಡೆದಿದ್ದು, ಇದರ ಸಹಾಯದಿಂದ ಹಿಂದಿನ ದಿನಕ್ಕಿಂತಲೂ ಅಧಿಕ ಜನರು ಬದರಿನಾಥದಿಂದ ಹೊರಬೀಳುವುದರಲ್ಲಿ ಸಂಶಯವಿರಲಿಲ್ಲ. ಅಷ್ಟೇ ಅಲ್ಲದೆ ಈ ಹೆಲಿಕಾಪ್ಟರ್ ಜನರನ್ನು ಜೋಶೀಮಠಕ್ಕೆ ಬದಲಾಗಿ ಅಲ್ಲಿಂದ ಸುಮಾರು ೬೦ ಕಿ.ಮೀ. ಮುಂದಿದ್ದ "ಗೌಚರ್" ಎಂಬ ಊರಿಗೆ ತಲುಪಿಸುತ್ತದೆಯೆಂದೂ ಅಲ್ಲಿಂದ ಮುಂದೆ ರಸ್ತೆ ಸರಿಯಾಗಿದ್ದುದರಿಂದ ಹರಿದ್ವಾರಕ್ಕೆ ಹೋಗಲು ಯಾವುದೇ ಅಡೆತಡೆಗಳೂ ಇಲ್ಲವೆಂದು ತಿಳಿದುಬಂತು. ಇದು ನೆಮ್ಮದಿ ತರುವ ವಿಚಾರವಾದರೂ ಇಲ್ಲೊಂದು ಸೂಕ್ಷ್ಮವನ್ನು ಗಮನಿಸದೆ ಹೋದೆವು. ಇಂದು ಒಂದೇ ಒಂದು ದೊಡ್ಡ ಹೆಲಿಕಾಪ್ಟರ್ ಹಾರಾಡುವುದಾಗಿತ್ತು. ಅಲ್ಲದೆ ಬದರಿನಾಥದಿಂದ ಜೋಶೀಮಠಕ್ಕೆ ಹೋಗಲು ಹನ್ನೆರಡು ನಿಮಿಷಗಳು ಬೇಕಾಗಿದ್ದರೆ, ಗೌಚರ್ ತಲುಪಲು ಇಪ್ಪತ್ತೈದು ನಿಮಿಷಗಳು ಬೇಕಾಗಿತ್ತು. ಒಂದೇ ಒಂದು ಹೆಲಿಕಾಪ್ಟರ್‌ನಿಂದ ಹೆಚ್ಚು ಪ್ರಯೋಜನವಿರಲಿಲ್ಲ.

ಸೇನೆಯು ಯಾತ್ರಿಕರನ್ನು ರಕ್ಷಿಸುವ ಸಲುವಾಗಿ ಹೆಲಿಕಾಪ್ಟರ್ ಒಂದನ್ನೇ ನೆಚ್ಚಿಕೊಂಡಿರಲಿಲ್ಲ. ಗಟ್ಟಿಮುಟ್ಟಾಗಿರುವವರು ನಡೆದು ಹೋಗಲು ಸಾಧ್ಯವಾಗುವಂತೆ ಪಾದಚಾರಿ ಮಾರ್ಗವೊಂದನ್ನು ನಿರ್ಮಿಸುವುದೆಂದು ಅನೇಕ ಸೈನಿಕರು ಹೇಳಿದ್ದರು. ಅಧಿಕಾರಿಯಾಗಿದ್ದ ಲೋಕೇಶ್ ಕುಮಾರ್ ಅವರೂ ಅದರ ವಿಷಯವಾಗಿ ಹಿಂದಿನ ದಿನ ಜನರೊಂದಿಗೆ ಮಾತನಾಡಿದ್ದರು. "ರಸ್ತೆಯಿಲ್ಲದ ಕಡೆಯಲ್ಲೆಲ್ಲ ಕಾಡಿನ ಮಧ್ಯದಲ್ಲಿ ಹಾದುಹೋಗುವ ಪಾದಚಾರಿ ರಸ್ತೆಯೊಂದನ್ನು ಗುರುತಿಸುತ್ತೇವೆ. ಹತ್ತರಿಂದ ಐವತ್ತರ ಒಳಗಿನ ಜನರು ನಡೆದು ಹೋಗಬಹುದು. ಪೈದಲ್ ರಸ್ತಾ (ಪಾದಚಾರಿ ಮಾರ್ಗ) ನಿರ್ಮಾಣವಾದ ನಂತರ ನಿಮ್ಮೊಂದಿಗೆ ನಾನೂ ನಡೆದು ಬರುತ್ತೇನೆ. ಯೋಧರು ಈಗಾಗಲೇ ರಸ್ತೆಯ ನಿರ್ಮಾಣ ಕಾರ್ಯದಲ್ಲಿ ನಿರತರಾಗಿದ್ದಾರೆ" ಎಂದು ನೆರೆದಿದ್ದ ಮಂದಿಗೆ ಹೇಳಿದ್ದರು. ಆದರೆ ಜೋಶೀಮಠಕ್ಕೆ ಹೋಗಲು ಅಲಕನಂದಾ ನದಿಯನ್ನು ದಾಟಬೇಕಾಗಿತ್ತು. ಹೆದ್ದಾರಿಯಲ್ಲಿ ನದಿಯ ಬದಿಯಲ್ಲಿದ್ದ ಜೆ.ಪಿ. ಜಲವಿದ್ಯುತ್ ಸ್ಥಾವರದ ಬಳಿಯ ಸೇತುವೆ ಸಂಪೂರ್ಣವಾಗಿ ಧ್ವಂಸವಾಗಿತ್ತು. ತಾತ್ಕಾಲಿಕ ಸೇತುವೆ ರಚಿಸಲು ನದಿಯಲ್ಲಿನ ನೀರಿನ ತೀವ್ರಗತಿಯ ಸೆಳೆತ ಅಡ್ಡಿಯಾಗಿತ್ತು. ನದಿಯಲ್ಲಿನ ನೀರಿನ ಮಟ್ಟ ಕಡಿಮೆಯಾಗಲೇಬೇಕಿತ್ತು. ಅಲ್ಲಿಯವರೆಗೂ ಕಾಯುವುದು ಬಿಟ್ಟರೆ ಬೇರೇನೂ ಮಾರ್ಗವಿರಲಿಲ್ಲ.

ಸೇನೆಯವರಿಗೆ ಇನ್ನೂ ಅನೇಕ ಅಡ್ಡಿಗಳು ಎದುರಾಗಿದ್ದವು. ಅಲ್ಲಲ್ಲಿ ಹಳ್ಳಿಗಳಲ್ಲಿ ಸಿಲುಕಿಕೊಂಡಿದ್ದ ಜನರನ್ನು ರಕ್ಷಿಸುವುದು ಪ್ರಥಮ ಆದ್ಯತೆಯಾಗಿತ್ತು. ನಮ್ಮೊಂದಿಗೆ ಮಾತನಾಡುತ್ತಿದ್ದ ಸೈನಿಕರೊಬ್ಬರು ಹಳ್ಳಿಗಳ ಸ್ಥಿತಿಯನ್ನು ಮನಮುಟ್ಟುವಂತೆ ವಿವರಿಸಿದರು. "ಹನುಮಾನ್‌ಚಟ್ಟಿಯಲ್ಲಿ ಸುಮಾರು ೧೦ ಜನ ಬಂಡೆಯ ಕೆಳಗೆ ಅವಿತುಕೊಂಡು ಜೀವ ಉಳಿಸಿಕೊಂಡಿದ್ದಾರೆ. ಅವರನ್ನು ಹೆಲಿಕಾಪ್ಟರ್ ಮೂಲಕ ರಕ್ಷಿಸುವ ಪ್ರಯತ್ನ ಯಶಸ್ಸು ಕಂಡಿಲ್ಲ. ನಿನ್ನೆಯ ದಿವಸ ಹೆಲಿಕಾಪ್ಟರ್‌ನಿಂದ ಅವರಿಗೆ ಆಹಾರ ತಲುಪಿಸಲು ಸಾಧ್ಯವಾಗಿದೆಯಾದರೂ ಅವರನ್ನು ಅಲ್ಲಿಂದ ಮೇಲೆ ಕರೆತರಲು ಸೈನಿಕರು ನಡೆದೇ ಹೋಗಬೇಕು. ಬೆಚ್ಚಗಿನ ಬಟ್ಟೆಯೂ ಇಲ್ಲದೆ ಚಳಿಯಲ್ಲಿ ನಡುಗುತ್ತಾ ಆ ಜನ ರಾತ್ರಿ ಕಳೆದಿದ್ದಾರೆ. ಯಾವ ಸಮಯದಲ್ಲಿ ಯಾವ ಪ್ರಾಣಿ ದಾಳಿ ಮಾಡುವುದೋ, ಅಥವಾ ಮತ್ತೊಮ್ಮೆ ಭೂಕುಸಿತ ಉಂಟಾದರೆ ತಮ್ಮ ಪಾಡೇನು ಎಂದು ಪ್ರಾಣಭಯದಿಂದ ನರಳುತ್ತಿದ್ದಾರೆ. ನೀವು ಇಲ್ಲಿಂದ ಹೊರಹೋಗಲು ಸಾಧ್ಯವಿಲ್ಲವಾದರೂ ಬದುಕಿ ಉಳಿದಿದ್ದೀರಿ. ತಾಳ್ಮೆ ಕಳೆದುಕೊಳ್ಳಬೇಡಿ, ಎಲ್ಲರೂ ಸುರಕ್ಷಿತವಾಗಿ ನಿಮ್ಮ ನಿಮ್ಮ ಮನೆಗಳನ್ನು ತಲುಪುವಿರಿ" ಎಂದು ಹೇಳುತ್ತ ಹನುಮಾನ್‌ಚಟ್ಟಿಯ ಭೀಕರತೆಯ ಅರಿವು ಮಾಡಿಕೊಟ್ಟರು.

ದೊಡ್ಡ ಹೆಲಿಕಾಪ್ಟರ್ ನಿರಂತರವಾಗಿ ಸಂಚರಿಸುತ್ತಿದ್ದರೂ ಬಕಾಸುರನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ ಎಂಬಂತಿತ್ತು ಹೆಲಿಪ್ಯಾಡ್‌ನ ಸ್ಥಿತಿ. ಸಾವಿರಾರು ಜನರು ಹೆಲಿಕಾಪ್ಟರ್ ಕೆಳಗಿಳಿಯುತ್ತಿದ್ದರೆ ಸ್ವತಃ ಭಗವಂತನೇ ಸ್ವರ್ಗದಿಂದ ಧರೆಗಿಳಿಯುತ್ತಿರುವನೇನೋ ಎಂಬಂತೆ ಅದರತ್ತಲೇ ಎವೆಯಿಕ್ಕದೆ ನೋಡುತ್ತಿದ್ದರು. ಅದು ಇಳಿಯುವಾಗ, ಮೇಲೇರುವಾಗ ಹೊರಡಿಸುತ್ತಿದ್ದ ಧೂಳು ಕಣ್ಣಿಗೆ ಅಪ್ಪಳಿಸುತ್ತಿದ್ದರೂ ಜನರಾರೂ ಅದನ್ನು ಗಣನೆಗೆ ತೆಗೆದುಕೊಳ್ಳದೆ ಅದನ್ನೇ ದೃಷ್ಟಿಸುತ್ತಿದ್ದರು.

ಆಗಾಗ ಪ್ರತೀಕ್ ಸಾಬ್ ಬೇಲಿಯ ಸಮೀಪ ಸುಳಿದಾಡುತ್ತಿದ್ದರು. ಜನರು ಕೇಳುತ್ತಿದ್ದ ಪ್ರಶ್ನೆಗಳಿಗೆ ಉತ್ತರಿಸುವ ಪ್ರಯತ್ನ ಮಾಡುತ್ತಿದ್ದರು. ಜನರ ಪ್ರಶ್ನೆಗಳು ಅವರಿಗೆ ಅಪಾರವಾದ ಸಿಟ್ಟನ್ನು ತರಿಸುತ್ತಿತ್ತಾದರೂ ಅದನ್ನು ತಡೆಹಿಡಿಯುವ ಪ್ರಾಮಾಣಿಕ ಪ್ರಯತ್ನವನ್ನು ಮಾಡುತ್ತಿದ್ದರು. ಆದರೂ ಪಾದಚಾರಿ ರಸ್ತೆಯ ವಿಷಯದಲ್ಲಿ ನಾನು ಕೇಳಿದ ಪ್ರಶ್ನೆ ಅವರು ಕ್ರೋಧಗೊಳ್ಳುವಂತೆ ಮಾಡಿತು. "ಸೇತುವೆ ಇನ್ನೂ ತಯಾರಾಗಿಲ್ಲ. ಒಂದೆರಡು ದಿನ ಬೇಕಾಗಬಹುದು" ಎಂದು ಚುಟುಕಾಗಿ ಮೊದಲು ಉತ್ತರಿಸಿದರಾದರೂ, ನಾನು ಮತ್ತೊಮ್ಮೆ ಅದೇ ಪ್ರಶ್ನೆ ಕೇಳಿದ್ದರಿಂದ ಅವರ ಕೋಪ ನೆತ್ತಿಗೇರಿತು. ಕೆಂಗಣ್ಣು ಬಿಡುತ್ತಾ ನನ್ನನ್ನು ನೋಡಿದ ಅವರ ಮುಖಚರ್ಯೆಯನ್ನು ನಾನು ಎಂದೆಂದಿಗೂ ಮರೆಯಲಾರೆ. ವೀರನೊಬ್ಬ ಮಾತ್ರ ಬೀರಬಹುದಾದ ನೋಟವದು. ಆ ನೋಟವೊಂದೇ ನನ್ನಲ್ಲಿ ಭೀತಿಯುಂಟುಮಾಡಿದರೂ, ಅವರ ಉತ್ತರ ಅದನ್ನು ಇಮ್ಮಡಿಗೊಳಿಸಿತು. "ಮೊದಲು ಸೇತುವೆ

ನಿರ್ಮಾಣವಾಗಲಿ, ಅದನ್ನು ನಿರ್ಮಿಸುವಾಗ ನಮ್ಮ ಜನ ಪ್ರಾಣತೆತ್ತು ಅದನ್ನು ಗಟ್ಟಿಗೊಳಿಸುವರು. ಅನಂತರ ನೀವು ಅದರ ಮೇಲೆ ಹೋಗಿ ಪಾರಾಗಬಹುದು." ಉಸಿರೆತ್ತದೆ ತಲೆತಗ್ಗಿಸಿ ನಿಂತೆ. ಕ್ಷಮೆ ಕೇಳಬೇಕೆನಿಸಿದರೂ ಅವರು ಬೇಲಿಯೊಳಗೆ ದೂರ ಹೋಗಿದ್ದರು.

ಹೆಲಿಕಾಪ್ಟರ್ ಪ್ರತಿಬಾರಿಯೂ ಬಂದಾಗ ಕೆಳಗಿನಿಂದ ರಕ್ಷಣಾ ಸಾಮಗ್ರಿಗಳನ್ನು, ಆಹಾರ, ನೀರಿನ ಬಾಟಲಿ, ಹಣ್ಣಿನ ರಸ ಇತ್ಯಾದಿ ಅಗತ್ಯ ವಸ್ತುಗಳನ್ನು ಹೊತ್ತು ತರುತ್ತಿತ್ತು. ಸೇನೆಯವರು ಅವೆಲ್ಲವನ್ನೂ ನೆರೆದಿದ್ದ ಜನರಿಗೆ ಉಚಿತವಾಗಿ ಹಂಚಲು ವ್ಯವಸ್ಥೆ ಮಾಡಿದ್ದರು. ಜೊತೆಗೆ ದೊಡ್ಡ ಲಾರಿಯಲ್ಲಿ ಕುಡಿಯುವ ನೀರು ತುಂಬಿಸಿಕೊಂಡು ಬಂದು ಜನರಿಗೆ ಅನುಕೂಲ ಮಾಡಿಕೊಡುವ ಪ್ರಯತ್ನ ಮಾಡುತ್ತಿದ್ದರು. ಆದರೆ ಪೊಲೀಸರಾಗಲೀ ಸರ್ಕಾರದ ಇತರೆ ಪ್ರತಿನಿಧಿಗಳಾಗಲೀ ಹೆಲಿಪ್ಯಾಡ್‌ನ ಸಮೀಪಕ್ಕೂ ಸುಳಿಯುವ ಕೆಲಸ ಮಾಡಲಿಲ್ಲ.

ಹೀಗೇ ಪ್ರತಿಬಾರಿಯೂ ಅವಶ್ಯಕ ವಸ್ತುಗಳನ್ನೇ ತರುತ್ತಿದ್ದ ಹೆಲಿಕಾಪ್ಟರ್ ಒಂದೊಮ್ಮೆ ಕೆಳಗಿಳಿದಾಗ ಜನರು ಕೆಲವರು ಅದರಿಂದ ಹೊರಗೆ ಬಂದರು. ಕ್ಯಾಮೆರಾ, ಮೈಕ್ ಹಿಡಿದು ಹೊರಬರುತ್ತಿದ್ದ ಅವರನ್ನು ನೋಡಿದ ಕೂಡಲೇ ಅವರು ಸುದ್ದಿವಾಹಿನಿಯವರು ಎಂದರಿತ ಜನ ರೊಚ್ಚಿಗೆದ್ದರು. ಇಬ್ಬರು "ಸಬ್‌ಸೇ ತೇಝ್" ಸುದ್ದಿವಾಹಿನಿಯವರೆಂದು ತಿಳಿದ ಮೇಲಂತೂ ಜನರು ಕೋಪವನ್ನು ತಡೆದಿಟ್ಟುಕೊಳ್ಳಲಿಲ್ಲ. ಪತ್ರಕರ್ತರ ಮೇಲೆ ಬಯ್ಗುಳಗಳ, ಕೆಟ್ಟ ಪದಗಳ ಸುರಿಮಳೆಯಾಯಿತು. "ಅದು ಯಾವನೋ ವರದಿ ಮಾಡಿದ್ದು ಮೊದಲ ದಿನ ಬದರಿನಾಥದಿಂದ ೨೦೦೦ ಜನರನ್ನು ರಕ್ಷಿಸಲಾಯಿತೆಂದು? ಎಷ್ಟು ದುಡ್ಡು ತಿಂದಿರುವೆ ಸರ್ಕಾರದಿಂದ?" ಎಂದು ಯಾತ್ರಿಕನೊಬ್ಬ ಕೂಗಿ ಕೇಳಿದ್ದು ಪತ್ರಕರ್ತನಿಗೆ ಕೇಳಿಸಿತು. "ಹೌದು, ನಾನು ದುಡ್ಡು ತಿಂದಿದ್ದೇನೆ. ಏನೀಗ?" ಎಂದು ಅಹಂಕಾರದಿಂದ ಉತ್ತರಿಸಿದ ಪತ್ರಕರ್ತ ಕ್ಯಾಮೆರಾ ಹಿಡಿದು ವೀಡಿಯೋ ಚಿತ್ರೀಕರಣದಲ್ಲಿ ನಿರತನಾದ.

ಮತ್ತೊಂದು ತಂಡ ಹೆಲಿಪ್ಯಾಡ್‌ನ ಬೇಲಿ ದಾಟಿ ಹೊರಬರುವ ಧೈರ್ಯ ಮಾಡಿತು. ರಸ್ತೆಗೆ ಬಂದ ರಿಪೋರ್ಟರ್‌ನನ್ನೂ ಕ್ಯಾಮೆರಾಮನ್‌ನನ್ನೂ ಜನ ಯಾವ ಪರಿ ಕಾಡಿಸಿದರೆಂದರೆ ಅವರಿಗೆ ಭಯ ಹುಟ್ಟಿ ಬೇಲಿಯೊಳಗೆ ತೂರಿಕೊಳ್ಳಲು ಹೊರಟರು. ಕ್ಯಾಮೆರಾಮನ್ ನನ್ನ ಪಕ್ಕದಲ್ಲೇ ಬೇಲಿ ದಾಟುತ್ತಾ ಬೇಲಿಯ ತಂತಿಯನ್ನು ಹಿಡಿದು ಸಹಾಯ ಮಾಡುವಂತೆ ಯಾಚಿಸಿದ. ಒಂದು ಕ್ಷಣ ಅವನ ಕ್ಯಾಮೆರಾ ಕಿತ್ತುಕೊಂಡು ನೆಲಕ್ಕೊಗೆದು ಪುಡಿಪುಡಿ ಮಾಡುವ ಮನಸ್ಸಾದರೂ ಹಾಗೇನೂ ಮಾಡದೆ ಕೇವಲ ಅವನನ್ನು ಬಯ್ದು ಸುಮ್ಮನಾಗಿಬಿಟ್ಟೆ. ಬೇಲಿಯ ಒಳಗೆ ನುಸುಳಿ ಜೀವವುಳಿಸಿಕೊಂಡ ಎರಡನೆಯ ತಂಡ ಹೆಲಿಪ್ಯಾಡ್‌ನ ಮತ್ತೊಂದು ಮೂಲೆಯಲ್ಲಿ ನಿಂತುಕೊಂಡು ಅಲ್ಲಿಂದ ಏನೋ ಚಿತ್ರೀಕರಣ

ಮಾಡಿಕೊಳ್ಳುತ್ತಿದ್ದರು. "ಇವರಿಂದ ನಿಮಗೆ ಏನೂ ಉಪಯೋಗವಿಲ್ಲ, ಈ ಜನ ಕೇವಲ TRP ಗಾಗಿ ಮಾತ್ರ ಇಲ್ಲಿಗೆ ಬಂದಿದ್ದಾರೆ, ಇವರ ಮಾತು ಕೇಳಬೇಡಿ" ಎಂದು ಅನೇಕ ಸೈನಿಕರು ಮತ್ತೆಮತ್ತೆ ನಮಗೆ ಎಚ್ಚರಿಸುತ್ತಲೇ ಇದ್ದರು. ಸುಳ್ಳುಸುಳ್ಳೇ ಸುದ್ದಿ ಹಬ್ಬಿಸುತ್ತಿದ್ದ ಅವರುಗಳ ಬಗ್ಗೆ ಸೇನೆಯವರಿಗೂ ಬಹಳ ಅಸಮಾಧಾನವಿತ್ತು.

"ಸಬ್‌ಸೇ ತೇಝ್" ತಂಡ ಜನರ ಸಮೀಪದಲ್ಲಿ ಕುಳಿತು ಏನೋ ರೆಕಾರ್ಡ್ ಮಾಡಿಕೊಳ್ಳುತ್ತಿತ್ತು. ಅಷ್ಟರಲ್ಲಿ ಯಾವನೋ ಒಬ್ಬ ಪುಣ್ಯಾತ್ಮ ಅವರ ದಿಕ್ಕಿಗೆ ಕಲ್ಲೊಂದನ್ನು ಒಗೆದ! ಕಲ್ಲು ದೊಡ್ಡದೇ ಆಗಿದ್ದು, ಅದು ತಾಗಿದ್ದರೆ ಪತ್ರಕರ್ತರ ತಲೆ ಹೋಳಾಗಿಬಿಡುತ್ತಿತ್ತು. ಅದೃಷ್ಟವಶಾತ್ ಅದು ಅವರಿಂದ ದೂರಕ್ಕೆ ಬಿತ್ತು. ಕಲ್ಲೆಸೆತದ ಈ ಕೃತ್ಯದಿಂದ ಜನ ಅಚ್ಚರಿಯಿಂದ ಮೂಕರಾದರೂ ಮರುಕ್ಷಣವೇ ಚೇತರಿಸಿಕೊಂಡು ಎಸೆದವನಿಗೆ ಬುದ್ಧಿ ಹೇಳಿದರು. "ಹಾಗೆಲ್ಲ ಮಾಡಬೇಡ. ಸೇನೆಯವರು ಸ್ವಯಿಚ್ಛೆಯಿಂದ ನಮಗೆ ಸಹಾಯ ಮಾಡುತ್ತಿದ್ದಾರೆ. ಈ ರೀತಿಯ ಕೆಲಸ ಅವರಿಗೆ ಬೇಸರ ಬರಿಸಿ ಅವರು ರಕ್ಷಣಾಕಾರ್ಯ ಸ್ಥಗಿತಗೊಳಿಸಿಬಿಟ್ಟರೆ ಮುಂದೇನು ಗತಿ! ಅಂತರಂಗದಲ್ಲಿ ನಮಗೆಷ್ಟೇ ಕೋಪವಿದ್ದರೂ ಶಾಂತರಾಗಿರೋಣ" ಎಂದು ತಿಳಿಹೇಳಿದರು.

ಪತ್ರಕರ್ತರು ಬಂದದ್ದೂ ಆಯಿತು, ಹೋದದ್ದೂ ಆಯಿತು. ಅವರಿಂದ ಉಪಕಾರಕ್ಕಿಂತ ಹೆಚ್ಚಾಗಿ ಅಪಕಾರವೇ ಆಗಿತ್ತು. ಮೂವತ್ತು ಜನರನ್ನು ಹೊತ್ತೊಯ್ಯಬಹುದಾಗಿದ್ದ ಹೆಲಿಕಾಪ್ಟರ್ ಈ ನಾಲ್ವರನ್ನೇ ಹೊತ್ತೊಯ್ಯುವಂತಾಗಿ, ಅತ್ಯಮೂಲ್ಯ ಸಮಯ ವ್ಯರ್ಥವಾಯಿತು. ಈ ಎಲ್ಲ ನಾಟಕಗಳ ನಡುವೆ ಅಮಿತ್–ಅಮಿತ್ ಮತ್ತು ಅವರ ಪರಿವಾರ, ನಮ್ಮ ಚಾಲಕ ಸಹ ನಮ್ಮೊಂದಿಗೆ ಬಂದು ಸೇರಿಕೊಂಡಿದ್ದರು. ಎಲ್ಲರಿಗೂ ಇನ್ನು ಅಲ್ಲಿ ನಿಂತಿದ್ದು ಪ್ರಯೋಜನವೇನೂ ಇಲ್ಲವೆಂದು ತೋರಿತು. ಸಾಲನ್ನು ಅರ್ಧಕ್ಕೆ ಬಿಟ್ಟು ಹೊರಡಲು ನಿರ್ಧರಿಸಿದೆವು.

ಬದರಿನಾಥದಿಂದ ಪಾರಾಗಿ ಹೊರಬೀಳಲು ಬೇಕಿರುವ ಎಲ್ಲ ಪ್ರಯತ್ನವನ್ನು ನಾವು ಮಾಡಲೇಬೇಕಿತ್ತು. ಮೇಲಿನಿಂದ ಒತ್ತಡ ತಂದರೆ ಸೇನೆಯವರು ಒಪ್ಪಿ ನಮ್ಮನ್ನು ಬೇಗ ಹೊತ್ತೊಯ್ಯುತ್ತಾರೆಂಬುದು ನಮಗೆ ಅದಾಗಲೇ ಗೊತ್ತಾಗಿದ್ದ ವಿಷಯ. ಯಾರೋ ಒಬ್ಬ ಧನಿಕನಂತೂ ಐದು ಜನರಿಗಾಗಿ ಆರು ಲಕ್ಷ ರೂಪಾಯಿಗಳನ್ನು ತೆತ್ತು ಖಾಸಗಿ ಹೆಲಿಕಾಪ್ಟರ್ ವ್ಯವಸ್ಥೆಯನ್ನು ಮಾಡಿಕೊಂಡಿದ್ದನು. ಗೃಹ/ರಕ್ಷಣಾ ಸಚಿವಾಲಯದ ಉನ್ನತ ಅಧಿಕಾರಿಗಳಿಂದ ಆ ಖಾಸಗಿ ಹೆಲಿಕಾಪ್ಟರ್ ಸೇನೆಯ ಹೆಲಿಪ್ಯಾಡ್‌ನಲ್ಲಿ ಇಳಿಯಲು ಪರವಾನಗಿಯನ್ನೂ ಪಡೆದಿದ್ದನು.

ಸಾಮಾನ್ಯ ದಿನಗಳಲ್ಲಿಯೂ ಬದರಿನಾಥಕ್ಕೆ ಹೆಲಿಕಾಪ್ಟರ್ ಸೇವೆಯುಂಟು. ಗಂಗೋತ್ರಿ–ಯಮುನೋತ್ರಿ–ಕೇದಾರನಾಥ–ಬದರಿನಾಥ ಯಾತ್ರೆಯನ್ನು ಸಂಪೂರ್ಣವಾಗಿ ಹೆಲಿಕಾಪ್ಟರ್‌ನಲ್ಲೇ ಮಾಡಿ ಮುಗಿಸುವ ಜನರೂ ಇದ್ದಾರೆ. ಹಾಗಾಗಿ ಬದರಿನಾಥದಲ್ಲಿ ಕೆಲವು ಖಾಸಗಿ ಹೆಲಿಕಾಪ್ಟರ್‌ಗಳ ಏಜೆಂಟರುಗಳು ಇರುವರು. ಖಾಸಗಿ ಹೆಲಿಕಾಪ್ಟರ್‌ಗಳು ಇಳಿಯಲೆಂದೇ ಮತ್ತೊಂದು ಹೆಲಿಪ್ಯಾಡ್ ಸಹ ಇರುವುದು. ಆದರೆ ವಿಪತ್ತಿನ ಈ ಪರಿಸ್ಥಿತಿಯಲ್ಲಿ ಸರ್ಕಾರ ಆ ಹೆಲಿಪ್ಯಾಡನ್ನೂ ತನ್ನ ತೆಕ್ಕೆಗೆ ತೆಗೆದುಕೊಂಡಿತ್ತಲ್ಲದೆ, ಉತ್ತರಾಖಂಡ ರಾಜ್ಯದಲ್ಲಿ ಸಂಚರಿಸುವ ಎಲ್ಲ ಖಾಸಗಿ ಹೆಲಿಕಾಪ್ಟರ್‌ಗಳನ್ನೂ ತನ್ನ ನಿಯಂತ್ರಣಕ್ಕೆ ತೆಗೆದುಕೊಂಡಿತ್ತು. ಆದ್ದರಿಂದ ಸೇನೆಯ ಹೆಲಿಕಾಪ್ಟರ್‌ವೊಂದೇ ನಮಗಿದ್ದ ಆಸರೆ. ಆದರೆ ನಮ್ಮ ಸರದಿ ಬರಲು ಅದೆಷ್ಟು ಸಮಯ ಕಾಯಬೇಕಿತ್ತೋ ಗೊತ್ತಿಲ್ಲ. ಸರದಿಗಿಂತ ಮುಂಚೆಯೇ ಸೇನೆಯವರು ನಮ್ಮನ್ನು ಕರೆದೊಯ್ಯಬೇಕಾಗಿದ್ದಲ್ಲಿ ಅದಕ್ಕೆ ಉನ್ನತ ಮಟ್ಟದಲ್ಲಿ ಕುಳಿತಿರುವವರ ಶಿಫಾರಸಿನ ಅವಶ್ಯಕತೆಯಿತ್ತು.

# ಹಮ್ ಕಿಸೀ ಕೋ ಮರ್‌ನೇ ನಹೀ ದೇಂಗೆ

ಈ ಮಧ್ಯೆ ಕನ್ನಡ–ತೆಲುಗು ಭಾಷಿಕರಿದ್ದ, ನಡುವಯಸ್ಸನ್ನು ಮೀರಿದ್ದ ೧೨೦ ಮಂದಿ ಯಾತ್ರಿಕರ ಗುಂಪೊಂದು ಬದರಿನಾಥದಲ್ಲಿದ್ದು, ಆ ತಂಡದ ವ್ಯವಸ್ಥಾಪಕರ ಪರಿಚಯವೂ ನಮಗಾಯಿತು. ಕರ್ನಾಟಕದ ಕೆಲವು IAS, KAS ಅಧಿಕಾರಿಗಳು ರಕ್ಷಣಾಕಾರ್ಯದಲ್ಲಿ ಭಾಗಿಯಾಗಿರುವರೆಂದೂ, ಅವರ ಜೊತೆಗೆ ಮಾತನಾಡಬೇಕೆಂದೂ ತಂಡದ ವ್ಯವಸ್ಥಾಪಕರು ನಮಗೆ ತಿಳಿಸಿ, ಅವರ ಮೊಬೈಲ್ ಸಂಖ್ಯೆಯನ್ನು ನೀಡಿದರು. ಆ ಅಧಿಕಾರಿಗಳೊಂದಿಗೆ ಮಾತನಾಡಿದೆವಾದರೂ ಅದು ಫಲ ನೀಡುವಂತೆ ಕಾಣಲಿಲ್ಲ. ಕರ್ನಾಟಕದ ಮಾಜಿ ಮುಖ್ಯಮಂತ್ರಿಯೊಬ್ಬರನ್ನೂ ಮತ್ತು ಭಾರತದ ಮಾಜಿ ಪ್ರಧಾನಮಂತ್ರಿಗಳನ್ನೂ ಮಿತ್ರರ ಮೂಲಕ ಸಂಪರ್ಕಿಸಿದೆವು. ನಮಗೆ ಸಹಾಯ ಮಾಡುವ ಭರವಸೆ ನೀಡಿದ ಅವರುಗಳು ತಮ್ಮ ಪ್ರಯತ್ನ ಮಾಡಿದರಾದರೂ ಅದರಿಂದಲೂ ಲಾಭವಾಗಲಿಲ್ಲ. ಸೇನೆಯ ಅಧಿಕಾರಿಗಳು ಈಗ ಹುಷಾರಾಗಿದ್ದು, ಯಾವುದೇ ಶಿಫಾರಸನ್ನೂ ಮುಲಾಜಿಲ್ಲದೆ ತಿರಸ್ಕರಿಸುತ್ತಿದ್ದರು. ಅನೇಕ ದಾರಿಗಳಿಂದ ನಾವು ನಮ್ಮ ಹೆಸರುಗಳನ್ನು ಸೇನೆಯವರು ಪರಿಗಣಿಸುವಂತೆ ಒತ್ತಡ ತರಲು ಪ್ರಯತ್ನಿಸಿದ್ದೆವಾದರೂ ಅವೆಲ್ಲವೂ ನೀರಿನಲ್ಲಿ ಮಾಡಿದ ಹೋಮದಂತೆ ನಿರುಪಯುಕ್ತವಾದವು.

ಆದರೆ ಇದರಿಂದ ಲಾಭವಾಗದಿರಲಿಲ್ಲ. ಸ್ವಭಾಷಿಕರಿದ್ದ ದೊಡ್ಡ ತಂಡವೊಂದು ಅಲ್ಲಿತ್ತೆಂದು ತಿಳಿದುಬಂದಿತ್ತಾದ್ದರಿಂದ ನಾವು ಒಬ್ಬಂಟಿಗಳು ಎಂಬ ಭಾವನೆ ತೊಲಗಿತು. ತಂಡದ ವ್ಯವಸ್ಥಾಪಕರಾದ ವಿಜಯೇಂದ್ರ ಮತ್ತು ಜೋಶಿಯವರು ಅನುಭವಸ್ಥರಾಗಿದ್ದರಿಂದಲೂ, ನಮ್ಮನ್ನು ಬೇರೆಯವರೆಂದು ಪರಿಗಣಿಸದೆ, ಅವರ ತಂಡದವರೇ ಎಂಬಂತೆ ಹೃತ್ಪೂರ್ವಕವಾಗಿ ನಮ್ಮನ್ನು ತಮ್ಮ ಜೊತೆ ಸೇರಿಸಿಕೊಂಡಿದ್ದರಿಂದಲೂ ನಮಗೆ ಮತ್ತೊಮ್ಮೆ ಹೋರಾಡಿ ದಾರಿ ಹುಡುಕುವ ಚೈತನ್ಯ ಬಂದಿತು. ಅವರ ಜೊತೆಗಿನ ಬಾಂಧವ್ಯ ಎಷ್ಟು ಗಟ್ಟಿಯಾಯಿತೆಂದರೆ ಅವರು ಉಳಿದುಕೊಂಡಿದ್ದ "ಬಾಂಗಡ್" ವಸತಿಗೃಹದಲ್ಲಿ ವಿಚಾರ ವಿನಿಮಯ ಮಾಡಿಕೊಳ್ಳುತ್ತ ಬಹುಕಾಲವನ್ನು ಕಳೆದೆವು. ಅವರ ತೊಂದರೆಗಳೂ ಸಾಕಷ್ಟಿದ್ದವು. ಊಟದ ಸಮಸ್ಯೆ, ಔಷಧಿಯ ಕೊರತೆ, ಮಾನಸಿಕ ಒತ್ತಡ ಇವುಗಳಿಂದ ಬಳಲುತ್ತಿದ್ದ ಅವರನ್ನು ನೋಡಿ, ಅವರೊಂದಿಗೆ ಮಾತನಾಡಿದ ಮೇಲೆ ಪರಸ್ಪರರ ಸಹಾಯದ ಅವಶ್ಯಕತೆಯಿದೆ ಎಂದು ಭಾಸವಾಯಿತು. ಹೊಸದೊಂದು ಆಶಾಕಿರಣ ಮೂಡತೊಡಗಿತ್ತು. ಮತ್ತೊಮ್ಮೆ ಮರುದಿನ ಮುಂಜಾನೆ ಹೆಲಿಪ್ಯಾಡ್‌ನ ಬಳಿ ಅವರೆಲ್ಲರೊಂದಿಗೆ ನಿಂತು ಕಾಯುವ ಕಾರ್ಯಕ್ಕೆ ಒಪ್ಪಿಕೊಂಡೆವು.

ಮುಂಜಾನೆ ಮೂರು ಗಂಟೆಗೇ ಎದ್ದು "ಬಾಂಗಡ್"ಗೆ ಹೋಗಿ ಅವರೊಡನೆ ಸಾಲನ್ನು ಸೇರಿಕೊಂಡೆವು. ಮೂರು ಗಂಟೆಯ ವೇಳೆಯಲ್ಲೇ ಸಾಲು ಅದೆಷ್ಟು ಉದ್ದ ಬೆಳೆದಿತ್ತೆಂದರೆ ಇಂದು ಎರಡೆರಡು ಹೆಲಿಕಾಪ್ಟರ್ ಹಾರಾಡಿದರೂ ನಮ್ಮ ಸರದಿ ಬರುವ ಸಂಭವವೇ ಇರಲಿಲ್ಲ. ಬೆಳಕು ಹರಿಯಲು ಇನ್ನೂ ಬಹಳ ಸಮಯವಿತ್ತು. ಜೊತೆಗೆ ಇಂದು ಯಾವುದೇ ಜಗಳಕ್ಕೂ ಇಳಿಯಲೇ ಬಾರದು ಎಂದು ದೃಢವಾದ ಮನಸ್ಸು ಮಾಡಿದ್ದರಿಂದ ತೆಪ್ಪಗೆ ಸಾಲಿನಲ್ಲಿ ಕುಳಿತು ತೂಕಡಿಸಲಾರಂಭಿಸಿದೆ.

ನದಿಯ ದಡದಲ್ಲಿ ಜುಳುಜುಳು ಹರಿಯುವ ನೀರಿನ ನಾದವನ್ನಾಲಿಸುತ್ತ ರಾತ್ರಿ ನಿದ್ದೆಹೋಗುವುದು ಅದೆಷ್ಟು ಚಂದ! ಪ್ರಕೃತಿಯ ಮಡಿಲಿನಲ್ಲಿ ಹಾಗೆ ಒಂದು ದಿನ ಕಳೆಯುವ ಆಸೆ ಬಹುಕಾಲದಿಂದ ಮನದಲ್ಲಿತ್ತು. ಇಂದು ಆ ಅವಕಾಶ ಕೂಡಿಬಂದಿತ್ತಾದರೂ ಪರಿಸ್ಥಿತಿ ವಿಭಿನ್ನವಾಗಿತ್ತು. ಲೋಕವನ್ನೇ ನುಂಗಿಬಿಡುವಂತೆ ರಭಸದಿಂದ ಹರಿಯುತ್ತಿದ್ದ ಅಲಕನಂದೆ, ನಿರಾಶ್ರಿತರಂತೆ ದೀನರಾಗಿ ಕುಳಿತಿದ್ದ ಅಸಂಖ್ಯಾತ ಜನರೊಟ್ಟಿಗೆ ನಾವು, ಚಳಿ, ಕುಳಿರ್ಗಾಳಿ - ಇವು ಖಂಡಿತ ನನ್ನ ಕನಸಿನ ಒಂದು ಭಾಗವಾಗಿರಲಿಲ್ಲ. ಇದು ಗಮನಕ್ಕೆ ಬಂದೊಡನೆ ನನ್ನ ತೂಕಡಿಕೆ ಮಾಯವಾಯಿತು. ಮಲಗಿದ್ದ ಜಯರಾಮನನ್ನೆಬ್ಬಿಸಿ ನನ್ನ ಕನಸು ನನಸಾದ ಬಗೆಯನ್ನು ಹೇಳಿದಾಗ ಅವನೂ ಬಿದ್ದುಬಿದ್ದು ನಗತೊಡಗಿದ. ಸುತ್ತಲಿನ ಜನರೂ ನಕ್ಕು ಸಹಾನುಭೂತಿ ವ್ಯಕ್ತಪಡಿಸಿದರು.

ಸೂರ್ಯನ ಕಿರಣಗಳು ಭುವಿಯನ್ನು ಚುಂಬಿಸುತ್ತಲೇ ಸೇನೆಯವರು ಯಥಾಪ್ರಕಾರ ತಮ್ಮ ಕೆಲಸ ಪ್ರಾರಂಭಿಸಿದರು. ಅಂದಿನ ದಿನದ ವಿಶೇಷವೇನೆಂದರೆ ಪೊಲೀಸರೂ ಹೆಲಿಪ್ಯಾಡ್‌ನ ಬಳಿ ಹಾಜರಿದ್ದು ಶಿಸ್ತು-ಸುವ್ಯವಸ್ಥೆಯ ಮೇಲ್ವಿಚಾರಣೆ ಮಾಡುತ್ತಿದ್ದರು. ಸಾಲನ್ನು ಯಾರೂ ಮುರಿದು ಮುಂದೆ ಹೋಗುವಂತಿರಲಿಲ್ಲ. ಜೊತೆಗೆ ವಾಹನಗಳ ಓಡಾಟಕ್ಕೂ ಕಡಿವಾಣ ಹಾಕಲಾಗಿತ್ತು. ಒಂದು ಹಂತದ ಬಳಿಕ ಜನ ಮುನ್ನುಗ್ಗದಂತೆ ತಂತಿಬೇಲಿಯ ತಡೆಗೋಡೆ ನಿರ್ಮಿಸಿ, ಅಲ್ಲಿ ಐದಾರು ಸೈನಿಕರ ಪಹರೆಯನ್ನು ಹಾಕಲಾಗಿತ್ತು. ಹೆಲಿಪ್ಯಾಡ್ ಇದ್ದ ಬದರಿನಾಥ-ಮಾನಾ ರಸ್ತೆ ಬೇರೆಯದೇ ಸ್ವರೂಪ ಪಡೆದಿತ್ತು.

ಆ ದಿನ ನಾವು ಹೆಲಿಪ್ಯಾಡ್‌ನಿಂದ ಅದೆಷ್ಟು ದೂರವಿದ್ದೆವೆಂದರೆ ಇಂದು ದೊಡ್ಡ ಹೆಲಿಕಾಪ್ಟರ್ ಎಬ್ಬಿಸುತ್ತಿದ್ದ ಧೂಳು ನಮ್ಮತ್ತ ಬರುತ್ತಲೇ ಇರಲಿಲ್ಲ. ಹರಟೆ ಕೊಚ್ಚಲು ಜನವಿದ್ದಿದ್ದರಿಂದ ಅದು-ಇದು ಮಾತನಾಡುತ್ತ, ಅವರ ಯಾತ್ರೆಯ ಬಗ್ಗೆ ಕೇಳಿ ನಮ್ಮ ಪ್ರವಾಸದ ಬಗ್ಗೆ ಹೇಳುತ್ತ ಕಾಲ ಮುಂದೂಡಿದೆವು. ಇಂದೂ ಒಂದೇ ಹೆಲಿಕಾಪ್ಟರ್ ಹಾರಾಡುತ್ತಿದ್ದು, ಬದರಿನಾಥದಲ್ಲಿಯ

ರಕ್ಷಣಾಕಾರ್ಯವನ್ನು ಅಲಕ್ಷಿಸಿದ್ದಾರೆಂದು ಜನರು ಮಾತನಾಡತೊಡಗಿದರು. ಸೇನೆಯವರಿಗೂ ಅದೇ ರೀತಿಯ ಪ್ರಶ್ನೆ ಕೇಳುತ್ತಿದ್ದರಾದರೂ ಯೋಧರು ಹೆಚ್ಚು ತಲೆಕೆಡಿಸಿಕೊಳ್ಳಲಿಲ್ಲ.

ಕಾದು ಕಾದು ಬೇಸತ್ತು ಆಯಾಸವಾಯಿತು. ಎಷ್ಟೆಂದು ಇತರರ ತಲೆ ತಿನ್ನುವುದು! ಹಸಿವು ಬೇರೆ. ಸಮೀಪದಲ್ಲಿದ್ದ ಅಂಗಡಿಗೆ ಹೋಗಿ ಏನನ್ನಾದರೂ ತರೋಣವೆಂದರೆ ತಂತಿಬೇಲಿ ಮತ್ತು ಸೈನಿಕರ ಪಹರೆ ಆಸ್ಪದ ನೀಡಲಿಲ್ಲ. ನಮ್ಮಲ್ಲಿದ್ದ ಪೆಪ್ಪರಮಿಂಟನ್ನು ಮೆಲ್ಲುತ್ತಾ ಹಾಗೂ ಹೀಗೂ ಹಸಿವನ್ನು ಸಹಿಸಿಕೊಂಡು ನಿಂತಿದ್ದಾಗ ಮಠವೊಂದರ ಸನ್ಯಾಸಿಯೊಬ್ಬ ದೊಡ್ಡ ವಾಹನವೊಂದರಲ್ಲಿ ಆಹಾರಪದಾರ್ಥಗಳನ್ನು ತಂದು ಹಂಚಲು ಶುರುಮಾಡಿದನು. ನಾವು ಕೆಲವರು ಬದುಕಿದೆಯಾ ಬಡಜೀವವೇ ಎಂದುಕೊಳ್ಳುತ್ತಾ ಓಡಿಹೋಗಿ ಅದನ್ನು ಸ್ವೀಕರಿಸಿದೆವು. ರುಚಿಯಿಲ್ಲದ ಆ ತಿನಿಸು ಕೂಡಾ ಸ್ವರ್ಗಸಮಾನವಾಗಿತ್ತು! ಆಗೊಮ್ಮೆ ಈಗೊಮ್ಮೆ ಸೈನಿಕರು ಬಿಸ್ಕತ್‌ಗಳನ್ನು ಹಂಚುವಾಗಲೂ ಹೋಗಿ ತೆಗೆದುಕೊಂಡು ಬಂದು ತಿನ್ನುತ್ತಿದ್ದೆವು.

ಸೂರ್ಯ ನೆತ್ತಿಯ ಮೇಲೆ ಬರುವಷ್ಟರಲ್ಲಿ ನಮ್ಮ ಉತ್ಸಾಹವೆಲ್ಲ ಕರಗಿಹೋಗಿತ್ತು. ಇನ್ನು ಈ ಸಾಲಿನಲ್ಲಿ ನಿಂತು ಕಾಯುವ ಕೆಲಸ ನಮ್ಮಿಂದಾಗುವುದಿಲ್ಲ ಎಂದು ಅನಿಸತೊಡಗಿತು. ಸೈನಿಕರ ಬಳಿ ಹೋಗಿ, "ಸಾಬ್, ಪೈದಲ್ ರಸ್ತಾ ಕ್ಯಾ ಹಾಲ್ ಹೈ?" ಎಂದು ಕೇಳಿದರೆ ಕೋಪದಿಂದ "ಪೈದಲ್ ರಸ್ತಾ ನಹೀ ಖುಲಾ, ನಹೀ ಖುಲಾ, ನಹೀ ಖುಲಾ" ಎಂದು ಗದರಿಸಿಬಿಟ್ಟರು. ಅವರೂ ಮನುಷ್ಯರೇ, ತಾಳ್ಮೆ ಕಳೆದುಕೊಳ್ಳುವುದು ಸಹಜ. ಪಾಪ, ಅದೆಷ್ಟು ಜನರಿಗೆ ಉತ್ತರ ಹೇಳಿ ಸುಸ್ತಾಗಿದ್ದರೋ ದೇವರಿಗೇ ಗೊತ್ತು.

ಹೇಗಿದ್ದರೂ ಅಂದು ನಮ್ಮ ಸರದಿ ಬರುವುದಿಲ್ಲವೆಂದು ಅರಿತ ಸಾವಿರಾರು ಜನ ಮರಳಿ ತಮ್ಮತಮ್ಮ ಹೋಟೆಲ್‌ಗಳಿಗೆ ಹೊರಟರು. ಅವರನ್ನನುಸರಿಸಿ ನಾವೂ ಅದೇ ದಾರಿ ಹಿಡಿದೆವು. ಹೊಟ್ಟೆಗೆ ಸರಿಯಾದ ಊಟವಿಲ್ಲದೆ, ಕಣ್ಣಿಗೆ ಸರಿಯಾದ ನಿದ್ರೆಯಿಲ್ಲದೆ ಬಹಳವಾಗಿ ಬಳಲಿದ್ದೆವು. ಜೊತೆಗೆ ದಿಗಿಲುಗೊಳಿಸುವಂತಹ ಅನಿಶ್ಚಿತತೆ ನಮ್ಮನ್ನು ಇನ್ನೂ ಹೈರಾಣಾಗಿಸಿತ್ತು.

ಕೊಠಡಿಗೆ ಹೋಗಿ ಮಾತಿಲ್ಲದೆ ಉರುಳಿಕೊಂಡ ನಮ್ಮ ಸ್ಥಿತಿಯನ್ನು ಕಂಡು ಪವನ್ ಚಹಾ-ಬಿಸ್ಕತ್‌ಗಳನ್ನು ತಂದು ಎದುರಿಗಿಟ್ಟ. ಪವನ್ ಮಾಡುತ್ತಿದ್ದ ಚಹಾ ವಿಶೇಷವಾಗಿಲ್ಲದಿದ್ದರೂ ಅವನು ಪ್ರೀತಿ-ಆತ್ಮೀಯತೆಗಳಿಂದ ಮಾಡಿಕೊಡುತ್ತಿದ್ದ ರೀತಿ ಚಹಾಕ್ಕೆ ಹೊಸರುಚಿ ತರುತ್ತಿತ್ತು. ಚಹಾ ಸೇವನೆಯ ನಂತರ ದಿನೇಶ್ ಬಂದು ಮಾತಿಗಿಳಿದ. ಸುಮಾರು ಜನ ಗುಡ್ಡಗಾಡು ಪ್ರದೇಶದ ಯುವಕರು

ಮುಂಜಾನೆಯೇ ಅನೇಕ ಗುಂಪುಗಳಲ್ಲಿ ಬದರಿನಾಥದಿಂದ ಹೊರಟಿರುವರೆಂದೂ, ಆದರೆ ಸಂಜೆಯ ವೇಳೆಗೆ ಪ್ರತಿಯೊಬ್ಬನೂ ಖಂಡಿತ ಮರಳಿ ಬರುವನೆಂದೂ ತಿಳಿಸಿದ. ಅದು ಹೇಗೆ ಅಷ್ಟು ಕರಾರುವಕ್ಕಾಗಿ ಹೇಳಿತ್ತಾನೆಂದು ಕೇಳಿದರೆ, "ನದಿ ದಾಟಲು ಬೇರೆ ದಾರಿಯೇ ಇಲ್ಲ, ಸೇತುವೆ ನಿರ್ಮಿಸಲೇ ಬೇಕು. ಸೇನೆ ಮತ್ತು ITBP ಯೋಧರು ಕೆಲಸ ಮಾಡುತ್ತಿದ್ದಾರೆಯಾದರೂ ಅದು ಇಷ್ಟು ಬೇಗ ಮುಗಿಯುವ ಕಾರ್ಯವಲ್ಲ" ಎಂದ. ಏನಾದರೂ ಆಗಲಿ, ನಾವೂ ನಾಳೆ ನಡೆಯುತ್ತ ಹೊರಟುಬಿಡುತ್ತೇವೆಂದು ಹೇಳಿದೆವು. ಅದಕ್ಕೊಪ್ಪದ ಅವನು "ಇವತ್ತು ಹೋಗಿರುವವರೆಲ್ಲರೂ ಮರಳಿ ಬರುವರು. ಜೊತೆಗೆ ಒಮ್ಮೆ ಹನುಮಾನ್‌ಚಟ್ಟಿಯವರೆಗೂ ಕೆಳಗೆ ಹೋದಿರೆಂದರೆ ಮತ್ತೆ ಮೇಲಕ್ಕೆ ಹತ್ತಿಬರಲು ಸಾಧ್ಯವೇ ಆಗದಷ್ಟು ಕಷ್ಟಕರವಾಗಿರುವ ರಸ್ತೆಯದು. ಇಲ್ಲಿಂದ ಪಿಟ್ಠೂ ಮೂಲಕ ಸಾಮಾನು ತೆಗೆದುಕೊಂಡು ಹೋದರೂ, ಅಲ್ಲಿಂದ ಹೊರಲು ಯಾವ ಪಿಟ್ಠೂ ಹೊರುವವನೂ ಎರಡು ಸಾವಿರ ರೂಪಾಯಿ ಕೊಡುತ್ತೇನೆಂದರೂ ಬದರಿನಾಥಕ್ಕೆ ತಂದು ಬಿಡುವುದಿಲ್ಲ. ಉಳಿದುಕೊಳ್ಳಲು ಅಲ್ಲೇನೂ ವ್ಯವಸ್ಥೆಯಿಲ್ಲ, ಪೊಲೀಸರು ಪಾದಚಾರಿ ಮಾರ್ಗ ತಯಾರಾಗಿದೆ ಎಂದು ಹೇಳುವವರೆಗೂ ತೆಪ್ಪಗೆ ಇಲ್ಲೇ ಇರಿ" ಎಂದು ಬುದ್ಧಿವಾದ ಹೇಳಿದ. ಅವನು ಹೇಳಿದ್ದ್ ನಿಜವೆನ್ನುವಂತೆ ಮುಂಜಾನೆ ಹೋಗಿದ್ದ ನೂರಾರು ಸ್ಥಳೀಯರು ಎಲ್ಲರೂ ಸಾಲುಸಾಲಾಗಿ ಸಂಜೆ ಮರಳಿ ಬಂದರು.

ಹೀಗೇ ನಮ್ಮ ಹರಟೆ ಮುಂದುವರಿಯುತ್ತಿರಲು, ಇಬ್ಬರು ಸೈನಿಕರು ಪುಸ್ತಕವೊಂದರ ಸಮೇತ ಅಲ್ಲಿಗೆ ಬಂದರು. ದಿನೇಶ್‌ನಿಂದ ಹೋಟೆಲ್‌ನ ರಿಜಿಸ್ಟರ್ ಪುಸ್ತಕ ಪಡೆದು ಪ್ರತಿಯೊಂದು ಕೊಠಡಿಯಲ್ಲಿದ್ದ ಜನರ ಸಂಖ್ಯೆ, ಅವರ ವಿವರಗಳು, ಸಂಬಂಧಿಕರ ದೂರವಾಣಿ ಸಂಖ್ಯೆ ಇವುಗಳೆಲ್ಲವನ್ನೂ ಪಡೆದುಕೊಂಡರು. ಅವರಲ್ಲಿ ಒಬ್ಬ ಸೈನಿಕರು ಹಿಂದಿನ ದಿನ ಸಾಲಿನಲ್ಲಿ ನಿಂತಾಗ ಪರಿಚಯರಾಗಿದ್ದರು. "ಏಕೆ ಇವೆಲ್ಲ ವಿವರಗಳನ್ನು ಪಡೆಯುತ್ತಿರುವಿರಿ" ಎಂದು ಕೇಳಿದ್ದಕ್ಕೆ "ನಮ್ಮ ದಾಖಲೆಗೆ ಬೇಕಾಗಿದೆ" ಎಂದು ಚುಟುಕಾಗಿ ಉತ್ತರಿಸಿ ಹೊರಟುಹೋದರು. ಹೀಗೆ ನಮ್ಮ ವಿವರಗಳನ್ನು ಬರೆದುಕೊಂಡು ಹೋದ ಸೈನಿಕರು ನನ್ನ ತಂದೆಯವರಿಗೆ ಕರೆಮಾಡಿ, "ನಿಮ್ಮ ಮಗನೂ, ಅವನ ಜೊತೆಗಾರರೂ ಕ್ಷೇಮವಾಗಿದ್ದಾರೆ, ಅವರನ್ನು ಸುರಕ್ಷಿತವಾಗಿ ಮನೆ ಸೇರಿಸುತ್ತೇವೆ" ಎಂದು ಅಭಯ ನೀಡಿದ್ದರಂತೆ. ಸೈನಿಕರೇ ಕರೆಮಾಡಿ ಮಾತನಾಡಿದ ನಂತರ ಮನೆಯಲ್ಲಿ ನಮಗಾಗಿ ಕಾಯುತ್ತಿದ್ದವರ ಧೈರ್ಯ ಹೆಚ್ಚಾಗಿತ್ತು.

ಕಷ್ಟಪಟ್ಟು ಮಧ್ಯಾಹ್ನ ಕಳೆದ ನಂತರ ಸಂಜೆ ಪಾದಚಾರಿ ಮಾರ್ಗದ ಬಗ್ಗೆ ವಿಚಾರಿಸಲು ಮತ್ತೊಮ್ಮೆ ಹೆಲಿಪ್ಯಾಡ್ ಬಳಿ ಹೋದೆವು. ಹೆಲಿಕಾಪ್ಟರ್ ಹಾರಾಟ ಅಂದಿಗೆ ಸ್ಥಗಿತಗೊಂಡಿದ್ದು, ಜನ ಎಲ್ಲೆಂದರಲ್ಲಿ ನಡೆದಾಡುತ್ತಿದ್ದರು. ತಂತಿಬೇಲಿ ಹಾರಿ ನಾವೂ ಹೆಲಿಪ್ಯಾಡ್ ಒಳಗೆ ನುಗ್ಗಿದರೂ ನಮ್ಮನ್ನು

ಕೇಳುವವರಿರಲಿಲ್ಲ. ಅಂದು ಹೆಲಿಕಾಪ್ಟರ್‌ಗಾಗಿ ಕಾದು ಸುಸ್ತಾಗಿದ್ದ ಜನ ಅಧಿಕಾರಿಯಾದ ಲೋಕೇಶ್ ಕುಮಾರ್‌ರ ಸುತ್ತ ನೆರೆದಿದ್ದರು.

ಲೋಕೇಶ್ ಸಾಬ್ ಕೂಡ ಅತ್ಯಂತ ಶಿಸ್ತಿನ ಅಧಿಕಾರಿ. ಜನರೊಂದಿಗೆ ಅವರು ಮಾತಾಡಿದ್ದು ಕಡಿಮೆಯಾದರೂ ವಿಪತ್ತಿನ ಪರಿಸ್ಥಿತಿ ಮತ್ತು ರಕ್ಷಣಾಕಾರ್ಯದ ನಿರ್ವಹಣೆ ಮೆಚ್ಚಲೇಬೇಕಾದ್ದು. ಸುತ್ತ ನೆರೆದಿದ್ದ ಜನರನ್ನು ಕುರಿತು ಅವರು ವಾಸ್ತವಸ್ಥಿತಿಯನ್ನು ವಿವರಿಸುವ ಯತ್ನ ಮಾಡುತ್ತಿದ್ದರು.

"ನೋಡಿ, ಇಂದೂ ಒಂದೇ ಹೆಲಿಕಾಪ್ಟರ್ ಹಾರಾಡಿದೆ. ಕೇದಾರನಾಥ ಕಣಿವೆಯಲ್ಲಿನ ರಕ್ಷಣಾಕಾರ್ಯ ಇನ್ನೂ ಮುಗಿದಿಲ್ಲ. ಅಲ್ಲಿ ಇನ್ನೂ ಅನೇಕ ಜನರು ಬದುಕಿರಬಹುದೆಂಬ ನಂಬಿಕೆ ಇದ್ದರೂ ಸಹ ಅವರನ್ನು ಪತ್ತೆಹಚ್ಚಿ ರಕ್ಷಿಸಲು ಬಹಳ ಕಷ್ಟವಾಗುತ್ತಿದೆ. ಇಲ್ಲಿ ಇರುವವರಿಗೆ ಪ್ರಾಣಾಪಾಯವಂತೂ ಇಲ್ಲವಲ್ಲ. ಸಾವುಬದುಕಿನ ನಡುವೆ ಸಿಲುಕಿ ಅಪಾಯದಲ್ಲಿರುವವರನ್ನು ಮೊದಲು ರಕ್ಷಿಸಬೇಕಾದ್ದು ನ್ಯಾಯವಲ್ಲವೇ? ದಯವಿಟ್ಟು ತಾಳ್ಮೆಯಿಂದಿರಿ. ಶೀಘ್ರವೇ ಅಲ್ಲಿನ ಕಾರ್ಯ ಮುಗಿಸಿ ನಂತರ ಇಲ್ಲಿಗೆ ಹೆಚ್ಚಿನ ಸಂಖ್ಯೆಯಲ್ಲಿ ಹೆಲಿಕಾಪ್ಟರ್, ಸೇನಾಬಲವನ್ನು ನಿಯೋಜಿಸುತ್ತೇವೆ. ಹೆಚ್ಚೆಂದರೆ ಇನ್ನೊಂದು ವಾರದಲ್ಲಿ ಬದರಿನಾಥದಲ್ಲಿರುವ ಎಲ್ಲ ಯಾತ್ರಿಕರನ್ನೂ ಹೊರಹಾಕುತ್ತೇವೆ. ನಿಮಗೆ ಏನು ನೆರವು ಬೇಕೋ, ಅದನ್ನು ನೀಡಲು ಸೇನೆ ಸಿದ್ಧವಿದೆ. ನಮ್ಮ ಪ್ರಾಣ ಪಣವಿಟ್ಟಾದರೂ ನಿಮ್ಮ ಯೋಗಕ್ಷೇಮ ನೋಡಿಕೊಳ್ಳುತ್ತೇವೆ. ಇಲ್ಲಿನ ಸ್ಥಿತಿ ಅರಿತ ನಾವು ಮೊದಲ ದಿನದಿಂದಲೇ, ನಮಗೆ ಸೂಚನೆ ಬರುವ ಮುನ್ನವೇ ಹೆಲಿಕಾಪ್ಟರ್ ಮುಖಾಂತರ ಜನರನ್ನು ರಕ್ಷಿಸುತ್ತಿದ್ದೇವೆ. ವಾಸ್ತವವಾಗಿ ಸೇನೆಯ ಹೆಲಿಕಾಪ್ಟರ್‌ನಲ್ಲಿ ಸಾಮಾನ್ಯ ನಾಗರಿಕರಿಗೆ ಪ್ರವೇಶವಿಲ್ಲ. ನಾಳೆಯ ದಿವಸ ಹಿರಿಯ ಅಧಿಕಾರಿಗಳಿಗೆ ನಾವು ಉತ್ತರ ಕೊಡಬೇಕಾಗಿದ್ದರೂ ಸಹ ನಿಮ್ಮೆಲ್ಲರಿಗಾಗಿಯೇ ಇಷ್ಟು ತೊಂದರೆ ತೆಗೆದುಕೊಳ್ಳುತ್ತಿರುವೆವು" ಎಂದು ಜನರಲ್ಲಿ ವಿನಂತಿಸಿಕೊಂಡರು.

"ಹಮ್ ಕಿಸೀ ಕೋ ಮರ್‌ನೇ ನಹೀ ದೇಂಗೆ!" ಇದು ಲೋಕೇಶ್ ಸಾಬ್ ಹನ್ನೆರಡು ಸಾವಿರ ಯಾತ್ರಿಕರಿಗೆ ಕೊಟ್ಟ ಆಶ್ವಾಸನೆ! ಒಬ್ಬ ಜವಾಬ್ದಾರಿಯುತ ಸೇನಾಧಿಕಾರಿ ಹೀಗೆ ಆಣೆ ಮಾಡಿ ಹೇಳಿದ ಮಾತಿದು. ಲೋಕೇಶ್ ಸಾಬ್‌ರ ಕಾರ್ಯವೈಖರಿಯನ್ನು ಈಗಾಗಲೇ ಕಂಡಿದ್ದ ಜನ ಈ ಮಾತಿನಲ್ಲಿ ನಂಬಿಕೆಯಿಟ್ಟರು.

ಪ್ರತೀಕ್ ಸಾಬ್ ಕೂಡ ಮಾತನಾಡಿದರು. ಪ್ರತೀಕ್ ಸಾಬ್‌ರ ಮಾತನ್ನು ಕೇಳುತ್ತಿದ್ದರೆ ಇವರ ಸುಪರ್ದಿಯಲ್ಲಿ ನಾವಿದ್ದಾಗ ಆ ದೇವರು ಸಹ ನಮ್ಮನ್ನೇನೂ ಮಾಡಲಾರ ಎನ್ನುವಂತಹ ದೃಢನಂಬಿಕೆ

ಬರುತ್ತಿತ್ತು. "ಸೇನೆಯ ಆದ್ಯತೆ ನಿಮ್ಮ ಸೇವೆ ಮಾಡುವುದೇ ಆಗಿದೆ. ನಿಮ್ಮಲ್ಲಿ ಯಾರಿಗೂ ಏನೂ ಆಗದಂತೆ ನೋಡಿಕೊಳ್ಳುವುದು ನಮ್ಮ ಜವಾಬ್ದಾರಿ. ಕಿರಿಯ ಅಧಿಕಾರಿಗಳು, ಸೈನಿಕರು ಆಗಾಗ ನನಗೆ ಹೇಳುತ್ತಿದ್ದಾರೆ: ಸಾಬ್, ಇಲ್ಲಿ ನೆರೆದಿರುವ ಜನ ತುಂಬಾ ಅಶಾಂತಿಯುಂಟುಮಾಡುತ್ತಿದ್ದಾರೆ, ಅವರನ್ನು ನಿಯಂತ್ರಿಸಲು ನಮಗೆ ಆಜ್ಞೆ ಕೊಡಿ, ಹತ್ತು ನಿಮಿಷಗಳಲ್ಲಿ ಇಲ್ಲಿನ ಪರಿಸ್ಥಿತಿಯನ್ನು ತಹಬಂದಿಗೆ ತರುತ್ತೇವೆ. ಆದರೆ ನಾನಾಗಲೀ, ಹಿರಿಯ ಅಧಿಕಾರಿಗಳಾಗಲೀ ಅದಕ್ಕೊಪ್ಪಿಲ್ಲ. ಯಾರೊಬ್ಬ ಸೈನಿಕನೂ ನೆರೆದಿರುವ ನಾಗರಿಕರ ಮೇಲೆ ಕೈ ಮಾಡದೆ ಅದೆಷ್ಟೇ ಕಷ್ಟವಾದರೂ ಸಹಿಸಿಕೊಂಡು ನಮ್ಮ ಕೆಲಸ ಮಾಡಬೇಕು ಎಂದು ಹೇಳಿದ್ದೇವೆ. ನಾವು ತಿಂಡಿ ತಿನ್ನಲು ಹೋಟೆಲ್‌ಗೆ ಹೋದರೂ ಜನ ಪ್ರಶ್ನೆಗಳ ಸುಮಳೆಯನ್ನು ಸುರಿಸುತ್ತಿದ್ದಾರೆ. ಜನರಿಂದ ತಪ್ಪಿಸಿಕೊಳ್ಳಲು ನಾವು ಸೇನಾ ಛಾವಣಿಯಿಂದ ಬದರಿನಾಥಕ್ಕೆ ಹೋಗಲು ಬಳಸು ಮಾರ್ಗವನ್ನು ಹಿಡಿಯುವ ಪರಿಸ್ಥಿಯಿಯುಂಟಾಗಿದೆ. ದಯವಿಟ್ಟು ನೀವು ಸಮಾಧಾನದಿಂದಿದ್ದರೆ ನಮಗೂ ಕೆಲಸಮಾಡಲು ಅನುಕೂಲವಾಗುತ್ತದೆ." ಯಾರೋ ಒಬ್ಬ ಈ ಮಧ್ಯೆ ಅವರ ವೀಡಿಯೋ ಚಿತ್ರೀಕರಿಸಲು ತನ್ನ ಕ್ಯಾಮೆರಾ ಹೊರತೆಗೆದ. "ಮಾರಾಯ, ನಾವು ಸೆಲಿಬ್ರಿಟಿಗಳಲ್ಲ. ನಮ್ಮ ಫೋಟೋ, ವೀಡಿಯೋ ತೆಗೆಯಬೇಡಿ. ನಾವಿಲ್ಲಿ ನಿಮ್ಮ ಸಹಾಯ ಮಾಡಲಷ್ಟೇ ಬಂದಿರುವವರು" ಎಂದು ಹೇಳೀ ಅವನ ಕ್ಯಾಮೆರಾ ಮುಚ್ಚಿಸಿದರು. "ನಮ್ಮ ಯೂನಿಟ್ ಕೂಡಾ ಅನೇಕ ಭಾಗಗಳಾಗಿವೆ. ಹಲವರು ಜೋಶೀಮಠಕ್ಕೆ ಹೋಗಿದ್ದವರು ಅಲ್ಲೇ ಇರಬೇಕಾಗಿದೆ. ಟಿಬೆಟ್ ಗಡಿಯಲ್ಲೂ ನಮ್ಮವರನೇಕರು ಸಿಲುಕಿಕೊಂಡಿದ್ದು, ಅವರಿಗೆ ಅವಶ್ಯಕವಾದ ವಸ್ತುಗಳನ್ನೂ ಸರಬರಾಜು ಮಾಡಲು ನಮಗೆ ಸಾಧ್ಯವಾಗುತ್ತಿಲ್ಲ. ಮಾನಾದಲ್ಲಿ ಇರುವ ಕೆಲವೇ ಕೆಲವು ಜನ ಎಲ್ಲ ಕೆಲಸವನ್ನೂ ನೋಡಿಕೊಳ್ಳಬೇಕಾಗಿದೆ." ಎಂದು ತಮ್ಮ ಸಂಕಟವನ್ನು ತೋಡಿಕೊಂಡರು.

"ಬಹಳಷ್ಟು ಜನರು ಉನ್ನತ ಅಧಿಕಾರಿಗಳಿಂದ ಶಿಫಾರಸು ಮಾಡಿಸುವ ಯತ್ನ ಮಾಡುತ್ತಲೇ ಇದ್ದಾರೆ. ನನ್ನ ಮೊಬೈಲ್‌ಗೆ ದಿನವೂ ನೂರಾರು ಸಂದೇಶಗಳು ಬಂದು ಬೀಳುತ್ತಿವೆ. ಬರುವ ಕರೆಗಳನ್ನೆಲ್ಲಾ ಕಟ್ ಮಾಡುತ್ತಿದ್ದೇನೆ. ಈಗಲೂ ಸಹ ನಾಲ್ಕುನೂರಕ್ಕೂ ಹೆಚ್ಚು ಸಂದೇಶಗಳನ್ನು ಓದದೇ ಹಾಗೇ ಉಳಿಸಿದ್ದೇನೆ. ಬೇಕಿದ್ದರೆ ನೋಡಿ" ಎಂದು ಪುರಾವೆಯಾಗಿ ತಮ್ಮ ಮೊಬೈಲ್‌ನ್ನು ಕಿಸೆಯಿಂದ ತೆಗೆದು ಜನರಿಗೆ ತೋರಿಸುವಷ್ಟರಲ್ಲೇ ಮತ್ತೊಂದು ಕರೆ ಬರತೊಡಗಿದ್ದು, ಮೊಬೈಲ್ ರಿಂಗಣಿಸಲಾರಂಭಿಸಿತು. "ನನ್ನ ಮೇಲಿರುವ ಒತ್ತಡವನ್ನು ನೀವೇ ಖುದ್ದಾಗಿ ನೋಡಿರುವಿರಲ್ಲ ಈಗ! ನನಗೆ ನಿಮ್ಮ ಕಷ್ಟ ಅರ್ಥವಾಗುತ್ತದೆ. ನಿಮ್ಮ ಜಾಗದಲ್ಲಿ ಇದ್ದಿದ್ದರೆ, ನಾನು ಸಹ ನಿಮ್ಮಂತೆಯೇ ಆಡುತ್ತಿದ್ದೆ. ಆದರೆ ನಮ್ಮ ಸ್ಥಿತಿಯನ್ನೂ ಅರ್ಥಮಾಡಿಕೊಂಡು ಸಹಕರಿಸಿ" ಎಂದು ಬಿನ್ನವಿಸಿಕೊಂಡರು.

ಗುಂಪಿನಲ್ಲೊಬ್ಬ ಶತಮೂರ್ಖನಿದ್ದ. "ಸಾಬ್, ಇವೆಲ್ಲ ಸರಿ. ಆದರೆ ಚೀನಾ ಗಡಿಯಿಂದ ಬದರಿನಾಥ ಕೂಗಳತೆಯ ದೂರದಲ್ಲಿದೆ. ನಾಳೆಯ ದಿವಸ ಇಲ್ಲಿನ ಸ್ಥಿತಿಗತಿಗಳನ್ನು ಚೀನಾ ತನ್ನ ಲಾಭಕ್ಕಾಗಿ ಉಪಯೋಗಿಸಿಕೊಂಡು ಬದರಿನಾಥದ ಮೇಲೆ ದಾಳಿ ಮಾಡಿದರೆ ಅದಕ್ಕೇನು ಮಾಡುವಿರಿ?" ಎಂದು ಪ್ರಶ್ನಿಸಿದ. ಪ್ರಶ್ನೆ ಸೂಕ್ತವಾಗಿದ್ದರೂ ಅವನು ಕೇಳಿದ ಧಾಟಿ ಭಾರತೀಯ ಸೇನೆಯನ್ನೇ ಹೀಯಾಳಿಸುವಂತಿತ್ತು. ಮೊದಲೇ ಖಡಕ್ಕಾದ ಪ್ರತೀಕ್ ಸಾಬ್ ಈ ಪ್ರಶ್ನೆ ಕೇಳುತ್ತಲೇ ಉರಿದುಬಿದ್ದರು. ಅವರಿಗೆ ಆ ವ್ಯಕ್ತಿಯನ್ನು ಕೊಂದುಬಿಡುವಷ್ಟು ಕೋಪ ಬಂದಿತ್ತು. ಕಣ್ಣು ಕೆಂಪಾಗಿತ್ತು. ಮತ್ತೂ ಜೋರಾದ ದನಿಯಲ್ಲಿ "ಚೀನಾ ಆಕ್ರಮಣ ಮಾಡಿದರೆ ಅದಕ್ಕೆ ವಿರುದ್ಧವಾಗಿ ಏನು ಮಾಡಬೇಕೆಂದು ನಮಗೆ ಗೊತ್ತಿದೆ. ಒಂದು ವಾರದ ಹಿಂದೆ ನಾನೆಲ್ಲಿದ್ದೆ, ಏನು ಮಾಡುತ್ತಿದ್ದೆ ಎಂದು ನಿಮಗೆ ಗೊತ್ತಿಲ್ಲ. ಇಲ್ಲಿನ ಕಾರ್ಯಾಚರಣೆಯ ನಂತರ ನಾನು ಎಲ್ಲಿಗೆ ಹೋಗುತ್ತೇನೆಂದೂ ನಿಮಗೆ ತಿಳಿಯುವುದಿಲ್ಲ. ಗಡಿಯಲ್ಲಿನ ನಮ್ಮ ಯೋಧರು ಹೇಗಿದ್ದಾರೆ, ಅವರ ಸ್ಥಿತಿಗತಿಗಳೇನು, ಗಡಿಭಾಗದ ಪ್ರಾಂತ್ಯ ಹೇಗೆಲ್ಲಾ ಇದೆ, ಒಂದು ವೇಳೆ ಚೀನಾ ದಾಳಿ ಮಾಡಿದ್ದೇ ಆದಲ್ಲಿ ಇಲ್ಲಿಂದ ಗಡಿಗೆ ಎಷ್ಟು ಹೆಲಿಕಾಪ್ಟರ್ ಹಾರಾಡುತ್ತವೆ, ಅದರಲ್ಲಿ ಏನೇನು ಸಾಮಗ್ರಿಗಳು ಹೋಗುತ್ತವೆ, ಅವುಗಳ ಬಗ್ಗೆ ನಿಮಗೆ ಏನೇನೂ ಮಾಹಿತಿ ಇಲ್ಲ" ಎಂದು ಅಬ್ಬರಿಸಿದರು. ಈ ಉತ್ತರದಿಂದ ತೃಪ್ತಿಗೊಳ್ಳದೆ ಮರುಪ್ರಶ್ನೆಯನ್ನು ಎಸೆಯಲು ತಯಾರಾಗಿದ್ದ ಆ ವ್ಯಕ್ತಿಯನ್ನು ಜನರು ಬಯ್ದು ಬಾಯಿಮುಚ್ಚುವಂತೆ ಮಾಡಿದರು. ಸೈನ್ಯಾಧಿಕಾರಿಗಳಿಗೆ, ಯೋಧರಿಗೆ ನೋವುಂಟುಮಾಡಿದರೆ ಅದರ ಪರಿಣಾಮವನ್ನು ನಾವೇ ಆಮೇಲೆ ಎದುರಿಸಬೇಕು ಎಂಬ ಸತ್ಯಾಂಶ ಎಲ್ಲರಿಗೂ ಗೊತ್ತಿದ್ದರೂ ಈ ರೀತಿಯ ತಲೆಕೆಟ್ಟ ಜನರು ಇದ್ದೇ ಇದ್ದರು.

ದೇಶದ ಇತರೆ ಭಾಗಗಳಿಗೂ ಈಗಾಗಲೇ ಉತ್ತರಾಖಂಡದ ಪ್ರವಾಹದ ಸುದ್ದಿ ತಲುಪಿದ್ದರಿಂದ, ಎಲ್ಲೆಲ್ಲಿಂದಲೂ ಸಂತ್ರಸ್ತರ ಸಹಾಯಕ್ಕೆ ಬೇಕಾದ ನೆರವು ದೊರಕಿ, ಅವಶ್ಯಕ ವಸ್ತುಗಳು ಹರಿದುಬರಲಾರಂಭಿಸಿದ್ದವು. ಆ ವಸ್ತುಗಳನ್ನು ಯಾತ್ರಿಗಳಿಗೆ ಹಂಚುವ ಕೆಲಸವನ್ನೂ ಸೇನೆ ಸಮರ್ಥವಾಗಿ ನಿಭಾಯಿಸಿತು. ಬದರಿನಾಥದಲ್ಲಿ ಹೆಲಿಪ್ಯಾಡ್ ಪಕ್ಕ ರಾತ್ರಿಯಿಡೀ ಕಳೆಯಲು ತಯಾರಾಗಿದ್ದ ಮಂದಿಗೆ ಬೆಚ್ಚಗಿನ ಹೊದಿಕೆ, ತಿನ್ನಲು ತರಹೇವಾರಿ ಬಿಸ್ಕತ್ತು, ಚಿಪ್ಸ್ ಮತ್ತಿತರ ತಿನಿಸುಗಳು, ಕುಡಿಯುವ ನೀರು, ಹಣ್ಣಿನ ರಸ – ಇವುಗಳಷ್ಟೇ ಅಲ್ಲದೆ ಯಾರಿಗಾದರೂ ಬೇಕಾಗಿದ್ದಲ್ಲಿ ಬಟ್ಟೆ, ವೈದ್ಯಕೀಯ ಸೇವೆ ಇವೆಲ್ಲವನ್ನೂ ತಲುಪಿಸುವಂತಹ ಸಮರ್ಪಕ ವ್ಯವಸ್ಥೆಯೊಂದನ್ನು ಕಲ್ಪಿಸಿತು. ಸ್ಥಳೀಯ ಆಡಳಿತ ಸಹ ನಿದ್ದೆಯಿಂದೆದ್ದು, ಉಚಿತ ಊಟದ ವ್ಯವಸ್ಥೆ, ವೈದ್ಯರ ಉಪಸ್ಥಿತಿ, ಜೊತೆಗೆ ಪ್ರತಿನಿತ್ಯ ATM ಯಂತ್ರದಲ್ಲಿ ಬ್ಯಾಂಕ್ ಸಿಬ್ಬಂದಿ ಬಂದು ಹಣಹಾಕುವಂತಹ ಸೌಲಭ್ಯಗಳನ್ನು ಒದಗಿಸಿತು. ಬದರಿನಾಥದಲ್ಲಿರುವ ಬ್ಯಾಂಕ್ ಶಾಖೆ ವಾಸ್ತವವಾಗಿ ಶಾಖೆಯೇ ಅಲ್ಲ! ನಿಜ ಹೇಳಬೇಕೆಂದರೆ ಬದರಿನಾಥ ಊರಿನಲ್ಲಿ ಚಳಿಗಾಲದಲ್ಲಿ ಹಿಮ ಆವರಿಸಿ ಜನರು ಹೊರಹೋಗುವುದರಿಂದ ಈ ಶಾಖೆ ಆರು ತಿಂಗಳ ಕಾಲ

ಜೋಶೀಮಠದ ಶಾಖೆಯ ಆಡಳಿತಕ್ಕೆ ಒಳಪಟ್ಟಿರುತ್ತದೆ. (ಮಿಕ್ಕ ಆರು ತಿಂಗಳು ಹಿಮದ ಒಡಲಿನಲ್ಲಿ ತಣ್ಣಗೆ ಕುಳಿತಿರುತ್ತದೆ!) ATM ಗಳಲ್ಲಿ ಹಣ ಹಾಕಲು ಪ್ರತಿನಿತ್ಯ ಬ್ಯಾಂಕ್ ಸಿಬ್ಬಂದಿ ಜೋಶೀಮಠದಿಂದ ಹೆಲಿಕಾಪ್ಟರ್‌ನಲ್ಲಿ ಬರುವ ಸೌಲಭ್ಯವನ್ನು ಸರ್ಕಾರ ಒದಗಿಸಿತು. ಬಿ.ಎಸ್.ಎನ್.ಎಲ್ ದೂರವಾಣಿ ಈಗ ಅಡೆತಡೆಯಿಲ್ಲದೆ ಕೆಲಸ ಮಾಡುತ್ತಿದ್ದು, ಜನ ಪ್ರೀತಿಪಾತ್ರರೊಂದಿಗೆ ತಮ್ಮ ದುಗುಡ ಹಂಚಿಕೊಳ್ಳಲು ಅನುಕೂಲ ಮಾಡಿಕೊಟ್ಟಿತ್ತು. ಅನೇಕ ದಿನಗಳಿಂದ ಇಲ್ಲದಿದ್ದ ವಿದ್ಯುತ್ ಸರಬರಾಜು ಕೂಡ ಪುನರಾರಂಭಗೊಂಡಿತ್ತು.

# ಬದರಿನಾಥವೆಂಬ ಮಹಾಸೆರೆಮನೆಯಲ್ಲಿ

ವಿದ್ಯುತ್ ಸಂಪರ್ಕ ಮರಳಿ ಬಂದದ್ದರಿಂದ ಎಲ್ಲ ಎಲೆಕ್ಟ್ರಾನಿಕ್ ಉಪಕರಣಗಳೂ ಶಕ್ತಿ ಪಡೆದುಕೊಂಡವು. ನಮ್ಮ ಮೊಬೈಲ್‌ಗಳನ್ನು ಚಾರ್ಜ್ ಮಾಡಿಟ್ಟುಕೊಂಡೆವು. ಕರೆ ಮಾಡಲಿಕ್ಕಲ್ಲ, ಹಾಡು ಕೇಳುವುದಕ್ಕೋಸ್ಕರ ಮಾತ್ರ! ಮೊಬೈಲ್ ಸಂಪರ್ಕ ಕೊಡಲು ಬಿ.ಎಸ್.ಎನ್.ಎಲ್ ಕಂಪೆನಿಯಿಂದ ಮಾತ್ರವೇ ಸಾಧ್ಯವಾಗಿದ್ದು, ಬೇರೆ ಟವರ್‌ಗಳು ಸುದೀರ್ಘ ನಿದ್ದೆಗಿಳಿದಿದ್ದವು. ಜಯರಾಮನ ಮೊಬೈಲ್‌ನಲ್ಲಿದ್ದ ಅಣ್ಣಾವ್ರ ಅಸಂಖ್ಯಾತ ಹಾಡುಗಳೂ, ಶ್ರೀಧರ್‌ರ ಮೊಬೈಲ್‌ನಲ್ಲಿದ್ದ ಜಾಕಿ ಚಾನ್ ಚಲನಚಿತ್ರಗಳೂ ಆ ದಿನಗಳಲ್ಲಿ ನಮಗೆ ಮನರಂಜನೆ ನೀಡಿದ ಕೆಲವೇ ಕೆಲವು ವಸ್ತುಗಳಾಗಿದ್ದವು. ಹಾಗೇ ಹೋಟೆಲ್‌ನಲ್ಲಿದ್ದ ಟಿ.ವಿ.ಯೂ ಕೆಲಸ ಮಾಡುತ್ತಿದ್ದು, ವಾರ್ತೆಗಳನ್ನು ವೀಕ್ಷಿಸಲು ಎಲ್ಲ ಕೊಠಡಿಗಳ ಜನರೂ ಒಟ್ಟಿಗೆ ಸೇರಿ ಕುಳಿತರು. ಹರಟೆ ಕೊಚ್ಚುತ್ತಿದ್ದ ನಮ್ಮನ್ನು ದಿನೇಶ್ ಕರೆದನಾದರೂ, ನಾನೊಬ್ಬನಷ್ಟೇ ವಾರ್ತೆ ನೋಡಲು ಹೋದೆ.

ಜನ ನೆರೆದಿದ್ದ ಟಿ.ವಿ. ಕೊಠಡಿಗೆ ಕಾಲಿಟ್ಟೊಡನೆಯೇ ಸಿಡಿಲು ಬಡಿದಂತಾಯಿತು. ಟಿ.ವಿ.ಯಲ್ಲಿ ಕೇದಾರನಾಥದ ಸಮಾಚಾರವನ್ನು ತೋರಿಸುತ್ತಿದ್ದರು. ಹಿಂದಿನ ವಾರವಷ್ಟೇ ನಾನು ನೋಡಿದ್ದ ಕೇದಾರನಾಥಕ್ಕೂ ಇಂದು ಟಿ.ವಿ.ಯಲ್ಲಿ ನೋಡುತ್ತಿದ್ದ ಕೇದಾರನಾಥಕ್ಕೂ ಹೋಲಿಕೆಯೇ ಇರಲಿಲ್ಲ! ದೇವಸ್ಥಾನದ ಸುತ್ತಮುತ್ತಲೂ ಇದ್ದ ಹಲವಾರು ಕಟ್ಟಡಗಳು ನೆಲಸಮವಾಗಿದ್ದು, ದೇವಾಲಯವು ಆ ಅವಶೇಷಗಳ ಮಧ್ಯೆ ಕಳಾಹೀನವಾಗಿ ನಿಂತಿತ್ತು. ಅಸಂಖ್ಯಾತ ಜನ ಸಾವನ್ನಪ್ಪಿದ್ದರೆಂಬ ಸುದ್ದಿ ಬಿತ್ತರವಾಗುತ್ತಿತ್ತು. ಅದು ಖಂಡಿತ ಸಾಧ್ಯ – ಯಾತ್ರೆಯ ಈ ಸಮಯದಲ್ಲಿ ಸಾವಿರಾರು ಭಕ್ತರು ದಿನನಿತ್ಯವೂ ಭೇಟಿ ಕೊಡುವುದು ರೂಢಿ. ಗೌರಿಕುಂಡವೂ ನೆಲಸಮವಾಗಿತ್ತು. ಮೇಘಸ್ಫೋಟದ ಹೊಡೆತವನ್ನು ತಡೆದುಕೊಳ್ಳದ ಗೌರಿಕುಂಡ ಛಿದ್ರವಾಗಿತ್ತು. ದುರಂತದ ತೀವ್ರತೆ ಅದೆಷ್ಟಿತ್ತೆಂದರೆ ದೂರದ ಗುಪ್ತಕಾಶಿಯಲ್ಲೂ ಬಹಳಷ್ಟು ಪ್ರಾಣಹಾನಿ, ಆಸ್ತಿಪಾಸ್ತಿ ನಷ್ಟವಾದ ಬಗ್ಗೆ ವರದಿಗಳು ಬರುತ್ತಿದ್ದವು.

ಮಾತು ಹೊರಡದೆ ಮೂಕನಾಗಿದ್ದೆ. ಸುಮ್ಮನೆ ಟಿ.ವಿ.ಯನ್ನೇ ದೃಷ್ಟಿಸುತ್ತ ಕುಳಿತೆ. ಕೇದಾರನಾಥದ ಸ್ಥಿತಿ ತೋರಿಸಿ ನನ್ನ ನೆಮ್ಮದಿ ಕೆಡಿಸಿದ್ದ ಟಿ.ವಿ. ಈಗ ಗೋವಿಂದಘಾಟ್‌ನಲ್ಲಿಯ ದುರಂತವನ್ನು ಪ್ರಸಾರ ಮಾಡತೊಡಗಿತು. ಗೋವಿಂದಘಾಟ್‌ನಲ್ಲೂ ಪರಿಸ್ಥಿತಿ ಕೈಮೀರಿತ್ತು. ವಾಹನ ನಿಲುಗಡೆಯ ಸ್ಥಳವು ಅಲಕನಂದೆಯ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗಿತ್ತು ಸ್ಪಷ್ಟವಾಗಿ ಕಾಣುತ್ತಿತ್ತು. ಗುರುದ್ವಾರದ ಸುತ್ತಮುತ್ತಲಿದ್ದ ಕಟ್ಟಡಗಳೆಲ್ಲವೂ ನೀರುಪಾಲಾಗಿದ್ದವು. ನದಿಯಲ್ಲಿ ಅಲ್ಲಲ್ಲಿ ವಾಹನಗಳ ಅವಶೇಷಗಳು ಕಂಡುಬರುತ್ತಿದ್ದವು. ನೂರಾರು ಕಾರುಗಳನ್ನೂ, ದೊಡ್ಡ ವಾಹನಗಳನ್ನೂ ಪ್ರವಾಹ

ನುಂಗಿಹಾಕಿತ್ತು. ಕೊಚ್ಚಿಹೋಗಿದ್ದ ದ್ವಿಚಕ್ರ ವಾಹನಗಳ ಸಂಖ್ಯೆಯಂತೂ ಲೆಕ್ಕಕ್ಕೂ ಸಿಗುವಂತೆಯೂ ಇರಲಿಲ್ಲ. ಎಷ್ಟೋ ವಾಹನಗಳು ಪ್ರವಾಹಕ್ಕೆ ಸಿಲುಕಿದಾಗ ಅದರಲ್ಲಿ ಚಾಲಕರೂ ಇದ್ದರಂತೆ! ಗುರುದ್ವಾರದ ಎದುರು ಸೇತುವೆಯೊಂದಿದ್ದು, ಅದನ್ನು ದಾಟಿ ಮುಂದಕ್ಕೆ ಘಾಂಘರಿಯಾದೆಡೆಗೆ ಚಾರಣ ಪ್ರಾರಂಭಿಸಬೇಕು. ಆದರೀಗ ಅಲ್ಲಿ ಸೇತುವೆಯ ಸುಳಿವೂ ಇರಲಿಲ್ಲ. ಸೇತುವೆಯ ಅಂಚಿನಲ್ಲಿದ್ದ "Welcome to Valley of Flowers National Park" ಫಲಕ ಅನಾಥವಾಗಿ ನಿಂತಿತ್ತು.

ನಮಗೆ ಕನಿಷ್ಠ ಎರಡು ಬಾರಿಯಾದರೂ ಪುನರ್ಜನ್ಮ ಸಿಕ್ಕಿತ್ತು. ಪ್ರವಾಸದ ಯೋಜನೆಯನ್ನು ಮೊದಲು ಸಿದ್ಧಪಡಿಸಿದಾಗ, ೧೫ ಜೂನ್‌ರಂದು ನಾವು ಕೇದಾರನಾಥಕ್ಕೆ ಹೋಗಬೇಕೆಂದು ನಿರ್ಧರಿಸಿದ್ದೆವು. ಆದರೆ ಹರಿದ್ವಾರದ ನಮ್ಮ ಪ್ರವಾಸ ಸಂಯೋಜಕ ಮಾರ್ಪಾಡುಗಳನ್ನು ಮಾಡಿ, ನಾವು ಕೇದಾರನಾಥಕ್ಕೆ ೧೦ ಜೂನ್‌ರಂದೇ ಹೋಗುವಂತೆ ಮಾಡಿದ್ದ. ಪ್ರವಾಹಕ್ಕಿಂತ ಐದು ದಿನಗಳ ಮುಂಚೆಯಷ್ಟೇ ನಾವಲ್ಲಿಗೆ ಹೋಗಿಬಂದಿದ್ದೆವು. ದುರಂತದ ವರದಿಯನ್ನು ನೋಡುತ್ತಿದ್ದರೆ ಭಯವಾಗುತ್ತಿತ್ತು. ನಮ್ಮ ಹಿಂದಿನ ಯೋಜನೆಯನ್ನು ನಾವು ಪಾಲಿಸಿದ್ದರೆ, ನಮ್ಮ ಮನೆಯವರಿಗೆ, ಮಿತ್ರರಿಗೆ ನಮ್ಮ ಕಡೆಯ ದರ್ಶನವೂ ಲಭ್ಯವಾಗುತ್ತಿರಲಿಲ್ಲ!

ಗೋವಿಂದಘಾಟ್‌ನಿಂದಲೂ ನಾವು ಬದುಕಿ ಬಂದಿದ್ದೆವು. ಅಂದು ಹೆಲಿಕಾಪ್ಟರ್‌ನಲ್ಲಿ ಬರದೆ ಹೋಗಿದ್ದರೆ ನಡೆದು ಬರಲು ಐದಾರು ಗಂಟೆಗಳು ಬೇಕಾಗುತ್ತಿತ್ತು. ಅಷ್ಟರಲ್ಲಿ ಏನೇನಾಗುತ್ತಿತ್ತೋ! ಅಷ್ಟೇ ಅಲ್ಲದೆ ನಾವು ಕೆಳಗಿಳಿದು ಬಂದ ನಂತರವೂ ಸುಮಾರು ಎರಡು ಗಂಟೆಗಳನ್ನು ನಮ್ಮ ಕಾರನ್ನೂ ಚಾಲಕನನ್ನೂ ಹುಡುಕುತ್ತ ಅಲೆದಿದ್ದವು. ವಾಹನ ನಿಲುಗಡೆಯ ಪ್ರದೇಶ, ಅಲ್ಲಿಗೆ ತೆರಳುವ ರಸ್ತೆ, ಗುರುದ್ವಾರದ ಸುತ್ತಮುತ್ತಲೆಲ್ಲ ಅಲೆದಿದ್ದೆವು. ಈಗ ನಾವು ತಿರುಗಾಡಿದ್ದ ಜಾಗವೆಲ್ಲ ನದಿಯಲ್ಲಿ ಕೊಚ್ಚಿಹೋಗಿತ್ತು. ನದಿ ಉಕ್ಕಿ ಹರಿಯುತ್ತಿದ್ದು, ಅದನ್ನು ದಾಟಲು ಹುಲುಮಾನವನಿಗೆ ಸಾಧ್ಯವೇ ಇರಲಿಲ್ಲ.

ಈಗ ಅರ್ಥವಾಗಿತ್ತು, ಸೇನೆಯವರೂ, ಪೊಲೀಸರೂ ಮತ್ತೆಮತ್ತೆ ನಮ್ಮನ್ನೇಕೆ ಅದೃಷ್ಟಶಾಲಿಗಳೆಂದು ಹೇಳುತ್ತಿದ್ದರೆಂದು. ನಮ್ಮ ಅದೃಷ್ಟ ಅಮಿತವಾಗಿತ್ತು. ಟಿ.ವಿ. ನೋಡುತ್ತಿದ್ದ ಜನರೆಲ್ಲ ಪರಸ್ಪರ ಏನೇನೋ ಮಾತನಾಡಿಕೊಳ್ಳುತ್ತಿದ್ದರು. "ಕಳೆದ ವಾರ ಕೇದಾರನಾಥದಲ್ಲಿದ್ದೆ" ಎಂದು ಮೆಲ್ಲಗೆ ಉಸುರಿದೆ. ಜೋರಾಗಿ ಮಾತನಾಡಲೂ ಶಕ್ತಿಯಿರಲಿಲ್ಲ. ಅಚ್ಚರಿಯಿಂದ ನನ್ನನ್ನು ನೋಡಿದ ಜನರೆಲ್ಲರೂ, "ದೇವರ ಕೃಪೆ ನಿಮ್ಮ ಮೇಲಿತ್ತು, ಅದಕ್ಕೇ ನೀವು ಬದರಿನಾಥಕ್ಕೆ ಬಂದಿರಿ" ಎಂದು ಸಾಂತ್ವನ ಹೇಳಿದರು. ನನಗಿನ್ನು ಅಲ್ಲಿ ಕೂರಲಾಗಲಿಲ್ಲ. ಕೊಠಡಿಗೆ ಓಡಿಹೋದೆ.

ಜಯರಾಮ್ ಮತ್ತು ಶ್ರೀಧರ್ ಏನೋ ಮಾತನಾಡುತ್ತ ಅಲ್ಲೇ ಕುಳಿತಿದ್ದರು. "ಮೇಲೆ ಹೋಗಿ ಟಿ.ವಿ. ನೋಡಿ. ನಾವು ಬದುಕಿರುವುದೇ ಹೆಚ್ಚು. ಭಗವಂತನೇ ನಮ್ಮನ್ನು ರಕ್ಷಿಸಿದ್ದಾನೆ" ಎಂದು ಉಸುರಿದೆ. ಮೊದಲು ನಂಬದಿದ್ದರೂ, ನಂತರ ಕಣ್ಣಾರೆ ನೋಡಿದಾಗ ಅವರೂ ನನ್ನ ಮಾತಿಗೆ ಸಹಮತ ವ್ಯಕ್ತಪಡಿಸಿದರು. ನಾವು ಕೆಲವೇ ದಿನಗಳ ಹಿಂದೆ ನೋಡಿದ್ದ ಜಾಗಗಳೇ ಇವು ಎನ್ನುವಷ್ಟು ಬದಲಾಗಿತ್ತು ಅಲ್ಲಿನ ನಕ್ಷೆ. ಸೇನೆಯು ಏಕೆ ಪ್ರಥಮ ಆದ್ಯತೆಯನ್ನು ಈ ಸ್ಥಳಗಳಿಗೆ ನೀಡಿತ್ತು ಎಂಬ ಪ್ರಶ್ನೆಗೆ ಸ್ಪಷ್ಟ ಉತ್ತರ ಸಿಕ್ಕಿತ್ತು.

ಇಷ್ಟು ದಿನ ನನ್ನ ತಂದೆಯವರೊಂದಿಗೆ ದೂರವಾಣಿಯಲ್ಲಿ ಮಾತನಾಡುವಾಗ, "ನಾನು ಟಿ.ವಿ. ನೋಡುತ್ತಲೇ ಇಲ್ಲ. ಏನೇನೋ ತೋರಿಸಿ ಹೆದರಿಸುತ್ತಿದ್ದಾರೆ" ಎಂದು ಹೇಳುತ್ತಿದ್ದರು. ಈಗ ಪ್ರತ್ಯಕ್ಷವಾಗಿ ವರದಿಯನ್ನು ಕಂಡವನಿಗೆ ತಂದೆಯವರು ಮಾಡುತ್ತಿರುವುದು ಸರಿಯೆಂದೇ ತೋರಿತು. ಅವರಿಗೆ ಕರೆಮಾಡಿ, ಯಾವುದೇ ಕಾರಣಕ್ಕೂ ಟಿ.ವಿ. ನೋಡಿ ಗಾಬರಿಯಾಗಬಾರದೆಂದೂ, ನಾವು ಕ್ಷೇಮವಾಗಿರುವೆವೆಂದೂ ವಿವರಿಸಿದೆ. ಬದರಿನಾಥ ಸುರಕ್ಷಿತ ಪ್ರದೇಶವೆಂದು ಖಾತರಿಯಾಗಿದ್ದು, ಗಾಬರಿಯಾಗುವಂತಹ ಪ್ರಸಂಗವೇನಿಲ್ಲವೆಂದೂ, ಇನ್ನೂ ಒಂದಷ್ಟು ದಿನ ಇಲ್ಲೇ ಇರಬೇಕಾಗುವುದೆಂದೂ ಮನವರಿಕೆ ಮಾಡಿಕೊಟ್ಟೆ.

ಹೆಲಿಕಾಪ್ಟರ್‌ಗಾಗಿ ಕಾದು ನಿಲ್ಲುವ ಶಕ್ತಿ ನಮಗಿರಲಿಲ್ಲ. ಹೆಲಿಕಾಪ್ಟರ್‌ನಲ್ಲಿ ತರುಣರಾಗಿದ್ದ ನಮಗೆ ಕಡೆಯ ಆದ್ಯತೆಯೆಂದು ಅರಿವಾಗಿದ್ದರಿಂದ ವೃಥಾ ಅಲ್ಲಿ ಬಿಸಿಲಲ್ಲಿ ಬೆಂದು, ಚಳಿಯಲ್ಲಿ ನಡುಗಿ ತೊಂದರೆ ತೆಗೆದುಕೊಳ್ಳಬಾರದೆಂದು ನಿಶ್ಚಯಿಸಿಕೊಂಡಿದ್ದೆವು. ನಡೆದೇ ಹೋಗಬೇಕಿದ್ದ ನಾವು ಶಕ್ತಿಯನ್ನು ಕ್ರೋಢೀಕರಿಸಬೇಕಿತ್ತು. ಅನವಶ್ಯಕವಾಗಿ ಅಲ್ಲಿ ನಿಂತು ಶಕ್ತಿಯ ವ್ಯಯ ಮಾಡುವುದರಿಂದ ಪ್ರಯೋಜನವಿಲ್ಲವಾಗಿತ್ತು. ಹೀಗೆ ಹೇಳಲು "ಬಾಂಗಡ್"ಗೆ ಹೋದೆವು. ಅಲ್ಲಿ ನಮಗೊಂದು ಹೊಸ ಸುದ್ದಿ ಕಾದಿತ್ತು. ಮಾರನೆಯ ದಿನ ಸೇನೆಯವರೇ ಸಾಲಿನಲ್ಲಿ ನೆರೆದಿದ್ದವರಿಗೆ ಸಂಖ್ಯೆಗಳನ್ನು ನೀಡುವವರೆಂದೂ, ಆ ಸಂಖ್ಯೆಯ ಪ್ರಕಾರವಾಗಿಯೇ ಎಲ್ಲರನ್ನೂ ಹೊರಗೊಯ್ಯುವರೆಂದೂ, ಅದಕ್ಕಾಗಿಯಾದರೂ ನಿಲ್ಲಬೇಕೆಂದು ತಿಳಿಸಿದರು. ಸರಿಯೆಂದು ಒಪ್ಪಿ ಬಂದೆವು.

ಅಂದು ರಾತ್ರಿಯೆಲ್ಲ ಕೇದಾರನಾಥದ ದೃಶ್ಯ ಕಣ್ಣ ಮುಂದೆ ಬರುತ್ತಿತ್ತು. ಹೀಗೆ ಹುಳಗಳಂತೆ ಸತ್ತುಹೋದವರು ಎಲ್ಲರೂ ದೇವರನ್ನು ಕಾಣಲು ಬಂದಿದ್ದ ಯಾತ್ರಿಕರು, ಮೋಸಮಾಡದೆ ಕಷ್ಟಪಟ್ಟು ದುಡಿಯುವ ಸ್ಥಳೀಯರು. ಪ್ರಪಂಚದಲ್ಲಿ ಅದೆಷ್ಟೋ ಸುಳ್ಳರೂ, ಖದೀಮರೂ, ಮೋಸಗಾರರೂ ರಾಜಾರೋಷವಾಗಿ ತಿರುಗಾಡಿಕೊಂಡಿದ್ದರೂ ಅವರಿಗೇನೂ ಆಗುವುದಿಲ್ಲ. ತಮ್ಮ ಪಾಡಿಗೆ ತಾವು

ನಿಯತ್ತಾಗಿ ಕಷ್ಟಪಟ್ಟು ದುಡಿಯುವ, ನಂಬಿಕೆಯಿಟ್ಟು ಬರುವ ಜನರನ್ನು ಒಂದಿನಿತೂ ಕರುಣೆಯಿಲ್ಲದೆ ಸಾಯಲು ಬಿಟ್ಟ ದೇವರ ಮೇಲಿನ ನಂಬಿಕೆ ಬತ್ತತೊಡಗಿತು. ಪ್ರಪಂಚದಲ್ಲಿ ನ್ಯಾಯಕ್ಕೆ, ನೀತಿಗೆ ದೇವರೇ ಬೆಲೆಕೊಡದಿದ್ದರೆ ಇನ್ನಾರು ಬೆಲೆಕೊಡುವರೆಂದು ಅನಿಸಿತು.

ಮರುದಿನ "ಬಾಂಗಡ್"ನ ಯಾತ್ರಿಗಳೊಂದಿಗೆ ಮತ್ತೊಮ್ಮೆ ಸಾಲಿನಲ್ಲಿ ನಿಲ್ಲುವ ಆಟ ಪ್ರಾರಂಭವಾಯಿತು. ಇಂದು ಹಿಂದಿನ ದಿನಕ್ಕಿಂತಲೂ ಹೆಚ್ಚು ಸುವ್ಯವಸ್ಥೆಯಿತ್ತು. ಮರದ ಬೊಂಬುಗಳನ್ನು ಕಟ್ಟಿ, ಯಾರೂ ಸಾಲಿನಲ್ಲಿ ಮಧ್ಯ ನುಗ್ಗಲು ಸಾಧ್ಯವೇ ಇಲ್ಲದಷ್ಟು ಕಠಿಣ ವ್ಯವಸ್ಥೆ ಮಾಡಿದ್ದರು. ಗಂಟೆಗಟ್ಟಲೆ ಕಾದ ನಂತರ ಬೇಸರವಾಗಿ ಇನ್ನೇನು ಹೊರಡೋಣವೆನ್ನುವಷ್ಟರಲ್ಲಿ ಸ್ವತಃ ಲೋಕೇಶ್ ಸಾಬ್‌ರೇ ಗುಂಪುಗಳನ್ನು ಗುರುತಿಸಿ ಸಂಖ್ಯೆಗಳನ್ನು ಕೊಡುತ್ತಾರೆಂಬ ಸುದ್ದಿ ಬಂತು.

ಇಲ್ಲೊಂದು ತೊಂದರೆಯಿತ್ತು. ಹತ್ತರಿಂದ ಐವತ್ತು ವರ್ಷದವರಿಗೆ ಹೆಲಿಕಾಪ್ಟರ್‌ನಲ್ಲಿ ಪ್ರವೇಶ ಕೊಡುವುದಿಲ್ಲ, ಅವರು ಸಾಲಿನಲ್ಲಿ ನಿಲ್ಲಬಾರದೆಂದೂ ಆದೇಶ ಹೊರಡಿಸಿದ್ದರು. ಪಾದಚಾರಿ ರಸ್ತೆ ನಿರ್ಮಾಣವಾಗಲು ಇನ್ನೊಂದೆರಡು ದಿನಗಳಷ್ಟೇ ಬೇಕಾಗಿದ್ದು, ಅಲ್ಲಿಯವರೆಗೂ ಕಾಯಬೇಕೆಂದು ಮತ್ತೆಮತ್ತೆ ಸೇನೆಯ ಮತ್ತು ITBPಯ ಎಲ್ಲ ಯೋಧರೂ ಹೇಳುತ್ತಿದ್ದರು. ನಾವು ಮೂವರೂ ಯಾರಾದರೂ ವಯಸ್ಸಾದವರ ಜೊತೆಯಿದ್ದರಷ್ಟೇ ನಮಗೂ ಅವಕಾಶ ದೊರೆಯುವುದು ಖಚಿತವಾಗಿತ್ತು. ಇದು ಗೊತ್ತಾದಾಗ ಗುಂಪಿನ ವ್ಯವಸ್ಥಾಪಕರಾದ ಜೋಶಿಯವರಿಗೆ ನಮ್ಮ ಇಕ್ಕಟ್ಟಿನ ಪರಿಸ್ಥಿತಿಯನ್ನು ತಿಳಿಸಿದೆವು. "ಇಷ್ಟೊಂದು ಜನರಲ್ಲಿ ಯಾರನ್ನಾದರೂ ನಿಮ್ಮ ತಂದೆ-ತಾಯಿಯೆಂದು ಹೇಳೋಣ, ಬಿಡ್ರಿ" ಎಂದು ಒಂದೇ ಕ್ಷಣಕ್ಕೆ ಪರಿಹಾರ ಸೂಚಿಸಿಬಿಟ್ಟರು! ಅರೇ, ಇದು ಹೊಳೆದೇ ಇರಲಿಲ್ಲವಲ್ಲ! ಯಕ್ಷಪ್ರಶ್ನೆಗೆ ಎಂಥ ಸುಲಭ ಉತ್ತರ!

ನಮ್ಮನಮ್ಮ ವಯಸ್ಸಿಗೆ ತಕ್ಕಂತೆ ತಂದೆ-ತಾಯಿಯರನ್ನು ಹೊಂದಿಸಿಕೊಳ್ಳುವ ಕೆಲಸ ಪ್ರಾರಂಭಿಸಿದೆವು. ಸ್ವಲ್ಪ ನಮ್ಮ ವಯಸ್ಸುಗಳನ್ನು ಹಿಂದೆ-ಮುಂದೆ ಮಾಡಿಕೊಂಡ ಕೂಡಲೇ ಆ ಕೆಲಸ ಸುಲಭವಾಗಿಬಿಟ್ಟಿತು. ಸುಳ್ಳು ಹೇಳುವಾಗ ಬಹಳ ಹುಷಾರಾಗಿರಬೇಕಂತೆ. ಒಂದೇ ಒಂದು ತಪ್ಪು ಉತ್ತರ ಇಡೀ ಸುಳ್ಳಿನ ಅರಮನೆಯನ್ನೇ ಉರುಳಿಸಿಬಿಡುತ್ತದೆ. ಆದ್ದರಿಂದ ನಮ್ಮ ತಂದೆ-ತಾಯಿಯರಿಗೆ ನಮ್ಮ ಬಗ್ಗೆ ಹೇಳುತ್ತಾ, ಅವರ ವಿಚಾರವಾಗಿ ತಿಳಿದುಕೊಳ್ಳುತ್ತಾ, ನಮ್ಮ ಸುಳ್ಳಿನ ಅರಮನೆಯ ಅಡಿಪಾಯವನ್ನು ಭದ್ರಮಾಡಿಕೊಳ್ಳುವ ಕಾರ್ಯದಲ್ಲಿ ನಿರತರಾದೆವು.

ಎಷ್ಟೋ ಸಮಯದ ಬಳಿಕ ಲೋಕೇಶ್ ಸಾಬ್ ಸಾಲಿನುದ್ದಕ್ಕೂ ಗುಂಪುಗಳನ್ನು ಪರೀಕ್ಷಿಸುತ್ತ, ಸಂಖ್ಯೆಗಳನ್ನು ನೀಡುತ್ತ ಬರುತ್ತಿರುವುದು ತಿಳಿದುಬಂತು. ಅವರು ನಮ್ಮ ಬಳಿ ಬರಲು ಸಮಯ ಬೇಕಾಗಿತ್ತಾದ್ದರಿಂದ ದೊಡ್ಡ ಗುಂಪನ್ನು ಚಿಕ್ಕ ಭಾಗಗಳಾಗಿ ವಿಂಗಡಿಸಿ, ಖಾಲಿ ಹಾಳೆಗಳಲ್ಲಿ ನಮ್ಮೆಲ್ಲರ ಹೆಸರುಗಳನ್ನು ಬರೆದುಕೊಂಡು ತಯಾರಾಗಿ ನಿಂತೆವು. ಆ ಪಟ್ಟಿಯನ್ನು ತಯಾರಿಸಲು ನೆರವಾದ ವಿಜಯೇಂದ್ರ ಮತ್ತು ಜೋಶಿಯವರು ಅದು ತಯಾರಾದೊಡನೆ ತೆಗೆದುಕೊಂಡು ಹೋಗಿ ಏನೇನೋ ಮಾಡಿ ಸಂಖ್ಯೆ ಹಾಕಿಸಿಕೊಂಡು ಬಂದರು. ನಮ್ಮ ಸರದಿ ಬಂದಾಗ "ಬಾಂಗಡ್"ಗೇ ಬಂದು ಸೂಚಿಸುವುದಾಗಿ ಸೇನೆಯವರೇ ಹೇಳಿದ್ದರಿಂದ ಇನ್ನು ಮತ್ತೆಂದೂ ಹೆಲಿಪ್ಯಾಡ್‌ನ ಬಳಿ ನಿಂತು ಕಾಯುವ ಕೆಲಸ ಮಾಡಬೇಕಿರಲಿಲ್ಲ.

ಈ ಮಧ್ಯೆ ನಮ್ಮ ಹೋಟೆಲ್‌ನಲ್ಲಿದ್ದ ಹನ್ನೊಂದು ಸಿಖ್ ಮಿತ್ರರು ಮುಂಜಾನೆಯೇ ನಡೆಯುತ್ತ ಹೊರಟಿದ್ದರೆಂದು ತಿಳಿದು ಬಂತು. ಅವರು ಹೋದರೆಂದು ದಿನೇಶ್ ನಮಗೆ ಹೇಳಿದ ತಕ್ಷಣ ನಮ್ಮಲ್ಲಿ ತಳಮಳ ಶುರುವಾಯಿತು. ಸಾಕಷ್ಟು ವಾದ–ವಿವಾದಗಳ ನಂತರ ಸಂಜೆಯ ವೇಳೆಗೆ ಅವರಿಗೆ ಕರೆ ಮಾಡಿ ದಾರಿಯ ವಿಚಾರ ಸಂಗ್ರಹಿಸಬೇಕೆಂದು ನಿರ್ಧರಿಸಿಕೊಂಡೆವು. ದಿನೇಶ್ ಬಳಿ ಅವರ ಮೊಬೈಲ್ ಸಂಖ್ಯೆ ಇದ್ದಿದ್ದರಿಂದ ಅದು ಸಾಧ್ಯವಿತ್ತು.

ಆದರೆ ಮಧ್ಯಾಹ್ನದ ವೇಳೆಗೇ ಮೂವರು ವಾಪಸಾದರು. ಮೂವರ ಮುಖಗಳೂ ಬಾಡಿಹೋಗಿದ್ದವು. ಏನಾಯಿತು, ಏಕೆ ವಾಪಸಾದಿರಿ ಎಂದು ಕೇಳಿದ್ದಕ್ಕೆ, ನಮ್ಮಲ್ಲೊಬ್ಬ ಅಸ್ವಸ್ಥನಾದ. ಅದಕ್ಕೇ ಬಂದೆವು ಎಂದರು. ಮಿಕ್ಕವರೆಲ್ಲಿ ಎಂದಿದ್ದಕ್ಕೆ, ಕೆಲವು ಗಂಟೆಗಳಲ್ಲಿ ಅವರೂ ಮರಳಿ ಬರುವರೆಂದು ಹೇಳಿದರು. ಅದು ಹೇಗೆ ಅಷ್ಟು ಖಚಿತವಾಗಿ ಹೇಳುತ್ತಿದ್ದಾರೆಂದು ನಮ್ಮ ಸಂದೇಹ. "ರಸ್ತೆಯೆನ್ನುವುದು ಇಲ್ಲವೇ ಇಲ್ಲ. ಐದಾರು ಕಿ.ಮೀ. ಹೆದ್ದಾರಿ ಕೊಚ್ಚಿಹೋಗಿರುವೆಡೆ ಕಾಡಿನಲ್ಲಿ ನಡೆದು ಹೋಗಬೇಕು. ಗುಡ್ಡಗಳನ್ನು ಹತ್ತಿ ಇಳಿಯಬೇಕು. ಕಾಲುದಾರಿ ಎಷ್ಟು ಚಿಕ್ಕದಾಗಿದೆಯೆಂದರೆ ಎರಡು ಪಾದಗಳನ್ನು ಒಟ್ಟಿಗೆ ನೆಲದ ಮೇಲಿಡಲೂ ಜಾಗವಿಲ್ಲ. ಜೊತೆಗೆ ಕೆಳಗೆ ಆಳದಲ್ಲಿ ನದಿಯೂ ವೇಗವಾಗಿ ಹರಿಯುತ್ತಿದ್ದು, ಭಯವಾಗುತ್ತದೆ. ಇಷ್ಟೆಲ್ಲ ಮುಗಿದ ನಂತರವೂ ನದಿಯನ್ನು ದಾಟಲು ಯಾವುದೇ ದಾರಿಯಿಲ್ಲ. ತಾತ್ಕಾಲಿಕ ಸೇತುವೆಯ ಕಾಮಗಾರಿ ಇನ್ನೂ ಮುಗಿದಿಲ್ಲ. ಹೋಗಲೇಬೇಡಿ, ಹೋದರೆ ಮೂರು ಕಾಸಿನ ಲಾಭವಿಲ್ಲ, ಪುನಃ ಹಿಂದಿರುಗಿ ಬಂದೇ ಬರುತ್ತೀರಿ" ಎಂದು ಖಡಾಖಂಡಿತವಾಗಿ ಹೇಳಿದರು.

ಅವರ ಮಾತು ತೀವ್ರ ನಿರಾಸೆಯನ್ನು ತರಿಸಿತು. ಇದೇನಿದು, ಹೊರಗೆ ಹೋಗುವ ಯಾವ ದಾರಿಯೂ ಇಲ್ಲವಲ್ಲ ಎಂಬ ಕೊರಗು ಬೇಸರವನ್ನು ಮೂಡಿಸಿತು. ದಿನೇಶ್ ಮತ್ತು ಪವನ್ ತಮ್ಮ ಮಾತುಗಳಿಂದ

ನಮ್ಮನ್ನು ಸಮಾಧಾನಪಡಿಸುವಲ್ಲಿ ಕೊಂಚ ಸಫಲರಾದರೂ, ಮನದಾಳದಲ್ಲಿ ಖೇದ ಹಾಗೇ ಉಳಿದಿತ್ತು. ಶ್ರೀಧರ್‌ರ ಪತ್ನಿ, ನನ್ನ ತಾಯಿ, ಜಯರಾಮ್‌ನ ಅಣ್ಣಂದಿರು – ನಮಗಾಗಿ ಏನೆಲ್ಲ ದಾರಿಗಳನ್ನು ಹುಡುಕುತ್ತಲೇ ಇದ್ದರೂ ಯಾವುದೂ ಫಲ ನೀಡಿರಲಿಲ್ಲ. ದಿನೇಶ್‌ನ ಮೊಬೈಲ್‌ಗೆ ಎಲ್ಲರೂ ಬೆಂಗಳೂರಿನಲ್ಲಿದ್ದ ಇವರೆಲ್ಲರೂ ಹಾಕಿಸುತ್ತಿದ ಹಣ ಖರ್ಚಾಗಿದ್ದೊಂದೇ ನಿರಂತರವಾಗಿ ನೆರವೇರುತ್ತಿದ್ದ ಕೆಲಸ. ಈ ಮಧ್ಯೆ ದಿನೇಶ್ ಕೂಡ ದೇಹರಾಡೂನ್‌ನಲ್ಲಿದ್ದ ಅವನ ಅಣ್ಣನ ಜೊತೆಗೆ ಮಾತನಾಡಿ ಖಾಸಗಿ ಹೆಲಿಕಾಪ್ಟರ್ ವ್ಯವಸ್ಥೆಯೇನಾದರೂ ಮಾಡಲು ಸಾಧ್ಯವೇ ಎಂದು ಕೇಳಿದ. ಆದರೆ ರಾಜ್ಯಾದ್ಯಂತ ಇರುವ ಎಲ್ಲ ಹೆಲಿಕಾಪ್ಟರ್‌ಗಳನ್ನೂ ಹೆಲಿಪ್ಯಾಡ್‌ಗಳಾನ್ನೂ ರಾಜ್ಯ ಸರ್ಕಾರ ತನ್ನ ನಿಯಂತ್ರಣಕ್ಕೆ ತೆಗೆದುಕೊಂಡಿದ್ದರಿಂದ ತಲಾ ಎಂಭತ್ತು ಸಾವಿರ ರೂಪಾಯಿ ಕೊಡುತ್ತೇನೆಂದರೂ ಹೆಲಿಕಾಪ್ಟರ್ ದೊರೆಯುವ ಸಂಭವವಿರಲಿಲ್ಲ.

ಊರಿನಿಂದ ಕರೆ ಮಾಡಿ ಸತತವಾಗಿ ಧೈರ್ಯ ತುಂಬುವವರೇ ಎಲ್ಲ. ದಿನೇಶ್‌ನ ಈ ಮೊಬೈಲ್ ಸಂಖ್ಯೆ ಯಾರುಯಾರಿಗೋ ಗೊತ್ತಾಗಿ ಅವರೆಲ್ಲ ಕರೆಮಾಡಿ ಸಾಂತ್ವನ ಹೇಳುತ್ತಿದ್ದರು. ಆದರೆ ನಮಗಿಂತ ಹೆಚ್ಚಾಗಿ ಗಾಬರಿಗೊಂಡಿದ್ದವರು ಅವರುಗಳೇ – ಟಿ.ವಿ.ಯಲ್ಲಿ ವಾರ್ತೆಗಳನ್ನು ಕಂಡು ಹೆದರಿ ನಮಗೇನಾಗಿದೆಯೋ ಎಂಬ ಭೀತಿಯಿಂದ ಕರೆ ಮಾಡುತ್ತಿದ್ದ ಎಲ್ಲರಿಗೂ ನಾವು ಹೇಳುತ್ತಿದ್ದುದು ಒಂದೇ. "ನಾವಿಲ್ಲಿ ನೀವೆಲ್ಲರೂ ಅಂದುಕೊಂಡಿರುವದಕ್ಕಿಂತ ಕ್ಷೇಮವಾಗಿಯೂ, ಸಂತೋಷವಾಗಿಯೂ ಇದ್ದೇವೆ. ಹೊರಬೀಳುವುದಕ್ಕೆ ಸ್ವಲ್ಪ ಸಮಯ ಬೇಕಾಗಿದೆಯಷ್ಟೇ ಹೊರತು ಗಾಬರಿಯಾಗುವಂತಹ ಪರಿಸ್ಥಿತಿಯೇನೂ ಇಲ್ಲ. ಬದರಿನಾಥದಿಂದ ಹೊರಹೋಗಲು ರಸ್ತೆಗಳಿಲ್ಲವಾಗಿದ್ದರೂ ಊರು ಸುರಕ್ಷಿತವಾಗಿದ್ದು, ಯಾವುದೇ ರೀತಿಯ ಸಾವು–ನೋವು ಸಂಭವಿಸಿಲ್ಲ. ಬದರಿನಾಥ ಕ್ಷೇತ್ರ ಒಂದು ಸುವಿಶಾಲ ಸೆರೆಮನೆಯಾಗಿದೆಯಷ್ಟೇ. ಊರಿನ ಉದ್ದಗಲಕ್ಕೂ ಓಡಾಡಲು ಸಾಧ್ಯ, ಆದರೆ ಊರಿನಿಂದ ಹೊರಬೇಳಲು ಇನ್ನೂ ಸಾಧ್ಯವಿಲ್ಲ. ತಲೆಕೆಡಿಸಿಕೊಳ್ಳಬೇಡಿ, ಸೇನೆಯವರು ಚಾರಣ ಮಾರ್ಗವು ತೆರೆದಿದೆ ಎಂದು ಘೋಷಿಸುವವರೆಗೂ ನಾವಿಲ್ಲಿಂದ ಹೊರಡುವುದಿಲ್ಲ."

ನಾವು ಹೇಳುತ್ತಿದ್ದುದು ಮುಕ್ಕಾಲು ಪಾಲು ಸತ್ಯವಾಗಿತ್ತು. ಪ್ರತಿದಿನ ನಡೆಯುತ್ತ ಹೊರಡೋಣವೆಂದೂ, ಬೇಡವೆಂದೂ ನಮ್ಮಲ್ಲಿ ಭಿನ್ನಾಭಿಪ್ರಾಯ ಬರುತ್ತಲೇ ಇದ್ದವು. ಒಮ್ಮತದ ನಿರ್ಣಯ ತೆಗೆದುಕೊಳ್ಳಲು ನಮ್ಮಿಂದ ಆಗುತ್ತಲೇ ಇರಲಿಲ್ಲ. ಆದರೆ ಮೂವರೂ ಒಪ್ಪದೆ ಇಲ್ಲಿಂದ ಕಾಲ್ತೆಗೆಯುವುದಿಲ್ಲ ಎಂಬ ಅಲಿಖಿತ ಒಪ್ಪಂದಕ್ಕೆ ಮನದಲ್ಲೇ ಸಹಿ ಹಾಕಿದ್ದೆವು. ಏನಾದರೂ ಆಗಲಿ, ಒಟ್ಟಾಗಿ ಎದುರಿಸೋಣ ಎಂದು ಒಬ್ಬರಿಗೊಬ್ಬರು ಅಂಟಿಕೊಂಡು ಸಮಯ ಕಳೆಯುತ್ತಿದ್ದೆವು.

ಅನಿಶ್ಚಿತತೆ ಈಗಾಗಲೇ ಒಗ್ಗಿ ಹೋಗಿದ್ದರಿಂದ ಕಾಲ ಕಳೆಯಲು ಈಗೀಗ ಅಷ್ಟು ಕಷ್ಟವಾಗುತ್ತಿರಲಿಲ್ಲ. ಕೆಲವೊಮ್ಮೆ ಹೆದ್ದಾರಿಯಲ್ಲಿ ಭೂಕುಸಿತವಾಗಿ ಜಲಪಾತವಿದ್ದ ರಸ್ತೆಯ ಕಾಮಗಾರಿಯನ್ನು ವೀಕ್ಷಿಸಲು, ಇಲ್ಲವೇ ನದಿಯ ಸಮೀಪ ತಿರುಗಾಡಲು ಹೋಗುತ್ತಿದ್ದೆವು. ನಿಯಮಿತವಾಗಿ ತಪ್ತಕುಂಡಕ್ಕೆ ಹೋಗಿ ಮಿಂದು ದೇವಸ್ಥಾನಕ್ಕೂ ಹೋಗಿಬರುತ್ತಿದ್ದೆವು. ದೇವಸ್ಥಾನದಲ್ಲಿ ನಮ್ಮನ್ನು ಕೇಳುವವರೇ ಇರುತ್ತಿರಲಿಲ್ಲ. ಅದೆಷ್ಟು ಹೊತ್ತು ದೇವರನ್ನು ನೋಡುತ್ತ ನಿಂತಿದ್ದರೂ ಹೊರಕಳುಹಿಸುವವರು ಯಾರೂ ಇರುತ್ತಿರಲಿಲ್ಲ. ದೇವಸ್ಥಾನದ ಆವರಣದಲ್ಲಿ ಭಜನೆ ಮಾಡುವವರೂ, ಸಹಸ್ರನಾಮ ಪಠಿಸುವವರೂ ಇದ್ದೇ ಇರುತ್ತಿದ್ದರು. ಅರ್ಚಕರೂ, ದೇವಾಲಯದ ಇತರ ಸಿಬ್ಬಂದಿಯೂ ಆದಾಯ ಮೂಡದ ಆ ಕಾಲದಲ್ಲಿ ಮೌನವಾಗಿ ಕುಳಿತಿರುತ್ತಿದ್ದರು. ಮಹಾವಿಷ್ಣು ಅಥವಾ "ಬದರಿ ವಿಶಾಲ್ ಮಹಾರಾಜ್"ನ ದರ್ಶನ ಇಡೀ ಜಗತ್ತಿನಲ್ಲೇ ನಮಗಾದಷ್ಟು ಅಚ್ಚುಕಟ್ಟಾಗಿ ಇದುವರೆಗೂ ಬೇರಾರಿಗೂ ಆಗಿಲ್ಲವೆಂದೂ, ಮುಂದೆಯೂ ಆಗುವುದಿಲ್ಲವೆಂದೂ ನಿಸ್ಸಂಶಯವಾಗಿ ಹೇಳಬಲ್ಲೆ.

ಊಟದ ವಿಷಯದಲ್ಲಿ ಮಾತ್ರ ಕಷ್ಟವೇ ಆಗುತ್ತಿತ್ತು. ಕಲ್ಲಿನಂತಹ ಇಡ್ಲಿ, ವಾರದಷ್ಟು ಹಳೆಯ ಚಟ್ನಿ ತಿಂದು ತಿಂದು ಬೇಸರ ಬಂದಿತ್ತು. ಪರೋಟಾ ವಾಸನೆ ಮೂಗಿಗೆ ಬಡಿದರೂ ಸಹ ಹುಚ್ಚು ಹಿಡಿಯುತ್ತಿತ್ತು. ಒಮ್ಮೆ "ಭಂಡಾರಾ"ದಲ್ಲಿ ಹೋಗಿ ತಿಂದೆವು. ಸಿಖ್ ಜನರ "ಭಂಡಾರಾ" ಅದು. ರುಚಿಶುಚಿಯಾದ ಆಹಾರವನ್ನೊದಗಿಸಲು ಪ್ರಾಮಾಣಿಕ ಪ್ರಯತ್ನ ಮಾಡುತ್ತಿದ್ದರೂ ಕೂಡ ಅವರ ಅನ್ನ ನಮ್ಮ ಗಂಟಲಿನಲ್ಲಿ ಇಳಿಯುತ್ತಿರಲಿಲ್ಲ. ಅವರು ಬಳಸುವ ಅಕ್ಕಿ ನಾವು ಉಪಯೋಗಿಸುವ ಅಕ್ಕಿಗಿಂತ ದಪ್ಪವಾಗಿದ್ದು, ರುಚಿಯೂ ಇರುತ್ತಿರಲಿಲ್ಲ. ಪವನ್‌ನ ಚಹಾ-ಬಿಸ್ಕತ್‌ಗಳೇ ಅದೆಷ್ಟೋ ದಿನ ನಮ್ಮ ಊಟವಾಗಿರುತ್ತಿತ್ತು. ಒಮ್ಮೆ ಸೈನ್ಯದವರು ಕೊಟ್ಟ ಎರಡು ಬನ್‌ಗಳಲ್ಲಿ ಒಂದನ್ನು ತಾನಿಟ್ಟುಕೊಂಡ ಜಯರಾಮ್ ಮತ್ತೊಂದನ್ನು ನನ್ನ ಕೈಲಿಟ್ಟ. ಹಸಿವಿನಿಂದ ಸಾಯುತ್ತಿದ್ದ ಅವನು ಅದನ್ನು ನೋಡುನೋಡುತ್ತಿದ್ದಂತೆಯೇ ಗಬಗಬನೆ ತಿಂದು ಮುಗಿಸಿಬಿಟ್ಟ. ನನಗೆ ಅವನಷ್ಟು ಹಸಿವಿರಲಿಲ್ಲ. ಆದರೂ ಇರಲಿ ಎಂದು ಬಾಯಿಗಿಟ್ಟರೆ ಆ ಬನ್ ಕೂಡ ಕಲ್ಲಿನಂತೆ ಗಟ್ಟಿಯಾಗಿತ್ತು. ರುಚಿಯ ವಿಷಯ ಏನೆಂದು ಹೇಳಲಿ! ಬನ್ ಹಳೆಯದಾದರೂ ಪುಣ್ಯಕ್ಕೆ ಹಳಸಿರಲಿಲ್ಲ. ಹಾಗೂ ಹೀಗೂ ಮಾಡಿ ಕಾಲುಭಾಗವನ್ನಷ್ಟೇ ತಿಂದು ಮುಗಿಸಿದೆ. ಮಿಕ್ಕಿದ್ದನ್ನು ಶ್ರೀಧರ್‌ಗೆ ಇಟ್ಟುಕೊಳ್ಳಲು ಸೂಚಿಸಿದ ಜಯರಾಮನತ್ತ ಕೆಂಗಣ್ಣು ಬೀರಿದೆ. ಶ್ರೀಧರ್‌ಗೆ ಈ ಬನ್ ಕೊಟ್ಟರೆ ನಮ್ಮಿಬ್ಬರನ್ನೂ ಅಟ್ಟಾಡಿಸಿಕೊಂಡು ಹೊಡೆಯುತ್ತಾರೆಂದು ಹಾಸ್ಯ ಮಾಡುತ್ತ ನಡೆಯುತ್ತಿದ್ದ ನಮ್ಮನ್ನು, ಉಚಿತವಾಗಿ ಚಹಾ ಕೊಡುತ್ತಿದ್ದವನೊಬ್ಬ ಕರೆದ. ಚಹಾ ಗುಣಮಟ್ಟ ದೂರದಿಂದಲೇ ತಿಳಿದುಬರುತ್ತಿತ್ತು. ಆದರೆ ಕೈಲಿದ್ದ ಬನ್‌ನ್ನು ತಿಂದು ಮುಗಿಸಲು ಆಲೋಚನೆಯೊಂದು ಮೂಡಿತು. ಬಣ್ಣದ ನೀರಿನಂತಿದ್ದ ಚಹಾದಲ್ಲಿ ಗಟ್ಟಿ ಬನ್‌ನ್ನು ನೆನೆಸಿ ಮೆತ್ತಗೆ ಮಾಡಿಕೊಂಡು ಒಂದೇ ನಿಮಿಷದಲ್ಲಿ ತಿಂದು ಮುಗಿಸಿದೆ! ನನ್ನ ಜೀವನದಲ್ಲಿ

ಹಿಂದೆಂದೂ ಇಷ್ಟು ಕೆಟ್ಟ ಬನ್‌ನಾಗಲೀ ಚಹಾವನ್ನಾಗಲೀ ಕಂಡಿದ್ದಿಲ್ಲ. ಆದರೆ ಬದರಿನಾಥದ ಅನುಭವಗಳು ಆಗಲೇ ನನ್ನಲ್ಲೊಂದಷ್ಟು ಬದಲಾವಣೆ ತಂದಿತ್ತು. ಬೆಲೆಬಾಳುವ ಆಹಾರವನ್ನೆಸೆಯದೆ ಎಷ್ಟೇ ಕೆಟ್ಟದಾಗಿದ್ದರೂ ಅದನ್ನು ತಿಂದು ಮುಗಿಸಬೇಕೆನ್ನುವ ಪಾಠವನ್ನು ಬದರಿನಾಥ ಕ್ಷೇತ್ರ ಕಲಿಸಿತ್ತು.

ನಾವು ಖಾಲಿಹೊಟ್ಟೆಯಲ್ಲೇ ಇರುತ್ತಿದ್ದುದನ್ನು ಕಂಡ ದಿನೇಶ್ ಕಾರಣ ಕೇಳಿ ತಿಳಿದುಕೊಂಡ. "ನಿಮ್ಮ ಊರಿನ ಅಕ್ಕಿ ಇಲ್ಲಿ ಸಿಗುತ್ತದೆಯೇ ನೋಡಿ, ನನ್ನ ಬಳಿ ಸ್ವಂತ ಉಪಯೋಗಕ್ಕೆಂದು ಸಿಲಿಂಡರ್ ಒಂದಿದೆ. ಅದರ ಸಹಾಯದಿಂದ ಅನ್ನ ಬೇಯಿಸಿಕೊಳ್ಳೋಣ. ನಾನೂ ಅದೇ ಅನ್ನವನ್ನು ತಿನ್ನುತ್ತೇನೆ" ಎಂದು ನಮ್ಮ ಹಸಿವನ್ನು ನಿವಾರಿಸುವ ಅನ್ನಪೂರ್ಣೇಶ್ವರಿಯ ಸ್ವರೂಪವನ್ನೂ ಪಡೆದ ದಿನೇಶ್ ಅಂದಿನಿಂದ ನಮಗೂ ಅಡುಗೆ ಮಾಡಿ ಬಡಿಸತೊಡಗಿದ. ಸಾರು ಅಥವಾ ಹುಳಿಯನ್ನು ಹೋಟೆಲ್‌ನಿಂದ ತರಿಸಿಕೊಳ್ಳುತ್ತಿದ್ದೆವು. ಪಕ್ಕದ ಅಂಗಡಿಗಳಲ್ಲಿ ಡಬ್ಬಿಯ ಮೊಸರು ದೊರಕುತ್ತಿತ್ತು. ಅದನ್ನು ತಂದು ಅನ್ನಕ್ಕೆ ಕಲಸಿಕೊಳ್ಳುತ್ತಿದೆವು. ಒಟ್ಟಿನಲ್ಲಿ ಮನೆಯಲ್ಲಿ ಮಾಡಿದಂತಹ ಅಡುಗೆಯನ್ನೇ ದೂರದ ಉತ್ತರಾಖಂಡದಲ್ಲೂ ಸವಿಯುವ ಅಪೂರ್ವ ಅವಕಾಶವನ್ನು ದಿನೇಶ್ ಒದಗಿಸಿಕೊಟ್ಟಿದ್ದ.

ಬರಿಯ ಅನ್ನ-ಹುಳಿ-ಮೊಸರು ತಿಂದು ಬೇಸರವಾದ ನಂತರ ವೈವಿಧ್ಯತೆ ಇರಲೆಂದು, ಜಯರಾಮ್ ಮತ್ತು ಶ್ರೀಧರ್ ಸೇರಿ ತಾವೇ ಚಿತ್ರಾನ್ನ ತಯಾರಿಸಿದರು. ಅದಕ್ಕೆ ಬೇಕಿದ್ದ ಎಲ್ಲ ಪದಾರ್ಥಗಳೂ ಸಿಗುತ್ತಿದ್ದವು. ನನ್ನದು ಮಾತ್ರ ಕೇವಲ ರುಚಿ ನೋಡುವ, ಬಾಯಿ ಚಪ್ಪರಿಸಿಕೊಂಡು ತಿನ್ನುವ ಕಾಯಕ! ತರಕಾರಿಯನ್ನೂ ಹೆಚ್ಚಲು ಬಾರದ ನಾನು ತಿನ್ನುವ ಕೆಲಸದಲ್ಲಿ ಮಾತ್ರವಷ್ಟೇ ಸೈ ಎನ್ನಿಸಿಕೊಳ್ಳುತ್ತಿದ್ದೆ. ಚಿತ್ರಾನ್ನ ತಯಾರಿಸಿದ ದಿನ "ಬಾಂಗಡ್"ನಿಂದ ನಮ್ಮ ಕೊಠಡಿಗೆ ವಿಶೇಷ ಅತಿಥಿಯಾಗಿ ಬಂದಿದ್ದ ಆಚಾರ್ಯ ಅವರು ತಾವು ನಮ್ಮನ್ನು ನೋಡಲು ಬರುವ ಮುನ್ನ ಊಟಮಾಡಬಾರದಿತ್ತೆಂದು ಬೇಸರಿಸಿಕೊಂಡರು. ಅಲ್ಲೂ ಚಿತ್ರಾನ್ನವೇ ಇದ್ದರೂ ಖಾರ ಅತಿಯಾಗಿದ್ದರಿಂದ ಅವರು ಸ್ವಲ್ಪವೇ ತಿಂದಿದ್ದರಂತೆ. ನಾವು ಜಾಸ್ತಿಯೇ ತಯಾರಿಸಿದ್ದರಿಂದ ಅವರೂ ಚಿತ್ರಾನ್ನವನ್ನು ಮನಸಾರೆ ಹೊಡೆದರು. ಮತ್ತೊಂದು ದಿನ ಶ್ರೀಧರ್ ತಾವೊಬ್ಬರೇ ನಿಂತು ಉಪ್ಪಿಟ್ಟನ್ನು ತಯಾರಿಸಿದರು. ಅಂದು ಬಹಳಷ್ಟು ಜನರಿಗೆ ಹಂಚಿದೆವು. ದೆಹಲಿಯಲ್ಲಿ ಹೋಟೆಲ್ ನಡೆಸುತ್ತಿದ್ದ ಪಂಜಾಬಿಯೊಬ್ಬರು ಶ್ರೀಧರ್‌ರ ಉಪ್ಪಿಟ್ಟನ್ನು ಇಷ್ಟಪಟ್ಟು ತಿಂದು ಹೊಗಳಿದರು. ಅಮಿತ್-ಅಮಿತ್ ಕುಟುಂಬದವರು ಅವರ ಮಕ್ಕಳಿಗೂ ದಕ್ಷಿಣಭಾರತದ ಉಪ್ಪಿಟ್ಟಿನ ಸ್ವಾದವನ್ನು ತೋರಿಸಿದರು.

ದಿನನಿತ್ಯದ ನಮ್ಮ ಈ ಆಟದ ನಡುವೆ, ದಿನೇಶ್‌ನ ಸಿಲಿಂಡರ್ ಖಾಲಿಯಾಗುತ್ತಿತ್ತು. ಬದರಿನಾಥಕ್ಕೆ ಅಗತ್ಯ ವಸ್ತುಗಳ ಸರಬರಾಜು ನಿಂತುಹೋಗಿತ್ತಾದ್ದರಿಂದ ಬದಲಿ ಸಿಲಿಂಡರ್ ದೊರೆಯುವುದು

ಅಸಾಧ್ಯವೇ ಆಗಿತ್ತು. ಜೊತೆಗೆ ಅವನು ಸರಿಯಾಗಿ ಊಟಮಾಡುತ್ತಿಲ್ಲವೆಂಬ ಸಂಗತಿಯನ್ನು ಉಪ್ಪಿಟ್ಟು ಮಾಡಿದ ದಿನ ಗಮನಿಸಿದೆವು. ನಮಗೆ ಸಹಾಯ ಮಾಡಲು ಅವನು ಪಟ್ಟ ಪಾಡು ಕಂಡು ಬೇಸರವಾಯಿತು. ಮರುದಿನದಿಂದ ಅಡುಗೆ ಮಾಡಿಕೊಳ್ಳುವುದು ಬೇಡವೆಂದು ನಿರ್ಧಾರ ಮಾಡಿಕೊಂಡೆವು. ಅಷ್ಟಕ್ಕೂ ನಾವಿನ್ನು ಎರಡು–ಮೂರು ದಿನಗಳಷ್ಟೇ ಅಲ್ಲಿ ಉಳಿಯಬೇಕಾಗಿದ್ದು. ಪ್ರತಿನಿತ್ಯ ಎರಡು ಲಾರಿಗಳಲ್ಲಿ ಸೇನೆಯ ಮತ್ತು ITBPಯ ಯೋಧರು ಚಾರಣದ ಮಾರ್ಗದ ಕಾಮಗಾರಿಗೆಂದೇ ಹೋಗುವುದನ್ನು ಮುಂಜಾನೆಯೇ ನೋಡುತ್ತಿದ್ದೆವು. ದಿನೇಶ್‌ನಾದರೋ, ಕಡೇ ಪಕ್ಷ ಇನ್ನೆರಡು–ಮೂರು ವಾರಗಳಾದರೂ ಅಲ್ಲಿರಬೇಕಿತ್ತು. ಈ ವರ್ಷ ಯಾರೂ ಯಾತ್ರಿಕರು ಇನ್ನು ಬರದಿದ್ದರೂ ತನ್ನೆಲ್ಲ ವ್ಯವಹಾರವನ್ನು ಪೂರ್ಣಗೊಳಿಸಲು ಅವನಿಗೆ ಅಷ್ಟು ದಿನಗಳ ಕಾಲಾವಕಾಶ ಬೇಕಿತ್ತು.

ದಿನೇಶ್‌ನ ಈ ಸಹಾಯಗಳನ್ನು ನಾವು ಯಾರೂ ಈ ಜನ್ಮದಲ್ಲಿ ಮರೆಯುವಂತಿಲ್ಲ! ಯಾರೋ ಯಾರನ್ನೋ ಯಾವ ಯಾವ ಸಮಯದಲ್ಲೋ ದೇವರಂತೆ ಬಂದು ಕಾಪಾಡುತ್ತಾರೆ ಎಂದು ಕೇಳಿ ತಿಳಿದಿದ್ದ ನಮಗೆ ಅದರ ಪ್ರತ್ಯಕ್ಷ ಅನುಭವವಾಯಿತು. ದಿನೇಶ್–ಪವನ್‌ರ ಈ ಸ್ನೇಹಶೀಲ ಗುಣ, ಅವರು ನಮಗೆ ಧೈರ್ಯ ತುಂಬುತ್ತ ನಮ್ಮನ್ನು ಆ ಕಷ್ಟದ ದಿನಗಳಲ್ಲಿ ನೋಡಿಕೊಂಡ ಬಗೆಗೆ ನಾವು ಅವರಿಗೆ ಯಾವುದೇ ರೀತಿಯ ಸಹಾಯ ಮಾಡಿದರೂ ಋಣಮುಕ್ತರಾಗುವುದಿಲ್ಲ.

# ಮತ್ತೊಂದು ಸಾಹಸಕ್ಕೆ ಮುನ್ನುಡಿ

ಇತರ ಕೊಠಡಿಗಳಲ್ಲಿದ್ದ ಪರಿವಾರಗಳ ಮಕ್ಕಳ ಜೊತೆ ಆಟವಾಡುತ್ತ ಸಮಯವನ್ನು ಕೊಲ್ಲುತ್ತಿದ್ದೆವಾದರೂ ಅದೊಂದರಿಂದಲಷ್ಟೇ ನಮ್ಮ ಬೇಸರವನ್ನು ನೀಗಿಸಲು ಸಾಧ್ಯವಾಗುತ್ತಿರಲಿಲ್ಲ. ಜೊತೆಗೆ ಹೊರಹೋಗಲು ಹೊಸಹೊಸ ದಾರಿಗಳ ಅನ್ವೇಷಣೆ ಮಾಡಲೇಬೇಕಿತ್ತು. ಜಯರಾಮನ ಪರಿಚಿತರೊಬ್ಬರು ಕರೆ ಮಾಡಿ ಬದರಿನಾಥದ ಅನಂತಮಠಕ್ಕೆ ಹೋಗಬೇಕೆಂದೂ, ಅಲ್ಲಿನ ಜನ ಸಹಾಯ ಮಾಡಬಹುದೆಂದೂ ಸೂಚಿಸಿದರು. ಅಂತೆಯೇ ಒಂದು ಬೆಳಿಗ್ಗೆ ಅನಂತಮಠವನ್ನು ಹುಡುಕುತ್ತ ಹೊರಟೆವು.

ಅನಂತಮಠ ಉಡುಪಿಯ ಪೇಜಾವರ ಮಠದ ಆಡಳಿತಕ್ಕೊಳಪಟ್ಟಿದೆ. ಅಲ್ಲಿನ ವ್ಯವಸ್ಥಾಪಕರು ಕನ್ನಡಿಗರೇ ಆಗಿದ್ದಿದ್ದು, ಮತ್ತೊಂದು ಸಮಾಧಾನಕರ ಅಂಶವಾಗಿತ್ತು. ಅವರ ಬಳಿ ನಮ್ಮ ಕಥೆ ಹೇಳಿಕೊಂಡೆವು. "ನಾನೂ ಸಹ ಅಸಹಾಯಕನಾಗಿದ್ದೇನೆ. ಅಕ್ಕಿ, ತರಕಾರಿ ಕೂಡ ಸಿಗುವುದು ಕಷ್ಟವಾಗಿದೆ. ಯಾವುದೇ ವಸ್ತುಗಳೂ ರಸ್ತೆ ಸರಿಯಾಗುವವರೆಗೂ ಬದರಿನಾಥಕ್ಕೆ ಬರುವುದಿಲ್ಲ. ಹೆಲಿಕಾಪ್ಟರ್ ವಿಷಯದಲ್ಲಿ ನನ್ನದೇನೂ ನಡೆಯುವುದಿಲ್ಲ" ಎಂದು ಕೈಚೆಲ್ಲಿದರು. ನಂತರ ನಮ್ಮ ಊಟದ ವ್ಯವಸ್ಥೆಯನ್ನು ಅವರು ವಿಚಾರಿಸಲಾಗಿ, ಅಲ್ಲಿಯವರೆಗಿನ ಪಾಡನ್ನು ಹೇಳಿಕೊಂಡೆವು. ಮಠಕ್ಕೇ ಊಟಕ್ಕೆ ಬನ್ನಿರೆಂದು ಆಹ್ವಾನಿಸಿದರು. ಕನ್ನಡದವರಾದ್ದರಿಂದ ಓದಲು ಏನಾದರೂ ಕನ್ನಡ ಪುಸ್ತಕಗಳಾಗಲೀ, ಪತ್ರಿಕೆಗಳಾಗಲೀ ಇದೆಯೇ ಎಂದು ಕೇಳಿದೆ. ಹೌದೆಂದು ತಮ್ಮಲ್ಲಿದ್ದ ಭಾಗವತದ ಪುಸ್ತಕವನ್ನೂ ಜೊತೆಗೆ ೧೭ ಜೂನ್‌ರ ವಿಜಯ ಕರ್ನಾಟಕ ಪತ್ರಿಕೆಯನ್ನೂ ಕೊಟ್ಟರು (ನಾವು ಅವರಲ್ಲಿಗೆ ಹೋದಾಗ ಅದಾಗಲೇ ೨೫ ಜೂನ್ ಆಗಿತ್ತು). ಅದೆಷ್ಟೇ ಹಳೆಯದಾಗಿದ್ದರೂ ನಮಗೆ ಯಾವ ವಾರ್ತೆಯೂ ತಲುಪಿರಲಿಲ್ಲವಾಗಿ ಅದನ್ನೂ ತೆಗೆದುಕೊಂಡು ನಮ್ಮ ಕೊಠಡಿಗೆ ಮರಳಿದೆವು.

ನಮ್ಮ ಕೈಲಿದ್ದ ಪುಸ್ತಕವನ್ನು ನೋಡಿ ಪವನ್‌ಗೆ ಆಶ್ಚರ್ಯವಾಯಿತು. ಯಾವ ಪುಸ್ತಕವಿದು ಎನ್ನುತ್ತಾ ಅದನ್ನು ತೆಗೆದು ನೋಡಿದವನಿಗೆ ಒಂದಕ್ಷರವೂ ಅರ್ಥವಾಗಲಿಲ್ಲ! "ಇದೇನಿದು, ಎಲ್ಲ ಜಿಲೇಬಿಯಂತಿದೆ, ಏನು ಬರೆದಿದೆ ಇದರಲ್ಲಿ, ಎಲ್ಲಿಂದ ತಂದಿರಿ ಇದನ್ನು?" ಎಂದು ಕುತೂಹಲದಿಂದ ಕೇಳಿದ. ಈ ಅಕ್ಷರಗಳನ್ನು ಮನುಷ್ಯಮಾತ್ರರಾದವರು ಹೇಗೆ ಓದಲು ಸಾಧ್ಯ ಎಂಬ ಸಂದೇಹ ಅವನನ್ನು ಬಹಳವಾಗಿ ಪೀಡಿಸಿತು. ಪ್ರತಿಯೊಂದು ಪುಟವನ್ನೂ ತೆಗೆದು, ಅಲ್ಲಲ್ಲಿ ಪದಗಳನ್ನು ತೋರಿಸಿ, "ಇದೇನು, ಇದೇನು" ಎಂದು ಚಿಕ್ಕ ಮಕ್ಕಳಂತೆ ಕೇಳತೊಡಗಿದ. ಕೇವಲ ಪದವನ್ನು ಓದಿದರೆ ಅವನಿಗೆ ಅರ್ಥವಾಗುತ್ತಿರಲಿಲ್ಲ. ಆದ್ದರಿಂದ ಅವನು ತೋರಿಸಿದ ಪ್ರತಿಯೊಂದು ಪದವನ್ನೂ ಹಿಂದಿಗೆ ಅನುವಾದಿಸಿ ಹೇಳುವ ಪ್ರಯತ್ನ

ಮಾಡಿದೆವು. ಕೆಲಕಾಲ ತನ್ನ ಕೈಲಿ ಹಿಡಿದಿದ್ದ ಪುಸ್ತಕವನ್ನೇ ನೋಡುತ್ತ ನಿಂತಿದ್ದ ಪವನ್ ಒಮ್ಮೆಲೇ ಅದನ್ನು ನಮ್ಮ ಕೈಗೆ ಕೊಟ್ಟು ನಗುತ್ತ, ತಲೆ ಚಚ್ಚಿಕೊಳ್ಳುತ್ತ ಹೊರಟುಹೋದ. ನಾವೂ ಬಿದ್ದು ಬಿದ್ದು ನಗುತ್ತಿದ್ದೆವು.

ದಿನಪತ್ರಿಕೆಯನ್ನು ತಿರುವಿಹಾಕಿದೆವಾದರೂ, ಭಾಗವತವನ್ನು ಓದುವ ಆಸಕ್ತಿ ಮೂಡಲಿಲ್ಲ. ನಿದ್ದೆ ಮಾಡುತ್ತ ಮಧ್ಯಾಹ್ನವನ್ನು ಕಳೆದೆವು. ಸಂಜೆ ಎದ್ದ ನಮಗೆ ಪೊಲೀಸರು ಧ್ವನಿವರ್ಧಕದಲ್ಲಿ ಹೊರಡಿಸುತ್ತಿದ್ದ ಪ್ರಕಟಣೆಯೊಂದು ಅತೀವ ಸಂತೋಷವನ್ನುಂಟು ಮಾಡಿತು.

"ಪೈದಲ್ ರಸ್ತಾ ಖುಲ್ ಚುಕಾ ಹೈ. ಲೋಗ್ ಚಲ್‌ಕೇ ಜಾ ಸಕ್ತೇ ಹೈ" ಎಂದು ಪದೇಪದೇ ಕೂಗುತ್ತಾ ಹೋಗುತ್ತಿದ್ದ ಪೊಲೀಸರ ವಾಣಿ ಕಳೆದುಹೋಗಿದ್ದ ಉತ್ಸಾಹ ಮರುಕಳಿಸುವಂತೆ ಮಾಡಿತು. "ಸೇತುವೆಯ ಕಾಮಗಾರಿ ಮುಗಿದಿದ್ದು, ಚಾರಣದ ರಸ್ತೆ ತಯಾರಾಗಿದೆ. ಹತ್ತರಿಂದ ಐವತ್ತರ ವಯಸ್ಸಿನ ನಡುವಿನವರು ಯಾರು ಬೇಕಾದರೂ ಹೋಗಬಹುದು" ಎಂಬ ಸೂಚನೆ ಕಿವಿಗೆ ಇಂಪಾಗಿ ಕೇಳುತ್ತಿತ್ತು. ಆದರೆ ಅದಾಗಲೇ ಸಂಜೆಯಾಗಿದ್ದರಿಂದ, ಅಂದು ತಡವಾಗಿದ್ದರಿಂದ ಹೋಗಲು ಸಾಧ್ಯವಿರಲಿಲ್ಲ.

ನಮ್ಮೆಲ್ಲರ ಬಳಿಯೂ ತಲಾ ಎರಡು ಬ್ಯಾಗುಗಳಿದ್ದವು. ಜಯರಾಮನ ಒಂದು ಬ್ಯಾಗ್ ಪವನ್‌ಗೆ ಇಷ್ಟವಾಗಿಬಿಟ್ಟಿತ್ತು. ಒಮ್ಮೆ ಅದನ್ನು ಕೇಳಿಯೂ ಇದ್ದನು. ಆದರೆ ಅದನ್ನು ಕೊಡುವೆನೆಂದು ದಿನೇಶ್‌ಗೆ ಮಾತು ಕೊಟ್ಟಿದ್ದರಿಂದ ಜಯರಾಮ್ ಇಕ್ಕಟ್ಟಿಗೆ ಸಿಲುಕಿದ. ದೇವಸ್ಥಾನದ ಬಳಿಯಿರುವ ಅಂಗಡಿಗೆ ಹೋಗಿ ಮತ್ತೊಂದು ಬ್ಯಾಗ್ ಕೊಂಡು ಪವನ್‌ಗೆ ಕೊಡೋಣವೆಂದುಕೊಂಡು ಅಲ್ಲಿಗೆ ಹೋಗಿ ಉತ್ತಮವಾದ ಬ್ಯಾಗೊಂದನ್ನು ಕೊಂಡೆವು. ಹೊಸ ಬ್ಯಾಗನ್ನು ತಂದು ಕೊಠಡಿಯಲ್ಲಿಟ್ಟು ಚಹಾ ತರುವಂತೆ ಪವನ್‌ಗೆ ಸೂಚಿಸಿದೆವು. ಚಹಾ ತಂದ ಪವನ್ ಹೊಸ ಬ್ಯಾಗನ್ನು ನೋಡಿ ಕುತೂಹಲದಿಂದ ನಮ್ಮತ್ತ ನೋಟ ಹಾಯಿಸಿದ. "ಇದು ನಿನಗಾಗೇ ತಂದಿದ್ದು, ತೆಗೆದುಕೋ" ಎಂದು ಜಯರಾಮ್ ಅದನ್ನು ಪವನ್ ಕೈಗಿಡಲು ಹೊರಟರೆ "ನನಗೇಕೆ ಹೊಸದನ್ನು ತಂದಿರಿ? ನಾನೊಲ್ಲೆ" ಎಂದು ಹಠಮಾಡತೊಡಗಿದ. ಅವನನ್ನು ಒತ್ತಾಯಿಸಿ ಅದನ್ನು ಅವನ ಕೈಗಿಟ್ಟ ನಂತರ ನಮ್ಮತ್ತ ನೋಡಿ ಅಳತೊಡಗಿದ! "ಬೇಡವಾಗಿತ್ತು, ಇದೆಲ್ಲ" ಎಂದು ಗದ್ಗದಿತನಾಗಿ ನುಡಿದ. "ನೀನು ಕಾಲೇಜಿಗೆ ಹೋಗುವವನು, ಇಟ್ಟುಕೋ. ನಿನಗೆ ಉಪಯೋಗಕ್ಕೆ ಬರುತ್ತದೆ" ಎಂದು ಹೇಳುವಷ್ಟರಲ್ಲಿ ನಮ್ಮ ಕಣ್ಣಂಚಲ್ಲೂ ನೀರು ತುಂಬಿತ್ತು. ಅವನ ಕೈಗೆ ಕೊಂಚ ಹಣ ಇಡಲು ಹೋದರೆ, ಫಕ್ಕನೆ ಕೈ ಹಿಂದಕ್ಕೆಳೆದುಕೊಂಡು ಸಾರಾಸಗಟಾಗಿ ತಿರಸ್ಕರಿಸಿದ. ಎಷ್ಟು ಬಲವಂತ ಮಾಡಿದರೂ ಒಂದೇ ಒಂದು ನೋಟನ್ನೂ ಮುಟ್ಟಲಿಲ್ಲ. ಅವನ ಅಳು ಈಗ ಜಾಸ್ತಿಯಾಗಿತ್ತು. ಇನ್ನು ನನಗೆ ತಡೆಯಲಾಗಲಿಲ್ಲ.

ಕೊಠಡಿಯಿಂದ ಹೊರಕ್ಕೆ ಓಡಿದೆ. ಕಣ್ಣೀರು ಧಾರಾಕಾರವಾಗಿ ಸುರಿಯುತ್ತಿತ್ತು. ಪ್ರಪಂಚದಲ್ಲಿ ಇಂತಹ ಮುತ್ತುರತ್ನಗಳಿನ್ನೂ ಇದ್ದಾರೆಯೆಂಬ ಸಂಗತಿ ದೇವರ ಮೇಲಿನ ನನ್ನ ನಂಬಿಕೆಯನ್ನು ಬಲಪಡಿಸಿತ್ತು. ಅವನ ದೊಡ್ಡತನ ನನ್ನೆದುರು ನಿಂತಿದ್ದ ನರ–ನಾರಾಯಣ ಪರ್ವತದ ಎತ್ತರವನ್ನೂ ಮೀರಿತ್ತು. ಐದು ನಿಮಿಷ ಬಿಟ್ಟು ಹೊರಬಂದ ಜಯರಾಮ್ ನನ್ನತ್ತ ನೋಡಿ ಕಣ್ಣೊರೆಸಿಕೊಳ್ಳುತ್ತ, "Emotional ಮಾಡಿಬಿಟ್ಟ ಕಳ್ ನನ್ ಮಗ" ಎಂದು ಪ್ರೀತಿಯಿಂದ ಬೈಗುಳವನ್ನು ಸುರಿಸಿದ.

ನನ್ನದೊಂದು ಇಷ್ಟದ ಟೋಪಿಯನ್ನು ಕೂಡಾ ಪವನ್‌ಗೆ ಕೊಟ್ಟುಬಿಟ್ಟೆ. ಮಹಾರಾಷ್ಟ್ರದ ರಾಯಘಡಕ್ಕೆ ಪ್ರವಾಸ ಹೋಗಿದ್ದಾಗ ಆಸೆಯಿಂದ ಖರೀದಿಸಿದ್ದ ಕಡುನೀಲಿಯ ಟೋಪಿಯದು. ಆದರೆ ಪವನ್‌ನ ಮೇಲಿನ ಅಭಿಮಾನದಿಂದ ಅದನ್ನು ಅವನಿಗೆ ಕೊಡಲೇಬೇಕೆನಿಸಿ ಅದನ್ನು ಅವನ ಕೈಯಲ್ಲಿಟ್ಟೆ. ಪವನ್ ಅದನ್ನು ಹಾಕಿಕೊಂಡು ಖುಷಿಯಿಂದ ನಲಿದಾಡಿದ. ಆ ದಿನವಿಡೀ ಟೋಪಿ ಅವನ ತಲೆಯನ್ನು ಅಲಂಕರಿಸಿಯೇ ಇತ್ತು.

ಅಂದು ರಾತ್ರಿ "ಬಾಂಗಡ್" ವಸತಿಗೃಹಕ್ಕೆ, ಕರ್ನಾಟಕ ಸರ್ಕಾರದಲ್ಲಿ ಸಚಿವರಾಗಿದ್ದ ಸಂತೋಷ್ ಲಾಡ್‌ರವರು ಬಂದಿದ್ದರು. ಕರ್ನಾಟಕದ ಯಾತ್ರಿಕರ ರಕ್ಷಣೆಗಾಗಿ ಇನ್ನೂ ಹಲವಾರು ಹಿರಿಯ ಅಧಿಕಾರಿಗಳನ್ನು ನಮ್ಮ ಸರ್ಕಾರ ನಿಯೋಜಿಸಿತ್ತು. ನಮ್ಮೆಲ್ಲರ ಸಮಸ್ಯೆಗಳನ್ನು ಆಲಿಸಿದ ಸಂತೋಷ್ ಲಾಡ್‌ರವರು ನಮ್ಮನ್ನು ಶೀಘ್ರವೇ ಇಲ್ಲಿಂದ ಕರೆದೊಯ್ಯುವುದಾಗಿ ಭರವಸೆ ನೀಡಿದರು. ರಾತ್ರಿ ತೆಲುಗು ವಾಹಿನಿಯೊಂದರ ವರದಿಗಾರನೊಬ್ಬ ಬಂದಿದ್ದು, ದೇವಸ್ಥಾನದೆಡೆಗೆ ಹೋಗುತ್ತಿದ್ದ. ಅವನ ಜೊತೆ ಹೋಗುತ್ತಿದ್ದ ಜೋಶಿಯವರು ಹಾಗೇ ನಮ್ಮನ್ನೂ ಎಳೆದುಕೊಂಡು ಹೋದರು. ಆ ವರದಿಗಾರನ ಕಾರ್ಯವೈಖರಿ ನಗು ತರಿಸುತ್ತಿತ್ತು. ಏನೆಂದರೆ ಏನೂ ಗೊತ್ತಿಲ್ಲದ ಆ ಮಹಾಪುರುಷ ಎಲ್ಲವನ್ನೂ ನಮ್ಮಿಂದ ತಿಳಿದುಕೊಂಡು, ನಂತರ ತಾನೇ ಪ್ರತ್ಯಕ್ಷವಾಗಿ ಕಂಡಂತೆ ಕ್ಯಾಮೆರಾ ಮುಂದೆ ಮಾತನಾಡುತ್ತಿದ್ದ ರೀತಿ ಹಾಸ್ಯಾಸ್ಪದವಾಗಿತ್ತು. ಚಳಿಯಲ್ಲಿ ನಡುಗುತ್ತ ನಿಂತಿದ್ದವರಿಗೆ ತಪ್ತಕುಂಡದಿಂದ ಬಿಸಿನೀರಿನಿಂದ ಬರುತ್ತಿದ್ದ ಹೊಗೆ ಹಿತವಾಗಿತ್ತು. ವರದಿಗಾರ ಅದೇನೋ ಬಡಬಡಾಯಿಸುತ್ತಿದ್ದರೆ ನಾವು ಬಿಸಿನೀರಿನ ಬುಗ್ಗೆ ಬಳಿ ನಿಂತು ಚಳಿ ಕಾಯಿಸಿಕೊಳ್ಳುತ್ತ ಅವನನ್ನು ನೋಡುತ್ತ ನಗುತ್ತಿದ್ದೆವು. ಚಾರಣದ ಮಾರ್ಗ ತಯಾರಾಗಿದ್ದರೂ ನಡೆದು ಹೋಗಲು ಮೀನಮೇಷ ಎಣಿಸುತ್ತಿದ್ದ ನಮಗೆ, ಅದುವೇ ಬದರಿನಾಥದಲ್ಲಿ ನಾವು ಕಳೆಯುವ ಕೊನೆಯ ರಾತ್ರಿಯಾಗುತ್ತದೆಂದು ಇನ್ನೂ ತಿಳಿದಿರಲಿಲ್ಲ.

ಬೆಳಿಗ್ಗೆಯೂ ಪೊಲೀಸರ ಪ್ರಕಟಣೆ ಹೊರಬೀಳುತ್ತಲೇ ಇತ್ತಾದರೂ ಕಾರಣಾಂತರಗಳಿಂದ ನಾವಿನ್ನೂ ಹೊರಡುವ ಮನಸ್ಸು ಮಾಡಿರಲಿಲ್ಲ. ದಿನೇಶ್ ಕೇಳಿದಾಗಲೂ ಹೋಗುವುದಿಲ್ಲವೆಂದೇ ಹೇಳಿದ್ದೆವು!

ಪುಸ್ತಕಗಳನ್ನು ವಾಪಸ್ಸು ಕೊಡಲೆಂದು ಅನಂತಮಠಕ್ಕೆ ಹೋದಾಗ ವ್ಯವಸ್ಥಾಪಕರು ಊಟಕ್ಕೆಬ್ಬಿಸಿದರು. ರುಚಿಕರವಾದ ಅನ್ನ-ಹುಳಿ, ಪಲ್ಯಗಳು, ಸಿಹಿತಿನಿಸು – ಹಬ್ಬದ ಅಡುಗೆಯಂತಿತ್ತು ಅಂದು ನಾವು ಮಾಡಿದ ಊಟ! ತಿಂಡಿ ಸಹ ತಿಂದಿರಲಿಲ್ಲವಾಗಿ, ಸಾಕೆನ್ನಿಸುವವರೆಗೂ ಉಂಡೆವು. ಊಟ ಮುಗಿಸಿ ಕೊಠಡಿಗೆ ಬರುವಷ್ಟರಲ್ಲಿ ಮಧ್ಯಾಹ್ನ ಒಂದು ಗಂಟೆಯಾಗಿತ್ತು.

ನಮ್ಮ ಚಾಲಕ ನಾಲ್ಕು ದಿನಗಳ ಹಿಂದೆಯೇ ಕಾರನ್ನು ಬದರಿನಾಥದಲ್ಲೇ ಬಿಟ್ಟು ಓಡಿ ಹೋಗಿದ್ದ. ಕೆಲವು ವಿಚಿತ್ರ ಕಾರಣಗಳಿಂದಾಗಿ (ಅವನ್ನಿಲ್ಲಿ ವಿವರಿಸಲು ನಾನು ಅಶಕ್ತ!) ಪೊಲೀಸರ ಕೈವಶವಾಗಿದ್ದ ಅವನನ್ನು ಪೊಲೀಸರು ತೀವ್ರವಾಗಿ ಕಾಡಿಸಿದ್ದರು. ಜೊತೆಗೆ, ಅವನಿಗೆ ವೃದ್ಧ ತಂದೆ-ತಾಯಿ, ಪತ್ನಿ ಮತ್ತು ಮೂವರು ಮಕ್ಕಳ ನೆನಪು ಬಲವಾಗಿ ಕಾಡುತ್ತಿತ್ತು. ಹೀಗಾಗಿ ಯಾರಿಗೂ ಹೇಳದೆ, ಕೇಳದೆ ಒಂದು ದಿನ ಓಡಿಹೋಗಿ ಮಾಯವಾದ. ಎಷ್ಟೋ ದಿನಗಳ ನಂತರ ಅವನು ಕ್ಷೇಮವಾಗಿ ಮನೆ ತಲುಪಿದನೆಂಬ ಮಾಹಿತಿ ನಮಗೆ ಬಂದಿತಾದರೂ, ಅವನ ಸಂಪರ್ಕಕ್ಕೆ ಸಿಗಲಿಲ್ಲ.

೨೬ ಜೂನ್ ೨೦೧೩, ಮಧ್ಯಾಹ್ನ ಒಂದು ಗಂಟೆ... ಊಟ ಮುಗಿಸಿ ಸುಮ್ಮನೆ ಕುಳಿತವರಿಗೆ, ನಮಗೇನು ಹುಚ್ಚು ಹಿಡಿದಿದೆಯೇ ಎಂಬ ಸಂಶಯ ಮೂಡಿತು. ಇಷ್ಟು ದಿನ ಹೋಗಲು ದಾರಿಯಿಲ್ಲವೆಂದು ಕೊರಗುತ್ತಿದ್ದ ನಾವು ಇಂದು ದಾರಿ ಸರಿಯಾದಾಗ ಹೀಗೇಕೆ ಕೂರಬೇಕು ಎಂಬ ಪ್ರಶ್ನೆ ಮೂಡಿತು. ಮನದ ಚಿಂತನೆಗೆ ಶ್ರೀಧರ್ ದನಿ ಕೊಟ್ಟರು. "ಬನ್ನಿ, ಹೊರಡೋಣ" ಎಂದ ಶ್ರೀಧರ್‌ರ ಮಾತಿಗೆ ಜಯರಾಮ್ ಮತ್ತು ನಾನು ಸಮ್ಮತಿಸಿದೆವು. ಬದರಿನಾಥಕ್ಕೆ ಬಂದ ನಂತರದ ದಿನಗಳಲ್ಲಿ ಮೂವರೂ ಹೀಗೆ ಒಮ್ಮತದ ನಿರ್ಧಾರ ತೆಗೆದುಕೊಂಡಿದ್ದು ಬಹುಶಃ ಇದೇ ಮೊದಲ ಬಾರಿಯಾಗಿತ್ತು.

ಒಡನೆಯೇ, ನಮ್ಮೊಳಗೆ ವಿದ್ಯುತ್ ಪ್ರವಹಿಸಿದಂತಾಯಿತು. ಉತ್ಸಾಹ ಪುಟಿದೆದ್ದಿತು. ಮುಂದಿನ ಐದು ನಿಮಿಷಗಳಲ್ಲಿ ಮೂವರೂ ನಮ್ಮ ಸರಂಜಾಮುಗಳ ಸಮೇತ ಸಿದ್ಧರಾಗಿ ನಿಂತಿದ್ದೆವು. ದಿನೇಶ್‌ನನ್ನು ಕೊಠಡಿಗೆ ಕರೆದು, ನಾವು ಹೊರಡುತ್ತಿದ್ದೇವೆಂದು ತಿಳಿಸಿ, ಅವನ ಕೈಗೆ ಜಯರಾಮನ ಬ್ಯಾಗನ್ನೂ ಕೆಲವು ನೋಟುಗಳನ್ನೂ ಇಟ್ಟೆವು. ಹಠಮಾಡದೆ ತೆಗೆದುಕೊಂಡ ದಿನೇಶ್ "ನಿಮಗೆ ಒಳ್ಳೆಯದಾಗಲಿ, ಜೋಶೀಮಠ ತಲುಪಿದ ತಕ್ಷಣ ಕರೆ ಮಾಡಿ" ಎಂದು ಹಾರೈಸಿದ. ನಾವು ಹೊರಡುತ್ತಿದ್ದೇವೆಂಬ ಸಂಗತಿ ಅವನಿಗೆ ಸಂತೋಷವನ್ನೂ, ದುಃಖವನ್ನೂ ಜೊತೆಜೊತೆಯಲ್ಲೇ ಉಂಟುಮಾಡಿತ್ತು. ನಮಗೆ ಅತ್ಯಂತ ಸಹಾಯಕವಾಗಿದ್ದ ಅವನ ಮೊಬೈಲ್‌ನ್ನು ಅವನ ಕೈಗಿತ್ತೆವು. ಬದರಿನಾಥದಿಂದ ಹೊರಹೋಗುವುದು ಖಚಿತವಾದ ನಂತರ ನಮಗಿನ್ನು ಅದರ ಅವಶ್ಯಕತೆಯಿರಲಿಲ್ಲ.

ಬದರಿನಾಥ ಬಸ್ ನಿಲ್ದಾಣದೆದುರು ನಗರ ಪಂಚಾಯತ್‌ನ ವಾಹನವು ಬರುತ್ತದೆಂದೂ ಅದು ನಮ್ಮನ್ನು ಹನುಮಾನ್‌ಚಟ್ಟಿಯವರೆಗೂ ತಲುಪಿಸುವುದೆಂದು ದಿನೇಶ್ ಹೇಳಿದ. ವಾಹನದಲ್ಲಿ ಹೋಗುವುದರಿಂದ ಬಹಳಷ್ಟು ಸಮಯ ಉಳಿಯುವುದು ಖಾತರಿಯೆಂದೂ, ನಾವು ವೇಗವಾಗಿ ನಡೆದರೆ ಗೋವಿಂದಘಾಟ್ ತಲುಪಲು ಸಾಧ್ಯವಾಗುವುದೆಂದು ಸಹ ಹೇಳಿದ. ಗೋವಿಂದಘಾಟ್‌ನಲ್ಲಿ ಅಷ್ಟೆಲ್ಲ ಅನಾಹುತಗಳು ಸಂಭವಿಸಿದ್ದರೂ ಅಲ್ಲಿ ರಾತ್ರಿ ಉಳಿದುಕೊಳ್ಳಲು ಜಾಗಗಳಿದ್ದವು.

ನಾವು ನಡೆಯುತ್ತ ಹೊರಡುತ್ತಿದ್ದೇವೆಂದು ತಿಳಿಸಲು "ಬಾಂಗಡ್"ಗೆ ಹೋದೆವು. ನಮಗೆ ಶುಭಕೋರಿದ ಅವರು, ಕರ್ನಾಟಕದ IAS ಅಧಿಕಾರಿ ನವೀನ್‌ರಾಜ್ ಸಿಂಗ್ ಅವರು ಬದರಿನಾಥಕ್ಕೆ ಬಂದಿದ್ದು, ಅವರನ್ನೊಮ್ಮೆ ಕಾಣಲು ತಿಳಿಸಿದರು. ಅಂತೆಯೇ ಸಿಂಗ್ ಅವರನ್ನು ಭೇಟಿ ಮಾಡಿದೆವು. ನಮ್ಮನ್ನು ನೋಡಿದ ತಕ್ಷಣ ಸಿಂಗ್‌ರವರು "ನೀವು ನಡೆದು ಹೋಗಲು ಶಕ್ತರು. ಆರಾಮವಾಗಿ ತಲುಪುತ್ತೀರಿ" ಎಂದು ಧೈರ್ಯ ಹೇಳಿದರು. ಕೆಳಗೆ ಹೋದ ನಂತರ ಕರೆ ಮಾಡುತ್ತೇವೆಂದು ಹೇಳಿದ ನಾವು ಕಡೆಯ ಬಾರಿಗೆ "ಬಾಂಗಡ್"ನ ಜನರಿಂದ ಬೀಳ್ಕೊಂಡೆವು.

ನಮ್ಮೊಡನೆ ಬರುವುದು ಬೇಡವೆಂದು ಹೇಳಿದರೂ ಕೇಳದ ಪವನ್ ಮತ್ತು ದಿನೇಶ್ ಬಸ್ ನಿಲ್ದಾಣದವರೆಗೂ ನಮ್ಮೊಡನೆ ಹೆಜ್ಜೆಹಾಕಿದರು. ಎಲ್ಲರೂ ಮೌನದ ಮೊರೆ ಹೋಗಿದ್ದೆವು. ದಾರಿ ಹೇಗಿದೆಯೋ ಎಂಬ ಯೋಚನೆ ನಮ್ಮದಾದರೆ, ಗುಡ್ಡಗಾಡು ಪ್ರದೇಶದ ಜನರಲ್ಲದ ನಾವು ಸುರಕ್ಷಿತವಾಗಿ ತಲುಪುತ್ತೇವೆಯೇ ಎಂಬ ಚಿಂತೆ ಪವನ್–ದಿನೇಶ್‌ರದು. ಅಷ್ಟರಲ್ಲಿ ದಿನೇಶ್‌ನ ಮೊಬೈಲ್‌ಗೆ ಕರೆ ಮಾಡಿದ್ದ ನನ್ನಕ್ಕನಿಗೆ ನಾವು ನಡೆದು ಬರುತ್ತೇವೆಂದೂ, ನಾಳೆ ಮಧ್ಯಾಹ್ನ ಕೆಳಗೆ ಇಳಿದ ನಂತರ ನಾನೇ ಕರೆಮಾಡುತ್ತೇನೆಂದೂ ಹೇಳಿದೆ. ಅವಳಿಗೆ ಬಿಟ್ಟು ಬೇರಾರಿಗೂ ನಾವು ಹೊರಟಿದ್ದು ತಿಳಿದಿರಲಿಲ್ಲ.

ನಮ್ಮೊಂದಿಗೆ ನಡೆದುಬರಲು ಇನ್ನೂ ಹನ್ನೆರಡು ಜನರಿದ್ದರು. ಬರಿಗಾಲಿನಲ್ಲಿದ್ದ ಕೆಲವು ಸನ್ಯಾಸಿಗಳೂ, ಮಧ್ಯವಯಸ್ಸನ್ನು ಮೀರಿದ್ದ ದಂಪತಿ ಮತ್ತವರ ಪುತ್ರ, ಹಲವರು ಯುವಕರು – ಇಷ್ಟು ಜನರನ್ನು ನಮ್ಮ ತಂಡವಲ್ಲದ ತಂಡ ಒಳಗೊಂಡಿತ್ತು. ಮಧ್ಯಾಹ್ನ ಮೂರು ಗಂಟೆಗೆ ಅಲ್ಲಿಗೆ ಬಂದ ನಗರ ಪಂಚಾಯತ್‌ನ ವಾಹನ ನಮ್ಮೆಲ್ಲರನ್ನೂ ಹತ್ತಿಸಿಕೊಂಡಿತು. ವಾಹನವನ್ನೇರಿ ಹಿಂತಿರುಗಿ ನೋಡಿದಾಗ ಪವನ್ ಧಾರಾಕಾರವಾಗಿ ಕಣ್ಣೀರು ಸುರಿಸುತ್ತಿದ್ದ. ದಿನೇಶ್ ನಮ್ಮನ್ನು ನೋಡಿದರೆ ಎಲ್ಲಿ ಅಳು ಬರುವುದೋ ಎಂದು ಬೇರೆಲ್ಲೋ ನೋಡುತ್ತಿದ್ದರೂ ಅವನ ಕಣ್ಣಂಚುಗಳೂ ಒದ್ದೆಯಾಗಿದ್ದು ಸ್ಪಷ್ಟವಾಗಿ ಗೋಚರಿಸುತ್ತಿತ್ತು.

ನಾವೂ ಭಾವುಕತೆಯಿಂದ ಗದ್ಗದಿತರಾಗಿದ್ದೆವು. ಪವನ್–ದಿನೇಶ್‌ರಿಗೆ ಶುಭ ಕೋರಿದೆವು. ವಾಹನ ಬದರಿನಾಥದಿಂದ ಹೊರಟಿತು. ನಮ್ಮ ಜೀವನದ ಮಹತ್ತರ ಘಟ್ಟವೊಂದು ಹೀಗೆ ಕೊನೆಗೊಂಡಿತು. ನಿಧಾನವಾಗಿ ಪವನ್–ದಿನೇಶ್‌ರ ಆಕೃತಿಗಳು ಮರೆಯಾಗಿ, ನಂತರ ನರ–ನಾರಾಯಣ ಪರ್ವತಗಳೂ ಮರೆಯಾದವು. ಮತ್ತೊಂದು ಸಾಹಸಕಾರ್ಯದತ್ತ ಮುಖಮಾಡಿ ನಿಂತಿದ್ದೆವು. ಇನ್ನು ಹಿಂತಿರುಗಿ ನೋಡುವ ಪ್ರಶ್ನೆಯೇ ಇರಲಿಲ್ಲ.

# ಕಾನನದಲ್ಲೊಂದು ಮಹಾಚಾರಣ

೨೬ ಜೂನ್ ೨೦೧೩, ಮಧ್ಯಾಹ್ನ ಮೂರು ಗಂಟೆ... ಬದರಿನಾಥಕ್ಕೆ ವಿದಾಯ ಹೇಳಿಯಾಗಿತ್ತು. ಮುಂದಿನ ಹಾದಿ ಅತ್ಯಂತ ದುರ್ಗಮವಾಗಿದ್ದು, ಅನಿಶ್ಚಿತತೆ ಮತ್ತೊಮ್ಮೆ ನಮ್ಮನ್ನು ಬೆನ್ನತ್ತಿತ್ತು. ಆದರೆ ಇನ್ನೇನೂ ಆಪತ್ತಿನಲ್ಲಿ ಸಿಕ್ಕಿಬೀಳದಿದ್ದರೆ ಎರಡು ದಿನಗಳಲ್ಲಿ ಮನೆ ತಲುಪಬಹುದಿತ್ತು. ದೇವರ ಮೇಲೆ ಭಾರ ಹಾಕಿ ಹೊರಟುಬಿಟ್ಟಿದ್ದೆವು.

ಜಲಪಾತದ ದಾರಿಯನ್ನು ರಿಪೇರಿ ಮಾಡಿದ್ದರು. ಮಳೆಯು ನಿಂತಿದ್ದರಿಂದ ರಸ್ತೆಯ ಮೇಲೆ ಹರಿಯುತ್ತಿದ್ದ ನೀರು ಸಹ ನಿಂತಿತ್ತು. ರಾಶಿ ರಾಶಿ ಮಣ್ಣನ್ನು ಹಾಕಿ ದಾರಿಯನ್ನು ಸಮಗೊಳಿಸಿದ್ದರು. ಲಾರಿ ಮತ್ತು ಇತರ ದೊಡ್ಡ ವಾಹನಗಳು ಹೋಗಲು ಸಾಧ್ಯವಾಗುತ್ತಿರಲಿಲ್ಲವಾದರೂ ಚಿಕ್ಕ ವಾಹನಗಳು ಸಾಗಲು ಅಡ್ಡಿಯಿರಲಿಲ್ಲ. ನಿಧಾನವಾಗಿ ಜಲಪಾತದ ರಸ್ತೆಯನ್ನು ದಾಟಿ ನಾವು ಮುಂದೆ ಹೋಗುವಷ್ಟರಲ್ಲಿ ಒಮ್ಮೆಲೇ ಮೋಡ ಆವರಿಸಿತು. ಬೆಂಕಿ ಬಿಸಿಲಿದ್ದ ವಾತಾವರಣ ಇದ್ದಕ್ಕಿದ್ದಂತೆ ಬದಲಾಗಿಬಿಟ್ಟಿತು.

ಭೀತಿ ಮೂಡಿತು. ಹವೆ ಸರಿಯಿದ್ದರೂ, ದಾರಿ ಗೊತ್ತಿದ್ದರೂ ಚಾರಣ ಎಂದಿಗೂ ಸುಲಭವಲ್ಲ. ಈಗ ನೋಡಿದರೆ ಮಳೆ ಬರುವಂತಿದೆ, ಕತ್ತಲಾಗಲು ಕೆಲವೇ ಗಂಟೆಗಳಿವೆ, ಜೊತೆಗೆ ಕಾಡಿನೊಳಗಿನ ದಾರಿಯೂ ಗೊತ್ತಿಲ್ಲ! ಮುಂದೇನಪ್ಪಾ ಕಥೆ! ಮೊಬೈಲ್ ಇಲ್ಲದ್ದರಿಂದ ಯಾರನ್ನೂ ಸಂಪರ್ಕಿಸಲು ಸಹ ಸಾಧ್ಯವಿಲ್ಲ, ಜೊತೆಗೆ ನಾವು ಬದರಿನಾಥದಿಂದ ಹೊರಟಿದ್ದು ನನ್ನಕ್ಕನ ಹೊರತು ಮತ್ತಾರಿಗೂ ಗೊತ್ತಿರಲಿಲ್ಲವಾದ್ದರಿಂದ ಅಪ್ಪಿತಪ್ಪಿ ಏನಾದರೂ ಸಂಭವಿಸಿದರೆ ನಮ್ಮ ದುರಂತಮಯ ಅಂತ್ಯದ ಬಗ್ಗೆ ಜಗತ್ತಿಗೆ ಗೊತ್ತಾಗುವುದೋ ಇಲ್ಲವೋ! ಪ್ರಾಣಭಯ ಆವರಿಸಿತ್ತು. ಉರಿಯುವ ಬೆಂಕಿಗೆ ತುಪ್ಪ ಸುರಿಯುವಂತೆ, ಮಳೆ ಸಹ ಬರಲಾರಂಭಿಸಿತು. ಮೊದಲು ಸಣ್ಣ ಹನಿಗಳು ಬಿದ್ದರೂ, ಅನಂತರ ಜೋರಾದ ಗಾಳಿಯ ಸಮೇತ ಮಳೆ ಬೀಳತೊಡಗಿತು.

ಮಳೆಯು ಒಂದೇ ಸಮನೆ ಸುರಿಯುತ್ತಿದ್ದರೂ ವಾಹನ ಚಲಿಸುತ್ತಲೇ ಇತ್ತು. ನಮ್ಮ ಸಹಪ್ರಯಾಣಿಕರತ್ತ ಒಮ್ಮೆ ಗಮನ ಹರಿಸಿದೆ. ಒಂದು ದೃಢನಿಶ್ಚಯದಿಂದ, ಏನಾದರೂ ಎದುರಿಸಿಯೇ ತೀರುತ್ತೇವೆ ಎನ್ನುವ ಹಠ ಎಲ್ಲರ ಮುಖದಲ್ಲೂ ಮನೆಮಾಡಿತ್ತು. ಯಾರೊಬ್ಬರೂ ಒಂದೇ ಒಂದು ಮಾತನ್ನೂ ಆಡದೆ ಮೌನವಾಗಿ ರಸ್ತೆಯನ್ನೂ, ಸುತ್ತಮುತ್ತಲಿನ ಪರ್ವತಗಳನ್ನೂ ನೋಡುತ್ತಿದ್ದರು. ಮಳೆ ಕೆಲವರನ್ನು ಚಿಂತೆಗೀಡುಮಾಡಿದ್ದು ಹೌದಾದರೂ ಯಾರೂ ಋಣಾತ್ಮಕವಾದ ಮಾತುಗಳನ್ನಾಡಿ ಮಿಕ್ಕವರ ಉತ್ಸಾಹಕ್ಕೆ ತಣ್ಣೀರೆರಚುವಂತಹ ಕೆಟ್ಟಕೆಲಸ ಮಾಡಲಿಲ್ಲ.

ಅದುವರೆಗೂ, ನಾವೆಲ್ಲರೂ ಜಲಪಾತವಿದ್ದೆಡೆಯೊಂದೇ ರಸ್ತೆ ಹಾಳಾಗಿದ್ದ ಜಾಗವೆಂದು ಭಾವಿಸಿದ್ದೆವು. ಆದರೆ ಬಹಳಷ್ಟು ಕಡೆ ಭೂಕುಸಿತವಾಗಿದ್ದು, ಅಲ್ಲಲ್ಲಿ ರಸ್ತೆ ರಿಪೇರಿಗೆ ಒಳಗಾಗಿದೆಯೆಂದು ಹೇಳುತ್ತಿದ್ದ ಗುರುತುಗಳು ಕಂಡುಬರುತ್ತಿದ್ದವು. ಕೆಲವೆಡೆ ಆ ಗುರುತುಗಳು ಭಯಂಕರವಾಗಿಯೇ ಇದ್ದವು. ಮಣ್ಣು ಬಹಳ ಆಳದವರೆಗೂ ಜಾರಿ ನದಿಯನ್ನು ಮುಟ್ಟಿದ್ದು ಸ್ಪಷ್ಟವಾಗಿ ಗೊತ್ತಾಗುತ್ತಿತ್ತು. ನದಿಯ ಇಕ್ಕೆಲಗಳಲ್ಲಿ ಬಹಳಷ್ಟು ಕಲ್ಲು-ಮಣ್ಣು ಸಂಗ್ರಹವಾಗಿದ್ದು, ನದಿಯ ಅಗಲ ಕೊಂಚ ಕಡಿಮೆಯಾಗಿರುವಂತೆ ಭಾಸವಾಗುತ್ತಿತ್ತು.

ಮೂರು-ನಾಲ್ಕು ಕಿ.ಮೀ.ಗಳ ನಂತರ ರಸ್ತೆ ಇಳಿಜಾರಾಯಿತು. Zig-Zag ಮಾದರಿಯಲ್ಲಿ ಬಹಳ ವೇಗವಾಗಿ ರಸ್ತೆ ತಗ್ಗುಪ್ರದೇಶದೆಡೆಗೆ ನಮ್ಮನ್ನು ಒಯ್ಯುತ್ತಿರುವುದನ್ನು ಅನುಭವಿಸುತ್ತಿದ್ದೆವು. ಅಲ್ಲಿ ಯಾರಾದರೂ ನಡೆದು ಹೋಗುವವರಿದ್ದರೆ ರಸ್ತೆಯನ್ನು ಬಿಟ್ಟು ನೇರವಾಗಿ ಇಳಿದಿದ್ದರೂ ಹಲವಾರು ಕಿ.ಮೀ.ಗಳ ನಡಿಗೆಯನ್ನು ತಪ್ಪಿಸಬಹುದಾಗಿತ್ತು. ಅಲ್ಲೊಂದು ಕಡೆ ಬದಿಯಲ್ಲಿ ಕಾರೊಂದನ್ನು ಸಹ ನೋಡಿದೆವು. ಕಾರಿನಲ್ಲಿ ಯಾರೂ ಇರಲಿಲ್ಲ. ಅವರಿಗೆ ಏನಾಗಿರಬಹುದೆಂದೂ ಗೊತ್ತಿರಲಿಲ್ಲ. ಆದರೆ ಪ್ರಾಣಾಪಾಯವಾಗಿರುವ ಸಾಧ್ಯತೆಯಿರಲಿಲ್ಲ. ರಸ್ತೆಯು ಕಾರು ಹೋಗಬಹುದಾದ ಎರಡೂ ದಿಕ್ಕಿನಲ್ಲಿ ಹಾಳಾಗಿದ್ದರಿಂದ ಕಾರನ್ನು ಅಲ್ಲೇ ನಿಲ್ಲಿಸಿ ಇಳಿದು ನಡೆದುಹೋಗಿರಬಹುದಾದರೂ, ಯಾವ ಕಡೆ ಹೋಗಿದ್ದರೋ!

ಬದರಿನಾಥದಿಂದ ಹೊರಗೆ ನದಿ ರಸ್ತೆಯಿಂದ ಬಹಳ ಆಳದಲ್ಲಿ ಹರಿಯುತ್ತದೆ. ಆದರೆ ಕಡಿದಾದ ಪರ್ವತದ ಮೇಲಿರುವ ಹೆದ್ದಾರಿಯು ಎತ್ತರದಿಂದ ಕೆಳಗಿಳಿಯುತ್ತಲೇ ಹೋಗುತ್ತದೆ. ನದಿಗೂ ರಸ್ತೆಗೂ ನಡುವಿನ ಅಂತರ ಕಡಿಮೆಯಾಗುತ್ತದೆ. ಇಲ್ಲಿಂದ ಸಾಮಾನು-ಸರಂಜಾಮುಗಳ ಸಮೇತ ಮರಳಿ ಮೇಲಕ್ಕೆ ನಡೆಯಬೇಕೆಂದರೆ ಅದು ಮನುಷ್ಯಮಾತ್ರರಿಂದ ಸಾಧ್ಯವಿಲ್ಲ. ಸ್ಥಳೀಯರು ಸಹ ಸಾಮಾನು ಹೊತ್ತು ಇಷ್ಟು ಎತ್ತರದ ಗುಡ್ಡವನ್ನೇರುವ ಧೈರ್ಯ ಮಾಡುವುದಿಲ್ಲ.

ಹನುಮಾನ್‌ಚಟ್ಟಿಗೆ ತಲುಪಲು ಸುಮಾರು ಹನ್ನೊಂದು ಕಿ.ಮೀ ದೂರ ಕ್ರಮಿಸಿದೆವು. ಮಳೆ ಸುರಿಯುತ್ತಲೇ ಇತ್ತು. ಹನುಮಾನ್‌ಚಟ್ಟಿಯಲ್ಲೊಂದು ಸಣ್ಣ ಕಟ್ಟಡದಲ್ಲಿ ಸೇನೆಯವರು ಉಪಠಾಣೆಯೊಂದನ್ನು ಸ್ಥಾಪಿಸಿದ್ದರು. ಪಾದಚಾರಿಗಳಿಗೆ ಉಪಯುಕ್ತ ಮಾಹಿತಿ ನೀಡಲು, ಅವರಿಗೆ ಅಗತ್ಯವಾದ ಸೇವೆಯನ್ನೊದಗಿಸಲು ಈ ಉಪಠಾಣೆಯನ್ನು ಬಳಸುತ್ತಿದ್ದರು. ಅದರ ಮುಂದೆ ನಿಂತ ವಾಹನವನ್ನೂ, ಅದರಲ್ಲಿದ್ದ ನಮ್ಮನ್ನೂ ಕಂಡ ಪೊಲೀಸಿನವನೊಬ್ಬ "ಸಬ್ ಲೋಗ್ ವಾಪಸ್ ಜಾಯಿಯೇ. ಆಜ್ ಕಾ ಪ್ರೋಗ್ರಾಮ್ ಬಂದ್" ಎಂದುಬಿಟ್ಟ. "ಎಲ್ಲರೂ ಮರಳಿ ಬದರಿನಾಥಕ್ಕೆ ಹೋಗಿ,

ಇಂದು ಯಾರೂ ಚಾರಣ ಹೋಗುವಂತಿಲ್ಲ. ಮುಂದೇನೋ ತೊಂದರೆಯಿದೆ" ಎಂದು ಅವನ ಮಾತಿನ ಅರ್ಥ. ಆದರೆ ನಮ್ಮ ವಾಹನದಲ್ಲಿ ಚಾಲಕನ ಪಕ್ಕದಲ್ಲಿದ್ದ ಮತ್ತೊಬ್ಬ ಪೊಲೀಸನು ಏನೋ ಸನ್ನೆಮಾಡಿದನೆಂದು ಕಾಣುತ್ತದೆ, ವಾಹನವನ್ನು ಮುಂದೆಹೋಗಲು ಬಿಟ್ಟ.

ರಸ್ತೆ ಸರಿಯಿರುವ ಜಾಗದವರೆಗೂ ವಾಹನ ಸಾಗಿ, ಸೇನಾಧಿಕಾರಿಯೊಬ್ಬರ ಎದುರಿಗೆ ನಿಂತು ನಮ್ಮನ್ನಿಳಿಸಿತು. ಸೇನಾಧಿಕಾರಿ ಸರ್ತಾಜ್ ಸಾಬ್‌ರನ್ನು ಅನೇಕ ಬಾರಿ ಕಂಡಿದ್ದೆ. ಹೆಲಿಪ್ಯಾಡ್ ಸಮೀಪದಲ್ಲಿ ನಿಂತಿರುವಾಗ, ನಂತರ ದಿನಗಳಲ್ಲಿ ಬೆಳಗಿನ ಹೊಟ್ಟು ಸೇನೆಯವರು ರಸ್ತೆ ರಿಪೇರಿಗೆ ಹೊರಡುವಾಗ ಅವರೊಂದಿಗೆ ಮಾತನಾಡಿದ್ದೆ. ನನ್ನನ್ನು ನೋಡಿ ಗುರುತು ಹಿಡಿದವರಂತೆ ನಕ್ಕ ಸರ್ತಾಜ್ ಸಾಬ್, ಕೈಗೆರಡು ಬಿಸ್ಕತ್ ಪ್ಯಾಕೆಟ್‌ಗಳನ್ನು ಕೊಟ್ಟು, ಕೈಕುಲುಕಿ "All the Best" ಎಂದು ಶುಭಕೋರಿದರು. ಧನ್ಯವಾದಗಳನ್ನರ್ಪಿಸಿ, ನಮ್ಮ ಬ್ಯಾಗುಗಳನ್ನು ಬೆನ್ನಿಗೆ ಕಟ್ಟಿಕೊಂಡೆವು. ಜಯರಾಮನದು ಒಂದೇ ಬ್ಯಾಗಿತ್ತು. ಶ್ರೀಧರ್ ಮತ್ತು ನಾನು ಎರಡೆರಡು ಬ್ಯಾಗನ್ನು ಹೊರಬೇಕಾಗಿತ್ತು.

ಬ್ಯಾಗುಗಳನ್ನು ಬೆನ್ನಿಗೆ ಕಟ್ಟಿಕೊಂಡು, ಚಾರಣದ ಕೋಲನ್ನು ಕೈಲಿ ಹಿಡಿದು ಸಿದ್ಧರಾಗಿ, ದಾರಿ ಎಲ್ಲಿದೆಯೆಂದು ಕೇಳಿದೆವು. ಪೊದೆಯೊಂದರತ್ತ ಬೊಟ್ಟುಮಾಡಿ ತೋರಿಸಿದರು! ಆ ದಿಕ್ಕಿನಲ್ಲಿ ನೋಡಿದೆವಾದರೂ ಅಲ್ಲಿ ಏನೂ ಕಾಣುತ್ತಿರಲಿಲ್ಲ. ಅಷ್ಟರಲ್ಲಿ ನಮ್ಮ ಗುಂಪಿನಲ್ಲಿದ್ದ ಸಾಧುಗಳು ಆ ದಿಕ್ಕಿನಲ್ಲಿ ನಡೆಯುತ್ತ ಹೊರಟು ಕಾಡಿನೊಳಗೆ ಹೊಕ್ಕರು. ಅವರಿಗೆ ಈ ರೀತಿಯ ಅಲೆದಾಟ ಅದೆಷ್ಟು ಅಭ್ಯಾಸವಾಗಿತ್ತೋ, ಸರಾಗವಾಗಿ ಹೊರಟುಹೋದರು. ಅವರನ್ನೇ ಹಿಂಬಾಲಿಸುತ್ತ ಪೊದೆಯೆಡೆಗೆ ಹೋದೆವು.

ಪೊದೆಯೊಳಗಿನ ದಾರಿ ತಗ್ಗಾಗಿದ್ದು, ಜಾರಿಕೆಯಿಂದ ಕೂಡಿತ್ತು. ಹಿಂದಿನ ರಾತ್ರಿ ಮಳೆ ಬಂದಿದ್ದೇ ಜಾರಿಕೆಗೆ ಕಾರಣ. ಅಸಂಖ್ಯಾತ ಕಲ್ಲುಗಳ ಮೇಲೆ ಪಾಚಿ ಬೆಳೆದುನಿಂತಿದ್ದು, ಹಲವು ಕಲ್ಲುಗಳ ಗಾತ್ರ ಎಷ್ಟು ದೊಡ್ಡದಿತ್ತೆಂದರೆ ಅದರ ಮೇಲೆ ಕಾಲಿಟ್ಟೇ ನಾವು ಅದನ್ನು ದಾಟಬೇಕಿತ್ತು. ಆದರೆ ಕಾಲಿಟ್ಟರೆ ಪಾಚಿಯಿಂದ ಜಾರಿ ಬೀಳುವುದಂತೂ ಖಚಿತ. ಜಾರಿ ಬಿದ್ದರೆ ಮತ್ತೇನಾಗುವುದೋ, ಊಹೆಗೂ ನಿಲುಕದ ಸಂಗತಿ. ಪುಟ್ಟ ಕಾಲುದಾರಿ ಕೆಸರುಮಯವಾಗಿದ್ದು, ನಡೆಯಲು ಕಷ್ಟವಾಗಿತ್ತು. ಮಳೆಹನಿ ಸತತವಾಗಿ ನಮ್ಮ ಮೇಲೆ ಬಿದ್ದು ನಮ್ಮ ಪರಿಸ್ಥಿತಿಯನ್ನು ಇನ್ನೂ ಕಠಿಣವಾಗಿ ಮಾಡುತ್ತಲಿತ್ತು. ನಮ್ಮೊಂದಿಗೆ ಬರುತ್ತಿದ್ದ ಕುಟುಂಬದ ನಡುವಯಸ್ಕ ಹೆಂಗಸು ಈ ರಾಡಿಯಾದ ದಾರಿಯನ್ನು ನೋಡಿ ಬೆದರಿದಳು. ದೈನ್ಯದಿಂದ ನಮ್ಮ ಸಹಾಯ ಕೇಳಿದಳು. ಶ್ರೀಧರ್ ಆ ಹೆಂಗಸಿನ ನೆರವಿಗೆ ಹೋಗಿ, ಎಲ್ಲೆಲ್ಲಿ ಅವಶ್ಯಕತೆಯಿತ್ತೋ, ಅಲ್ಲೆಲ್ಲ ಕೈಹಿಡಿದು ನಿಧಾನವಾಗಿ ಬಂಡೆಗಳನ್ನು ದಾಟಿಸಿದರು. ಆದರೂ ಆಕೆಯ

ಗಾಬರಿ ಹೇಳತೀರದು. ಜೊತೆಗೆ ಮಗನ ಮೇಲಿನ ಕಾಳಜಿ ಅವಳನ್ನು ಅಲ್ಲಲ್ಲಿ ನಿಲ್ಲಿಸಿಬಿಡುತ್ತಿತ್ತು. ಮಗನೇನು ತೀರಾ ಚಿಕ್ಕವನೇನಲ್ಲ, ಸುಮಾರು ಇಪ್ಪತ್ತು ವರ್ಷದವನು. ಅಲ್ಲದೆ ಅವನ ಜೊತೆಗೆ ಜಯರಾಮ್ ಹೆಜ್ಜೆಹಾಕುತ್ತಿದ್ದನು. ಆದರೂ ಆಕೆಗೆ ಸಮಾಧಾನವಿಲ್ಲ. ಮುಂದೆ ಹೋಗುತ್ತಿದ್ದ ನನ್ನನ್ನು ಆಕೆಯ ಗಂಡ ಅನುಸರಿಸುತ್ತಿದ್ದ. ಅವನ ಬೂಟುಗಳು ಅದಾಗಲೇ ಕಿತ್ತುಬರುತ್ತಿದ್ದವು. ಉತ್ತಮ ಗುಣಮಟ್ಟದ ಪಾದರಕ್ಷೆಗಳಿಲ್ಲದೆ ಆ ವ್ಯಕ್ತಿ ಪಟ್ಟ ಪಾಡು ಹೇಳತೀರದು. ಎಷ್ಟೋ ಬಾರಿ ಅಲ್ಲಲ್ಲಿ ಜಾರುತ್ತಲೇ ಇದ್ದ. ಮಳೆ, ಚಳಿಯಲ್ಲೂ ನಾವು ಸತತವಾಗಿ ಬೆವರು ಸುರಿಸುತ್ತಿದ್ದೆವು.

ನನ್ನ ಒಂದು ಬ್ಯಾಗು ಹೆಗಲನ್ನೇರಿ ಗಟ್ಟಿಯಾಗಿ ಕುಳಿತಿತ್ತಾದರೂ ಮತ್ತೊಂದನ್ನು ಕೈಯಲ್ಲೇ ಹಿಡಿದುಕೊಂಡಿದ್ದೆ. ಒಂದು ಕೈಯಲ್ಲಿ ಬ್ಯಾಗು, ಮತ್ತೊಂದು ಕೈಯಲ್ಲಿ ಕೋಲನ್ನು ಹಿಡಿದು ಇಳಿಜಾರಿನಲ್ಲಿ, ಕೆಸರಿನ ನಡುವೆ ನಡೆಯುವುದು ಅತ್ಯಂತ ಕಷ್ಟಕರವಾಗಿತ್ತು. ಆಗಾಗ ಕೈ ಬದಲಾಯಿಸಿದರೂ ಅದರಿಂದ ಉಪಯೋಗವೇನೂ ಆಗುತ್ತಿರಲಿಲ್ಲ. ಹೀಗೆ ಕೈ ಬದಲಿಸುವಾಗ ಒಮ್ಮೆ ಬ್ಯಾಗು ಕೈಜಾರಿ ಉರುಳತೊಡಗಿತು. ಹಿಂದಿದ್ದ ಶ್ರೀಧರ್ "ಸೂ, ಬ್ಯಾಗ್ ಹೋಯ್ತು!" ಎಂದು ಕೂಗಿದರು. ಉರುಳುತ್ತಿದ್ದ ಬ್ಯಾಗನ್ನು ನಿಸ್ಸಹಾಯಕನಾಗಿ ನೋಡುತ್ತ, ಅದರಲ್ಲಿ ಏನೇನು ಇಟ್ಟಿದ್ದೆನೆಂದು ಅಂದಾಜು ಮಾಡತೊಡಗಿದೆ. ಬೆಲೆಬಾಳುವ ವಸ್ತುಗಳೇನೂ ಇರಲಿಲ್ಲ. ಹಲವಾರು ಮೀಟರ್‌ಗಳು ಉರುಳಿದ ನಂತರ ಬ್ಯಾಗು ಗಕ್ಕನೆ ನಿಂತುಬಿಟ್ಟಿತು. ಅಲ್ಲಿಯವರೆಗೂ ನಿಂತಿದ್ದ ನಾನು ಈಗ ಅದರತ್ತ ಓಡತೊಡಗಿದೆ. ಕೆಸರು, ಪಾಚಿ, ಬಂಡೆ – ಯಾವುದೂ ನನ್ನನ್ನು ಅಡ್ಡಹಾಕಲಿಲ್ಲ. ಹುಚ್ಚು ಹಿಡಿದಂತೆ ಓಡಿಹೋಗಿ ಅದನ್ನೆತ್ತಿಕೊಂಡು ನಿಟ್ಟುಸಿರಿಟ್ಟೆ. ಹುಲ್ಲಿನ ನಡುವೆ ಆ ಬ್ಯಾಗು ಸಿಕ್ಕಿಕೊಂಡಿದ್ದು, ಯಾವುದೇ ಕ್ಷಣದಲ್ಲಿ ಹುಲ್ಲು ಕೈಕೊಡಬಹುದಿತ್ತು. ನನ್ನ ಅದೃಷ್ಟ ಚೆನ್ನಾಗಿತ್ತಾದ್ದರಿಂದ ಹುಲ್ಲು ಗಟ್ಟಿಯಾಗಿ ನಿಂತು ಆ ಬ್ಯಾಗನ್ನು ಉಳಿಸಿತ್ತು.

ಹಾಗೇ ನಡೆಯುತ್ತಾ ಸಾಗಿದವರಿಗೆ ಮುಂದೆ ಸೈನಿಕರು ಕಂಡರು. ಸೈನಿಕರು ನಿಂತಿರುವುದು ಕಂಡರೆ ಆ ಜಾಗ ದಾಟಲು ಕಷ್ಟಕರವಾಗಿದೆ ಎಂದು ಅರ್ಥ. ಬಹಳ ತಗ್ಗಾಗಿದ್ದ ಈ ಇಳಿಜಾರು ಭಯಂಕರವಾಗಿ ಕಾಣುತ್ತಿತ್ತು. ಗಟ್ಟಿಯಾಗಿ ನಮ್ಮ ಕೈಹಿಡಿದು, ಅವರತ್ತ ಎಳೆದುಕೊಂಡು, ಮತ್ತೊಬ್ಬರಿಗೆ ನಮ್ಮ ಕೈ ಹಸ್ತಾಂತರಿಸುತ್ತ ನಿಧಾನವಾಗಿ ಸೈನಿಕರು ಒಬ್ಬೊಬ್ಬರನ್ನೂ ದಾಟಿಸಿದರು. ಅಲ್ಲಿಂದ ಮುಂದೆ ಹಾದಿ ಒಂದೇ ಸಮ ಕೆಳಗಿಳಿಯುತ್ತಿದ್ದರೂ, ಪಾಚಿಯಿರಲಿಲ್ಲ. ಅಷ್ಟರಲ್ಲಿ ಮಳೆ ಕೂಡ ನಿಂತಿತ್ತು. ಸುಮಾರು ಹೊತ್ತು ಕಷ್ಟಪಟ್ಟು ಇಳಿದ ನಮಗೆ ಹೆದ್ದಾರಿ ಕಂಡಿತು. ನಮಗಿಂತ ಮುಂದೆ ಹೋಗಿದ್ದ ಸಾಧುಗಳು ಆಗಲೇ ಹೆದ್ದಾರಿಯ ಮೇಲೆ ಕುಳಿತು ವಿಶ್ರಮಿಸಿಕೊಳ್ಳುತ್ತಿದ್ದರು. ಅಂತೂ ಇಂತೂ ಆ ಕುಟುಂಬವನ್ನೂ ಕೆಳಗಿಳಿಸಿ, ನಾವೂ ಇಳಿದು ಹೆದ್ದಾರಿಯ ಮೇಲೆ ನಿಂತೆವು. ಅಲ್ಲಿದ್ದ ಸೈನಿಕನೊಬ್ಬನನ್ನು ರಸ್ತೆಯು

ಮೇಲ್ಮುಖವಾಗಿ (ಅಂದರೆ ಬದರಿನಾಥದೆಡೆಗೆ) ಎಷ್ಟು ದೂರ ಕೊಚ್ಚಿಹೋಗಿದೆಯೆಂದು ಕೇಳಿದಾಗ, ಐದು ಕಿ.ಮೀ. ಎಂದನು. ಕಾಲುದಾರಿಯಲ್ಲಿ ಬಂದ ನಾವು ಅಷ್ಟೊಂದು ದೂರ ನಡೆದಿರಲಿಲ್ಲ. ಮೊದಲ ಹಂತದ ಈ ಚಾರಣವನ್ನು ಮುಗಿಸಲು ನಾವು ತೆಗೆದುಕೊಂಡ ಸಮಯ ಸುಮಾರು ಮುಕ್ಕಾಲು ತಾಸು.

ಮುಂದಿನ ದಾರಿಯ ಕಠಿಣತೆಗೆ ಹೋಲಿಸಿದರೆ ನಾವು ಇಲ್ಲಿಯವರೆಗೂ ಬಂದಿದ್ದ ಕಾಲುದಾರಿಯ ಕಠಿಣತೆ ತೃಣಸಮಾನ! ಆದರೆ ಇದು ನಮಗೆ ಗೊತ್ತಿರಲಿಲ್ಲ. ನಮ್ಮ ಕಷ್ಟಗಳೆಲ್ಲ ಮುಗಿದುಹೋದವೆಂದು ಭಾವಿಸಿ, ಸೈನಿಕನನ್ನು ಮುಂದೆ ಹೋಗುವ ಬಗ್ಗೆ ವಿಚಾರಿಸಿದೆವು. ತೋರುಬೆರಳನ್ನು ನೆಲದತ್ತ ತಿರುಗಿಸಿದ ಸೈನಿಕನ ಚರ್ಯೆ ಮೊದಲು ನಮಗೆ ಅರ್ಥವಾಗಲಿಲ್ಲ. ಆದರೆ ಅಲ್ಲಿ ಬಂಡೆಗಳನ್ನು ದಾಟಿ ಕೆಳಗಿಳಿಯಬೇಕೆಂದೂ, ಅಲ್ಲಿಂದ ಮುಂದೆ ನದಿಯ ಪಕ್ಕದಲ್ಲೇ ಕಲ್ಲು, ಬಂಡೆಗಳ ಮೇಲೆ ನಡೆದು ಹೋಗಬೇಕೆಂದು ಸೈನಿಕ ಹೇಳಿದಾಗ ಜೀವ ಕೈಗೆ ಬಂದಂತಾಯಿತು. ದೂರದಲ್ಲಿ ಸಾಧುಗಳೂ ನದಿಯ ಬಗಲಲ್ಲಿ ನಡೆಯುತ್ತಿದ್ದುದು ಕಣ್ಣಿಗೆ ಬಿತ್ತು.

ಮತ್ತೊಮ್ಮೆ ಆ ಹೆಂಗಸನ್ನು ಕೆಳಗಿಳಿಸಲು ಶ್ರೀಧರ್ ಪಟ್ಟ ಕಷ್ಟ ಅಷ್ಟಿಷ್ಟಲ್ಲ. ಆಕೆ ಬೂಟನ್ನು ಸಹ ಧರಿಸಿರಲಿಲ್ಲ. ಗಂಡನೂ ಮಗನೂ ಹಿಂದೆ ಇಳಿಯುತ್ತಿದ್ದರು. ಜಯರಾಮ್ ಮತ್ತು ನಾನು – ಇಬ್ಬರೂ ಕೆಳಗಿಳಿದು ಶ್ರೀಧರ್‌ಗಾಗಿ ಕಾಯದೆ ಮುನ್ನಡೆಯತೊಡಗಿದೆವು. ಕಲ್ಲಿನ ಮೇಲೆ ನಡೆಯಲು ಆ ಹೆಂಗಸಿಗೆ ಶ್ರೀಧರ್‌ರ ಸಹಾಯ ಬೇಡವೆಂದೂ, ಹಾಗಾಗಿ ಅವರು ವೇಗವಾಗಿ ನಡೆದು ನಮ್ಮನ್ನು ಸೇರುವವರೆಂದೂ ನಮ್ಮ ಭಾವನೆ. ಅಂತೆಯೇ, ಆಕೆಯನ್ನು ಕೆಳಗಿಳಿಸಿ, ಸಮತಟ್ಟಾದ ಜಾಗ ಶುರುವಾದ ತಕ್ಷಣ ಶ್ರೀಧರ್ ಬೇಗಬೇಗನೇ ಹೆಜ್ಜೆಹಾಕುತ್ತ ನಮ್ಮನ್ನು ಬಂದು ಸೇರಿದರು. ನಮಗೂ, ಆ ಕುಟುಂಬಕ್ಕೂ ನಡುವಿನ ಅಂತರ ಹೆಚ್ಚಾಗುತ್ತಲೇ ಹೋಯಿತು.

ಅಲಕನಂದೆಗೆ ಸಮನಾಗಿ ನಾವೀಗ ನಡೆಯುತ್ತಿದ್ದೆವು. ಅಲ್ಲಲ್ಲಿ ಬಹುದೊಡ್ಡ ಬಂಡೆಗಳನ್ನು ದಾಟಬೇಕಿತ್ತು. ಕೆಲವು ಬಂಡೆಗಳಂತೂ ನದಿಗೆ ತೀರಾ ಹತ್ತಿರದಲ್ಲಿದ್ದು, ಅಲ್ಲಿಂದ ಜಾರಿದರೆ ನೇರ ನದಿಗೆ ಬೀಳುವ ಸಂಭವವಿತ್ತು. ಆದರೂ, ನದಿಯ ಪಕ್ಕದಲ್ಲಿ ನಡೆಯುವುದು ಅಂತಹ ಭೀಕರ ಸ್ಥಿತಿಯಲ್ಲೂ ಮುದ ಕೊಡುತ್ತಿತ್ತು. ಶಾಂತವಾಗಿ ಹರಿಯುತ್ತಿದ್ದ ಅಲಕನಂದೆಯ ಜುಳುಜುಳು ನಿನಾದ ಉಲ್ಲಾಸದಾಯಕವಾಗಿತ್ತು. ಆದರೆ ಆ ಆನಂದ–ಸಂತಸ ಬಹಳ ಹೊತ್ತು ಇರಲಿಲ್ಲ. ಬಂಡೆಗಳನ್ನು ದಾಟುತ್ತಲೇ, ಮತ್ತೆ ಕೆಸರುಮಯ ಹಾದಿಯಿದ್ದು, ಈ ಬಾರಿ ಮೇಲಕ್ಕೆ ಹತ್ತಬೇಕಾಗಿತ್ತು. ಪುಣ್ಯಕ್ಕೆ ಹತ್ತುವ ಹಾದಿ ಉದ್ದವಿರದೆ, ಕೇವಲ ಹತ್ತು ನಿಮಿಷಗಳು ಬೇಕಾಗುವಂತಿತ್ತು.

ಹರಸಾಹಸ ಮಾಡಿ ಹತ್ತಿಬಂದ ನಾವು ತಲೆಯೆತ್ತಿ ನೋಡಿದರೆ ಜೆ.ಪಿ. ಜಲವಿದ್ಯುತ್ ಸ್ಥಾವರದ ಹೆಲಿಪ್ಯಾಡ್‌ನ ಅಂಚಿನಲ್ಲಿ ನಿಂತಿದ್ದೆವು. ಸೈನಿಕರನೇಕರೂ, ಚಾರಣ ಮಾಡಿ ನಿತ್ರಾಣಗೊಂಡಿದ್ದ ಹಲವರೂ ಅಲ್ಲಿ ನಿಂತು ಕಾಯುತ್ತಿದ್ದರು. ಯಥೇಚ್ಛವಾಗಿ ನೀರು ಕುಡಿದು ಸುಧಾರಿಸಿಕೊಳ್ಳುತ್ತಿದ್ದ ನಮಗೆ, ಹೆಲಿಕಾಪ್ಟರ್‌ವೊಂದು ಅಲ್ಲಿ ಬಂದು ಕಾಯುತ್ತಿದ್ದ ಜನರನ್ನು ಹತ್ತಿಸಿಕೊಂಡು ಹೋದ ದೃಶ್ಯ ನೋಡಿದೊಡನೆ ಆಸೆ ಚಿಗುರೊಡೆಯಿತು. ಆದರೆ ಸೈನ್ಯಾಧಿಕಾರಿ, ಹೆಲಿಕಾಪ್ಟರ್ ಸೇವೆ ಸ್ತ್ರೀಯರಿಗೂ, ಮಕ್ಕಳಿಗೂ, ವೃದ್ಧರಿಗೂ ಮಾತ್ರವೆಂದು ಹೇಳಿ ನಮ್ಮ ಆಸೆಗೆ ತಣ್ಣೀರೆರಚಿದ. ನಮ್ಮ ಹಿಂದೆ ಬಂದ ಕುಟುಂಬದ ಹೆಂಗಸನ್ನೂ, ಆಕೆಯ ಗಂಡನನ್ನೂ ಅಲ್ಲೇ ಇರುವಂತೆ ಹೇಳಿದರು. ಮಗನಿಗೆ ಹೆಲಿಕಾಪ್ಟರ್‌ನಲ್ಲಿ ಹಾರುವ ಅದೃಷ್ಟವಿರಲಿಲ್ಲ. ಅವನು ನಮ್ಮೊಂದಿಗೆ ಸೇರಿಕೊಂಡ.

ಜೆ.ಪಿ. ಜಲವಿದ್ಯುತ್ ಸ್ಥಾವರ ಅಕ್ಷರಶಃ ನಿರ್ನಾಮವಾಗಿತ್ತು. ನದಿ ಅಲ್ಲಿದ್ದ ಅಣೆಕಟ್ಟನ್ನೂ, ಪಕ್ಕದ ದೊಡ್ಡ ಕಟ್ಟಡವನ್ನೂ ಹೊಡೆದು ಚಿಂದಿ ಮಾಡಿ ಉರುಳಿಸಿತ್ತು. ಇಷ್ಟೆಲ್ಲ ಅನಾಹುತಗಳನ್ನು ಮಾಡಿದರೂ, ತಾನೇನೂ ಮಾಡಿಲ್ಲವೆಂಬಂತೆ ದಿಕ್ಕು ಬದಲಿಸಿಕೊಂಡು ಅಣೆಕಟ್ಟಿನ ಅವಶೇಷದ ಪಕ್ಕದಲ್ಲಿ ಹರಿಯುತ್ತಿತ್ತು. ಖದೀಮ ನದಿ! ಹನ್ನೆರಡು ದಿನಗಳ ಹಿಂದೆ ನೋಡಿದ್ದ ಈ ಜಾಗವನ್ನಿಂದು ಗುರುತು ಹಿಡಿಯಲು ನಮಗೆ ಕಷ್ಟವಾಯಿತು. ರಸ್ತೆಯ ಮತ್ತೊಂದೆಡೆಯಿದ್ದ ಹೆಲಿಪ್ಯಾಡ್ ನದಿಯ ಆರ್ಭಟಕ್ಕೆ ಬಲಿಯಾಗದೆ ನಿಂತಿದ್ದು, ಅದೀಗ ರಕ್ಷಣಾಕಾರ್ಯದಲ್ಲಿ ಬಳಕೆಯಾಗುತ್ತಿತ್ತು.

ವಿರಮಿಸುತ್ತಾ ಹೆಚ್ಚು ಸಮಯ ಹಾಳುಮಾಡುವಂತಿರಲಿಲ್ಲ. ಕತ್ತಲಾಗುವ ಮೊದಲು ಗೋವಿಂದಘಾಟ್ ತಲುಪಬೇಕೆಂದರೆ ಇನ್ನೂ ಬಹಳ ದೂರ ಹೋಗಬೇಕಿತ್ತು. ಈ ಬಾರಿ ಶ್ರೀಧರ್ ಮುಂದಾಳತ್ವ ವಹಿಸಿಕೊಂಡು ಮುಂದೆ ಹೊರಟರು. ಜಯರಾಮ್, ನಾನು ಮತ್ತು ನಮ್ಮ ಜತೆಗೂಡಿದ್ದ ಆ ಯುವಕ ಅವರನ್ನು ಅನುಸರಿಸುತ್ತ ಹಿಂದೆ ನಡೆದೆವು. ಮೊದಮೊದಲು ನದಿತೀರದ ಬಂಡೆಗಳ ಮೇಲೆ ನಡೆಯಬೇಕಾಯಿತಾದರೂ ನಂತರದ ಹಾದಿ ಕಷ್ಟಕರವಾಗುತ್ತಲೇ ಹೋಯಿತು. ಜೊತೆಗೆ ಮಾರ್ಗ ಹುಡುಕುವುದು ಸಹ ಸುಲಭವಾಗಿರಲಿಲ್ಲ. ಸೇನೆಯವರು ಅಲ್ಲಲ್ಲಿ ಕಲ್ಲುಗಳನ್ನು ಒಂದರ ಮೇಲೊಂದರಂತೆ ಪೇರಿಸಿಟ್ಟು ಮಾರ್ಗವನ್ನು ಸೂಚಿಸುವ ಕೆಲಸವನ್ನು ಮಾಡಿದ್ದರಾದರೂ, ನದಿತೀರದ ಎಲ್ಲ ಕಲ್ಲುಗಳೂ ಒಂದೇ ಬಣ್ಣವಿದ್ದು, ನಮಗೆ ಯಾವುದು ಮಾರ್ಗಸೂಚಿ ಕಲ್ಲುಗಳು ಎಂಬುದು ಹತ್ತಿರ ಹೋಗುವವರೆಗೂ ಗೊತ್ತಾಗುವಂತಿರಲಿಲ್ಲ.

ಒಂದೆಡೆ ದಾರಿ ಇದ್ದಕ್ಕಿದ್ದಂತೆ ಮುಗಿದುಹೋದಂತೆ ಅನಿಸಿತು! ಸಾವಿರಾರು ಕಲ್ಲುಗಳ ಸಾಮ್ರಾಜ್ಯದಲ್ಲಿ ನಾವು ಆಗಂತುಕರಂತೆ ನಿಂತಿದ್ದೆವು. ಕಲ್ಲುಗಳ ಗಾತ್ರವಷ್ಟೇ ವ್ಯತ್ಯಾಸವಿದ್ದು, ಈಗಂತೂ ಮಾರ್ಗಸೂಚಿ

ಕಲ್ಲುಗಳನ್ನು ಗುರುತಿಸಲು ಸಾಧ್ಯವೇ ಆಗಲಿಲ್ಲ. ಆಚೀಚೆ ನೋಡಿದರೂ ನದಿ, ಪರ್ವತ ಮಾತ್ರವೇ ಇದ್ದು, ಬೇರಾವ ಹಾದಿಯೂ ಇದ್ದಂತಿರಲಿಲ್ಲ. ಹೀಗೇ ಪರದಾಡುತ್ತಾ ನಿಂತಿದ್ದ ನಮ್ಮೆದುರು ಸಾಧುವೊಬ್ಬ ಸುಮಾರು ಮೂವತ್ತು ಅಡಿ ಎತ್ತರದ ಭಾಗದಿಂದ ಬಂಡೆಯನ್ನಿಳಿದು ಬರತೊಡಗಿದ. ಸೇತುವೆಗೆ ಹೋಗಲು ಯಾವ ಹಾದಿ ಎಂದು ಕೇಳಿದ್ದಕ್ಕೆ, ತಾನಿಳಿದುಬರುತ್ತಿದ್ದ ಕಲ್ಲಿನ ಗೋಡೆಯನ್ನೇ ಹತ್ತಿ ಮುಂದುವರಿದರೆ ಸೇತುವೆ ಸಿಗುವುದೆಂದು ಹೇಳಿದ. ಮೂವತ್ತು ಅಡಿ ಹತ್ತುವುದು ಹೇಗೆ! ಶ್ರೀಧರ್ ಮೊದಲು ಹತ್ತಲು ಪ್ರಾರಂಭಿಸಿದರು. ಅಲ್ಲಿದ್ದ ಬಂಡೆಗಳು ಮೃದುವಾಗಿದ್ದು, ಹಿಡಿದುಕೊಂಡು ಹತ್ತಲು ಸರಿಯಾದ ಜಾಗಗಳಿರಲಿಲ್ಲ. ಶ್ರೀಧರ್ ಹತ್ತುವಾಗ ಎಷ್ಟೋ ಕಲ್ಲುಗಳು ಅವರ ಹಿಂದೆಯೇ ಇದ್ದ ಜಯರಾಮನ ಅಕ್ಕಪಕ್ಕದಲ್ಲೇ ಬೀಳುತ್ತಿದ್ದವು. ಕಲ್ಲಿನ ಈ ಗೋಡೆ ಗಟ್ಟಿಯಾಗಿರಲೇ ಇಲ್ಲ. ಸುಮ್ಮನೆ ಒಂದರ ಮೇಲೊಂದು ಬಂಡೆಗಳನ್ನು ಜೋಡಿಸಿದಂತಿತ್ತು. ಮೇಲಿನ ಬಂಡೆ ಉರುಳಿತೆಂದರೆ ಕೆಳಗಿದ್ದ ಎಲ್ಲವೂ ನದಿಯ ಪಾಲಾಗುತ್ತಿದ್ದವು. ನಮ್ಮ ಅನಿಸಿಕೆಯ ಪ್ರಕಾರ ಈ ಗೋಡೆಯನ್ನೇರಿದರೆ ಸಾಕು, ಸೇತುವೆ ಕಣ್ಣಿಗೆ ಬೀಳುತ್ತದೆ. ಸಾಹಸದಿಂದ ನಾಲ್ವರೂ ಗೋಡೆಯ ಮೇಲೇರಿದರೆ ಮತ್ತೊಂದು ಆಘಾತ! ಸೇತುವೆ ಕಣ್ಣಿಗೆ ಬೀಳುವುದಿರಲಿ, ದಾರಿ ಈಗ ನೇರವಾಗಿ ಕಾಡಿನೊಳಗೇ ಹೋಗುತ್ತಿತ್ತು!

ಕಾಡಿನ ಮಾರ್ಗದಲ್ಲೂ ಕಲ್ಲುಗಳ ಮೇಲೆಯೇ ನಡೆಯಬೇಕಾಗಿತ್ತು. ಆದರೆ ಇಲ್ಲಿನ ಕಲ್ಲುಗಳ ಮೇಲೆ ಅದೆಷ್ಟೋ ವರ್ಷದಿಂದ ಬೆಳೆದುನಿಂತಿದ್ದ ಪಾಚಿಹುಲ್ಲು ಆಗಂತುಕರನ್ನು ಜಾರಿ ಬೀಳುವಂತೆ ಮಾಡುವಲ್ಲಿ ಸಶಕ್ತರಾಗಿದ್ದವು. ಶ್ರೀಧರ್‌ರನ್ನೇ ಹಿಂಬಾಲಿಸಿ ಹೋಗುತ್ತಿದ್ದರೂ, ಅವರು ಅದೆಲ್ಲಿ ಕಾಲಿಟ್ಟರು ಎಂದು ತಿಳಿಯುತ್ತಲೇ ಇರಲಿಲ್ಲ. ತಗ್ಗಿನ ಪ್ರದೇಶದಲ್ಲೊಂದೆಡೆ ಜಯರಾಮ್ ಬಿದ್ದ! ಅವನು ಬಿದ್ದ ರಭಸ ಭೀಕರವಾಗಿತ್ತು. ಅದೃಷ್ಟ ಚೆನ್ನಾಗಿತ್ತಾದ್ದರಿಂದ ಮುಖ ಕಲ್ಲಿಗೆ ಹೊಡೆಯದೆ ಉಳಿಯಿತು. ಮತ್ತೊಮ್ಮೆ ನನ್ನ ಕಾಲು ಎರಡು ಬಂಡೆಗಳ ನಡುವೆ ಸಿಕ್ಕಿಕೊಂಡಿತು. ಬಂಡೆಯ ಮೇಲೆ ಕುಳಿತು ಎಳೆದುಕೊಳ್ಳೋಣವೆಂದರೆ ಪಾಚಿಯಿಂದ ಜಾರುತ್ತಿದ್ದೆ. ಮತ್ತೊಂದು ಕಾಲು ಸಹ, ಗಟ್ಟಿಯಿರದ ನೆಲದ ಮೇಲಿತ್ತು. ಬೂಟು ಬಂಡೆಯ ಇಕ್ಕಟ್ಟಿನ ಸ್ಥಳದಲ್ಲಿ ಭದ್ರವಾಗಿ ಕಚ್ಚಿಕೊಂಡಿತ್ತು. ಬೂಟನ್ನು ಮರೆತು ಕಾಲನ್ನಷ್ಟೇ ಎಳೆದುಕೊಳ್ಳುವಂತೆಯೂ ಇರಲಿಲ್ಲ! ಅಷ್ಟಕ್ಕೂ ನಮ್ಮ ಚಾರಣವು ಸೇತುವೆ ಮುಗಿದ ಮೇಲೆ ಮುಗಿಯುತ್ತಿರಲಿಲ್ಲವಲ್ಲ! ಜಯರಾಮನ ಸಹಾಯದಿಂದಲಷ್ಟೇ ಕಾಲು, ಬೂಟು – ಎರಡೂ ಕೊರಕಲಿನಿಂದ ಹೊರಗೆ ಬಂದದ್ದು.

ಇವೆಲ್ಲ ಸಾಹಸಗಳ ನಂತರ ಕಾಡಿನ ನಡುವೆ ITBPಯ ಯೋಧನೊಬ್ಬನನ್ನು ನೋಡಿದೆವು. ಅರಣ್ಯದ ನಡುವೆ ಒಬ್ಬನೇ ನಿಂತಿದ್ದ ಯೋಧ ನಮ್ಮನ್ನೂ, ನಮ್ಮ ವೇಷಭೂಷಣಗಳನ್ನು ನೋಡುತ್ತಲೇ ನಾವು ಚಾರಣಕ್ಕೆ ಪೂರ್ವಸಿದ್ಧತೆ ಮಾಡಿಕೊಂಡು ಬಂದಿರುವವರೆಂದು ಅರಿತ. "ನಿಮ್ಮಲ್ಲಿ ಟಾರ್ಚ್‌ಗೆ ಹಾಕುವ

ಬ್ಯಾಟರಿಯಿದೆಯೇ?" ಎಂದು ಕೇಳಿದ. ನಮ್ಮಲ್ಲಿ ಟಾರ್ಚ್ ಇದ್ದರೂ, ಅದು ಡೈನಮೋ ರೀತಿಯಲ್ಲಿ ಕೆಲಸಮಾಡುತ್ತಿತ್ತು. ಬ್ಯಾಟರಿಯಿಲ್ಲ, ಟಾರ್ಚನ್ನೇ ಕೊಡುತ್ತೇವೆಂದು ಹೇಳಿದೆವು. ಮೊದಲು ಬೇಡವೆಂದರೂ, ನಂತರ ಸ್ವೀಕರಿಸಿದ ಯೋಧ, ತಾನು ರಾತ್ರಿಯಿಡೀ ಅಲ್ಲೇ ಕಳೆಯಬೇಕೆಂದೂ, ಇರುಳಲ್ಲಿ ಯಾರಾದರೂ ಪಾದಚಾರಿಗಳು ಬಂದಲ್ಲಿ ಅವರಿಗೆ ಮಾರ್ಗ ತೋರಿಸಬೇಕೆಂದೂ ಹೇಳಿದ. ದಟ್ಟ ಕಾಡಿನ ಪ್ರದೇಶವದು. ಹಿಮಾಲಯ ಪರ್ವತಶ್ರೇಣಿ ಹುಟ್ಟಿದಂದಿನಿಂದ ನಮ್ಮನ್ನೂ, ಸೇನೆಯವರನ್ನೂ ಹೊರತುಪಡಿಸಿ ಆ ಕಾನನದಲ್ಲಿ ಮತ್ತೊಬ್ಬ ಮಾನವ ಕಾಲಿಟ್ಟ ಸುಳಿವೂ ಇರಲಿಲ್ಲ. ಅದರಲ್ಲೂ, ಈ ಜಾರಿಕೆಯ ಬಂಡೆಯ ಹಾದಿ ಇಂದಷ್ಟೇ ಚಾಲೂ ಆಗಿತ್ತು. ನಿನ್ನೆಯ ದಿವಸ ಬೇರೆಲ್ಲಿಂದಲೋ ನದಿಯನ್ನು ಹಗ್ಗದ ಸೇತುವೆಯ ಮೂಲಕ ದಾಟುವ ವ್ಯವಸ್ಥೆಯಿತ್ತಂತೆ. ಆದರೆ ಅದೂ ಕೊಚ್ಚಿಹೋಗಿತ್ತು. ಹೀಗಾಗಿ ಆ ಬಂಡೆಗಳ ಮೇಲೆ ಕಾಲಿಟ್ಟ ಮೊದಲ ಮಾನವರು ನಾವಾಗಿದ್ದೆವು (ನೀಲ್ ಆರ್ಮ್‌ಸ್ಟ್ರಾಂಗ್‌ಗೂ ನಮಗೂ ಇದ್ದ ಒಂದೇ ವ್ಯತ್ಯಾಸವೆಂದರೆ, ಅವನು ಚಂದ್ರನ ಮೇಲಿನ ಬಂಡೆಯನ್ನು ಆಯ್ದುಕೊಂಡ, ವಿಧಿ ನಮ್ಮನ್ನು ಭೂಮಿಯ ಮೇಲಿನ ಬಂಡೆಯ ಮೇಲೆ ಕಾಲಿರಿಸುವಂತೆ ಮಾಡಿತ್ತು!). ಟಾರ್ಚನ್ನು ಅವನ ಕೈಗಿಟ್ಟು ಸೇತುವೆಗಿನ್ನೆಷ್ಟು ದೂರವೆಂದು ಕೇಳಿದೆವು. ಕಾಡಿನ ಮಾರ್ಗದ ಅಂತ್ಯದಲ್ಲಿ ತಗ್ಗು ರಸ್ತೆಯಿದ್ದು, ಅಲ್ಲಿ ಸೈನಿಕರಿದ್ದಾರೆ, ಅದರಾಚೆಗೆ ಸೇತುವೆಯಿದೆ ಎಂದು ತಿಳಿಸಿದ. ಮತ್ತೆ ಮುಂದುವರಿದೆವು.

ಸೈನಿಕ ಹೇಳಿದಂತೆ, ಕಾಡುಮಾರ್ಗದಲ್ಲಿ ನಡೆದೆವು. ದುರ್ಗಮ ಅರಣ್ಯವದು! ರಾತ್ರಿಯ ವೇಳೆಯಲ್ಲಿ ಇಲ್ಲಿಗೆ ಬರುವವರು ತಲೆ ಸರಿಯಿಲ್ಲದವರೇ ಆಗಿರಬೇಕು. ಜೊತೆಗೆ ಯಾವ ಪ್ರಾಣಿ ಯಾವಾಗ ದಾಳಿ ಮಾಡುವುದೋ ಗೊತ್ತಿರುವುದಿಲ್ಲ. ನಮ್ಮನ್ನು ಹೊರತುಪಡಿಸಿ ಮಾನವಜನಾಂಗದ ಮತ್ತೊಂದು ಜೀವಿ ಇಲ್ಲಿ ಕಾಲಿಟ್ಟಿಲ್ಲ, ಮುಂದೆ ಕಾಲಿಡುವುದೂ ಇಲ್ಲ. ಅಂತಹ ಜಾಗದಲ್ಲೂ ಪಹರೆಯಿರಬೇಕಿತ್ತು ಆ ಯೋಧ! ಅವನ ವಿಚಾರವಾಗಿ ಕರುಣೆ ಮೂಡಿತು. ಅದೇ ಗುಂಗಿನಲ್ಲಿ ನಡೆಯುತ್ತಿರಲು, ಮುಂದೆ ಸೈನಿಕರ ಸಮೂಹವಿತ್ತು. ಅಲ್ಲಿಗೆ ಮತ್ತೊಂದು ಕಠಿಣ ಇಳಿಜಾರು ಎದುರಾಯಿತು.

ಈ ಇಳಿಜಾರು ನಿಜಕ್ಕೂ ಭಯಾನಕವಾಗಿತ್ತು. ಸಾವಿನ ಭಯವಿಲ್ಲದಿದ್ದರೂ, ಇದನ್ನು ದಾಟುವುದಕ್ಕೆ ಸೇನೆಯವರ ತರಬೇತಿ ಪಡೆದವರಿಂದ ಮಾತ್ರ ಸಾಧ್ಯ! ಕೆಲವೆಡೆ ಮರದ ಬೇರುಗಳ ಮೇಲೆ ಒಂದೇ ಒಂದು ಪಾದವನ್ನಿಟ್ಟು ಸಮತೋಲನ ಕಳೆದುಕೊಳ್ಳದೆ ಮುನ್ನುಗ್ಗಬೇಕಿತ್ತು. ನಂತರ ಕೆಸರು ತುಂಬಿದ ಜಾರುಬಂಡೆಯಂತಹ ದಾರಿ. ಹೆಜ್ಜೆಹೆಜ್ಜೆಗೂ ಯೋಧರು ನಮ್ಮ ಸಹಾಯಕ್ಕಾಗಿಯೇ ನಿಂತಿದ್ದರು. ನನ್ನ ಕೈಲಿದ್ದ ಬ್ಯಾಗನ್ನು ಕಸಿದುಕೊಂಡ ಸೈನಿಕನೊಬ್ಬ ಅದನ್ನು ಕೆಳಗೆ ಮತ್ತೊಬ್ಬನಿಗೆ ದಾಟಿಸಿದ. ನಾನು ಕೆಳಗಿಳಿಯಲು ಆರಂಭಿಸುವ ಮೊದಲೇ ಪಾಪಿ ಬ್ಯಾಗು ಕೆಳಗೆ ಹೋಗಾಗಿತ್ತು. ಯೋಧರ ನೆರವಿನಿಂದ,

ಭಯವನ್ನು ಮೆಟ್ಟಿನಿಂತು ಕಷ್ಟಪಟ್ಟು ಕೆಳಗಿಳಿದು ಬಂದರೆ ಬ್ಯಾಗು ಮಂಗಮಾಯ! ಗಾಬರಿಯಿಂದ ಅರಣ್ಯದ ಅಂಚಿನಲ್ಲಿ ಹುಡುಕಾಡುತ್ತಿದ್ದಾಗ ಜಯರಾಮ್ ಕೂಗಿದ್ದು ಕೇಳಿಸಿತು. "ಸೂ, ನಿನ್ನ ಬ್ಯಾಗ್ ನನ್ನ ಹತ್ತಿರ ಇದೆ. ಬಾ ಈ ಕಡೆ". ಅವನ ದನಿ ತೇಲಿಬಂದ ದಿಕ್ಕಿಗೆ ಹೋದೆ.

ನನ್ನೆದುರಿಗೆ ಸೇತುವೆ ನಿಂತಿತ್ತು. ಸೇತುವೆಯ ಬಳಿ ಹೋಗಲು ಹದಿನೈದು ಅಡಿ ಎತ್ತರದಿಂದ ಹಾರಬೇಕಿತ್ತಾದರೂ, ಅಲ್ಲಿ ಸೇನೆಯವರು ಪುಟ್ಟ ಏಣಿಯೊಂದನ್ನು ಒರಗಿಸಿಟ್ಟು ನಾವು ಮಂಗಗಳಾಗದಂತೆ ಮಾಡಿದ್ದರು. ಮರದ ತಾತ್ಕಾಲಿಕ ಸೇತುವೆಯನ್ನು ನಿರ್ಮಿಸಿದ್ದ ಸೇನೆಯವರು ನಾಲ್ಕು ದಪ್ಪವಾದ, ಬಲವಾದ ಹಗ್ಗಗಳಿಂದ ಅದು ಅಲುಗಾಡದಂತೆ ಬಂಡೆಗಳಿಗೆ ಕಟ್ಟಿ ಬಂಧಿಸಿದ್ದರು. ಇಡೀ ಚಾರಣದಲ್ಲಿ ನದಿ ದಾಟುವ ಕೆಲಸವೊಂದೇ ಅತ್ಯಂತ ಸುಲಭವಾಗಿದ್ದು – ಅದರ ಮೇಲೆ ನಡೆದು ಹೋಗುವುದೊಂದೇ ನಾವು ಮಾಡಬೇಕಿದ್ದ ಕೆಲಸ!

ಹಿಂದಿನ ದಿನ ಜೆ.ಪಿ. ಹೆಲಿಪ್ಯಾಡ್‌ನಿಂದ ಜನರನ್ನು ಹೊತ್ತೊಯ್ಯುತ್ತಿದ್ದ ಹೆಲಿಕಾಪ್ಟರ್ ಅವರನ್ನು ಜೋಶೀಮಠ ತಲುಪಿಸುತ್ತಿತ್ತಂತೆ. ಇಂದು ಹೆಚ್ಚು ಜನರಿದ್ದ ಕಾರಣ, ಅವರನ್ನೆಲ್ಲ ನದಿಯ ದಡದಲ್ಲಿ, ಸೇತುವೆಯಂಚಿನಲ್ಲೇ ಇಳಿಸುವ ಕೆಲಸವನ್ನಷ್ಟೇ ಹೆಲಿಕಾಪ್ಟರ್ ಮಾಡುತ್ತಿತ್ತು. ಹಾಗಾಗಿ ನಮ್ಮೊಂದಿಗೆ ಬಂದಿದ್ದ ಯುವಕನ ತಂದೆ–ತಾಯಿ ಅಲ್ಲೇ ನಿಂತಿದ್ದರು. ಅವರನ್ನು ಸೇರಿಕೊಂಡ ಯುವಕ ನಮ್ಮಿಂದ ಬೇರ್ಪಟ್ಟ.

ಸೇತುವೆಯನ್ನು ದಾಟಿದ ಕೂಡಲೇ ಮತ್ತೊಂದು ಕಷ್ಟಕರವಾದ ಗುಡ್ಡವನ್ನೇರಬೇಕಿತ್ತು. ನದಿಗೆ ತೀರಾ ಪಕ್ಕದಲ್ಲೇ ಇದ್ದ ನೂರಾರು ಅತಿದೊಡ್ಡ ಬಂಡೆಗಳ ಸಮೂಹ ಈ ಗುಡ್ಡ. ಪ್ರತಿಯೊಂದು ಬಂಡೆಯ ಮೇಲೂ ಸೈನಿಕರು ಸಜ್ಜಾಗಿ ನಿಂತಿದ್ದರು. ಎಲ್ಲೆಡೆ ಹಗ್ಗ ಕಟ್ಟಿ, ಜನ ಅದನ್ನು ಹಿಡಿದುಕೊಂಡು ಹತ್ತುವಂತೆ ವ್ಯವಸ್ಥೆ ಮಾಡಿದ್ದರು. ಆದರೂ ಬಂಡೆಗಳ ಮೇಲೆ ನಿಂತರೆ ತಲೆತಿರುಗಿ ಬರುತ್ತಿತ್ತು. ಒಮ್ಮೆ ಬಂಡೆಯೊಂದರ ಮೇಲೆ ನಿಂತು ಮುಂದಿದ್ದವ ಮೇಲೇರಲು ಕಾಯುತ್ತಿದ್ದಾಗ, ಹಿಂದಿನಿಂದ ಯಾರೋ ನನ್ನನ್ನು ಎಳೆದರು. ತಿರುಗಿ ನೋಡಿದರೆ ಯಾವನೋ ಮೂರ್ಖಶಿಖಾಮಣಿ! ಹತ್ತಲು ಸರಿಯಾಗಿ ಬಾರದೆ, ಗಟ್ಟಿಯಾಗಿ ಹಿಡಿಯಲು ಏನೂ ವಸ್ತು ಸಿಗದೆ ಈ ಮುಠ್ಠಾಳ ನನ್ನನ್ನೇ ಹಿಡಿದೆಳೆದಿದ್ದ! ಆಯತಪ್ಪಿ ಬಿದ್ದಿದ್ದರೆ ಅಲಕನಂದೆ ನನ್ನನ್ನು ತನ್ನೊಡಲಲ್ಲಿ ಅವಿತಿಟ್ಟುಕೊಂಡುಬಿಟ್ಟಿರುತ್ತಿದ್ದಳು! ನನ್ನ ಪ್ರಾಣಕ್ಕೆ ಸಂಚಕಾರ ತಂದಿದ್ದ ಆ ವ್ಯಕ್ತಿ ನನ್ನ ಬಯ್ಗುಳಕ್ಕೂ ತುತ್ತಾದ.

ಬಂಡೆಗಳ ಗುಡ್ಡವೇರುತ್ತಿದ್ದಂತೆ ಅಲ್ಲಿ ಹೆದ್ದಾರಿಯ ಒಂದು ತುಣುಕು ಸ್ಥಿರವಾಗಿ ನಿಂತಿದ್ದು ಕಂಡುಬಂತು. ಅಲ್ಲಿ ಸೇನೆಯವರೂ, ಅರೆಸೇನಾಪಡೆಯ ಸೈನಿಕರೂ, ಮತ್ತಿತರ ರಕ್ಷಣಾದಳದವರೂ ಇದ್ದು, ತಿಂಡಿ–ಪಾನೀಯಗಳ ವ್ಯವಸ್ಥೆ ಮಾಡಿದ್ದರು. ನಮ್ಮಲ್ಲಿದ್ದ ನೀರಿನ ದಾಸ್ತಾನು ಯಾವಾಗಲೋ ಮುಗಿದಿದ್ದು, ಬಾಯಾರಿಕೆ ನನ್ನನ್ನು ಹಿಂಸಿಸುತ್ತಿತ್ತು. ತೀವ್ರವಾಗಿ ಬೆವರು ಸುರಿಸಿ ಶರೀರದಲ್ಲಿದ್ದ ನೀರಿನ ಅಂಶವೆಲ್ಲವೂ ಮಾಯವಾಗಿದ್ದಂತೆ ಭಾವನೆಯುಂಟಾಗಿತ್ತು. ನೀರು ಕಂಡೊಡನೆಯೇ ಓಡಿ ಹೋದೆ. ಒಂದಾದ ನಂತರ ಮತ್ತೊಂದು ಲೋಟ ನೀರು ಕುಡಿಯುತ್ತಿದ್ದ ನನ್ನನ್ನು ನೋಡಿ, ನೀರು ಕೊಡುತ್ತಿದ್ದವನು ಮಂದಹಾಸ ಬೀರುತ್ತಿದ್ದ. ನನ್ನ ಒದ್ದೆ ಬಟ್ಟೆಗಳನ್ನು ನೋಡಿದ ಅವನಿಗೆ ನನ್ನ ಪರಿಸ್ಥಿತಿ ಅರ್ಥವಾಗಿತ್ತೇನೋ! ನೀರು ಕುಡಿದು ಸುಸ್ತಾಗಿ ರಸ್ತೆಯ ಮೇಲೇ ಕೆಲಕಾಲ ಬಿದ್ದುಕೊಂಡೆವು. ಒಂದಷ್ಟು ಗ್ಲೂಕೋಸ್ ಪುಡಿಯನ್ನು ಬಾಯಿಗೆ ಹಾಕಿಕೊಂಡು ಆಗಸವನ್ನು ನೋಡುತ್ತ ಮಲಗಿಕೊಂಡೆವು.

ಆಗ ಸಮಯ ಐದೂವರೆಯಾಗಿತ್ತೆಂದು ತೋರುತ್ತದೆ, ನಮ್ಮಲ್ಲಿ ಯಾರೂ ಗಡಿಯಾರವನ್ನು ಕಟ್ಟಿಕೊಂಡಿರಲಿಲ್ಲ. ಕೆಲಸ ಮಾಡುವುದಿಲ್ಲವೆಂದು ಮೊದಲೇ ಗೊತ್ತಿದ್ದರಿಂದ ಮೊಬೈಲ್‌ಗಳನ್ನೂ ಆಫ್ ಮಾಡಿ ಇಟ್ಟಿದ್ದೆವು. ರಕ್ಷಣಾದಳದವರು ನಮ್ಮಲ್ಲಿಗೆ ಬಂದು, ಗೋವಿಂದಘಾಟ್‌ಗೆ ಹೋಗಬಾರದೆಂದೂ, ಅದಕ್ಕಿಂತ ಮುಂಚೆಯೇ ಸಿಗುವ ಊರಾದ ಪಾಂಡುಕೇಶ್ವರದಲ್ಲೇ ರಾತ್ರಿ ಕಳೆಯಬೇಕೆಂದೂ ಸೂಚಿಸಿದರು. ಅದಕ್ಕೊಪ್ಪಿದ ನಾವು ಅಲ್ಲಿಂದ ಹೊರಟು ಮತ್ತೆ ಇಳಿದು–ಹತ್ತಿ ಮಾಡಿ, ಲಂಬಾಗಡ್ ಎಂಬ ಹಳ್ಳಿಯನ್ನು ಮುಟ್ಟಿದೆವು. ಪ್ರವಾಹದಲ್ಲಿ ಲಂಬಾಗಡ್ ಊರು ಭಾಗಶಃ ಕೊಚ್ಚಿಹೋಗಿತ್ತು. ಶಾಲೆಯ ಕಟ್ಟಡವೊಂದರ ಅರ್ಧಭಾಗವಷ್ಟೇ ಇದ್ದು, ದೃಶ್ಯ ಭೀಕರವಾಗಿತ್ತು. ಸ್ಥಳೀಯ ಜನರು ಅನೇಕರು ಹಳ್ಳಿಯಿಂದ ಹೊರಟುಹೋಗಿದ್ದರೆಂದು ಕಾಣುತ್ತದೆ, ಹಳ್ಳಿಯಲ್ಲಿ ಹೆಚ್ಚಾಗಿ ಜನ ಕಣ್ಣಿಗೆ ಬೀಳಲಿಲ್ಲ. (ಅದು ಲಂಬಾಗಡ್ ಊರೆಂದೂ ಅದರ ಮೂಲಕ ನಡೆದು ಹೋದಾಗ ಗೊತ್ತಾಗಿರಲಿಲ್ಲ. ನಂತರ ತಿಳಿದುಬಂತು). ಅಲ್ಲಿಂದ ಒಂದೇ ಸಮನೆ ಗುಡ್ಡಗಳನ್ನೇರಿ, ನಿರಂತರವಾಗಿ ನಡೆಯುತ್ತಿದ್ದೆವಾದರೂ, ದಾರಿ ಮುಗಿಯುವಂತೆಯೇ ತೋರುತ್ತಿರಲಿಲ್ಲ. ಪುಣ್ಯಕ್ಕೆ ಹಾದಿಯಲ್ಲಿ ವಿರುದ್ಧ ದಿಕ್ಕಿನಿಂದ ಬರುತ್ತಿದ್ದ ಸ್ಥಳೀಯನೊಬ್ಬ ಸಿಕ್ಕಿದ. ಪಾಂಡುಕೇಶ್ವರ ಇನ್ನು ದೂರವಿಲ್ಲವೆಂದೂ, ನಾವು ಕಡೆಯ ಗುಡ್ಡದ ತುದಿಯಲ್ಲಿದ್ದು, ಅಲ್ಲಿಂದ ಇಳಿದು ಹೋದರೆ ಹೆದ್ದಾರಿ ಸಿಕ್ಕಿ, ಒಂದೂವರೆ ಕಿ.ಮೀ. ನಡೆದರೆ ಪಾಂಡುಕೇಶ್ವರ ತಲುಪುತ್ತೇವೆಂದೂ ಹೇಳಿದ.

ಹೊರನೋಟಕ್ಕೆ ಬೆಳಕಿರುವಂತೆ ಕಂಡರೂ, ಕಾಡಿನ ರಸ್ತೆಯಲ್ಲಿ ಮಬ್ಬು ಬೆಳಕಿತ್ತು. ಇನ್ನೊಂದು ಅರ್ಧ ಗಂಟೆಯೊಳಗಾಗಿ ಸಂಪೂರ್ಣ ಕತ್ತಲಾಗುವುದು ಖಚಿತವಾಗಿತ್ತು. ಅಷ್ಟರಲ್ಲಿ ನಾವು ಈ ಕಾಡಿನ ಮಾರ್ಗದಿಂದ ಹೊರಬೀಳದಿದ್ದರೆ ತೊಂದರೆಯಲ್ಲಿ ಸಿಲುಕಿಕೊಳ್ಳುತ್ತಿದ್ದೆವು. ಇದನ್ನರಿತ ಶ್ರೀಧರ್ ಅತ್ಯಂತ

ವೇಗವಾಗಿ ಹೆಜ್ಜೆಹಾಕುತ್ತ ಮುಂದೆ ಹೋದರು. ಜಯರಾಮ್, ನಾನು ಇಬ್ಬರೂ ಹಿಂದೆ ಉಳಿದುಬಿಟ್ಟೆವು. ವಾಸ್ತವವಾಗಿ ಅವರು ನಮ್ಮಿಂದ ಕೇವಲ ಇಪ್ಪತ್ತು ಹೆಜ್ಜೆ ಮುಂದಿದ್ದರಷ್ಟೇ, ಆದರೂ ಕಾಡಿನ ಅಂಕುಡೊಂಕಾದ ರಸ್ತೆಯಲ್ಲಿ ಅವರು ಕಣ್ಣಿಗೆ ಬೀಳುತ್ತಲೇ ಇರಲಿಲ್ಲ. ಗಾಬರಿಯಾಗಿ ನಾವು ಕೂಗು ಹಾಕಿದರೆ ಉತ್ತರವಾಗಿ ಅವರ ದನಿ ಕೇಳುತ್ತಿತ್ತೇ ಹೊರತು ವ್ಯಕ್ತಿ ಮಾತ್ರ ಕಾಣಿಸುತ್ತಿರಲಿಲ್ಲ. ಕಡೆಗೊಮ್ಮೆ, "ಹೆದ್ದಾರಿ ಕಾಣಿಸುತ್ತಿದೆ ಇಲ್ಲಿ, ಇನ್ನು ಯಾವುದೇ ಯೋಚನೆಯಿಲ್ಲ" ಎಂದು ಶ್ರೀಧರ್ ಕೂಗು ಹಾಕಿದರು. ಗುಡ್ಡದ ಮಾರ್ಗದ ಕಡೆಯ ತಿರುವಿನಲ್ಲಿ ನಿಂತಾಗ ಹೆದ್ದಾರಿ ಕಪ್ಪುಹಾವಿನಂತೆ ಮೈಚಾಚಿಕೊಂಡು ನಿಂತಿರುವುದು ಕಂಡುಬಂತು. ಭೀತಿಯೆಲ್ಲ ಮಾಯವಾಗಿ ಈಗ ಧೈರ್ಯ ಬಂದಿತ್ತು. ಅಂದು ದಾಟಬೇಕಿದ್ದ ಕೊನೆಯ ಗುಡ್ಡವನ್ನೂ ದಾಟಿಯಾಗಿತ್ತು.

ರಸ್ತೆಯ ಮೇಲೆ ಕಾಲಿಟ್ಟೊಡನೆಯೇ ಝರಿಯೊಂದು ಹರಿಯುತ್ತಿದ್ದುದು ಕಣ್ಣಿಗೆ ಬಿತ್ತು. ನನ್ನ ಬೇತಾಳಗಳೆಲ್ಲವನ್ನೂ (ಎರಡೂ ಬ್ಯಾಗುಗಳು!) ನೆಲದ ಮೇಲೆ ಬಿಸಾಡಿ, ಹಿಂದೆಮುಂದೆ ನೋಡದೆ ಝರಿಯ ನೀರಿಗೆ ಬಾಯಿ ಹಾಕಿದೆ. "ಲೋ, ಆಗಲೇ ನಿನ್ನ ಗಂಟಲು ಪೂರ್ತಿ ಕೆಟ್ಟಿದೆ. ಈಗ ಈ ತಣ್ಣೀರು ಕುಡಿದು ಇನ್ನೂ ಹಾಳುಮಾಡಿಕೊಳ್ಳುತ್ತೀಯ" ಎಂದು ಇಬ್ಬರೂ ಎಚ್ಚರಿಸುತ್ತಿದ್ದರೂ ಅವರ ಮಾತು ಕಿವಿಗೆ ಬೀಳದಂತೆ ಒಂದೇ ಸಮನೆ ನೀರು ಕುಡಿಯುವುದರಲ್ಲಿ ಮಗ್ನನಾಗಿದ್ದೆ. ಅದು ಪರ್ವತದ ಮೇಲಿಂದೆಲ್ಲೋ ನೀರ್ಗಲ್ಲುಗಳು ಕರಗಿ ಹರಿದು ಬರುತ್ತಿದ್ದ ನೀರು. ಬಹಳ ತಣ್ಣಗಿತ್ತು. ಆದರೆ ಜೀವ ಉಳಿಯಲು ನೀರು ಬೇಕೇ ಬೇಕೆನ್ನುವ ಸ್ಥಿತಿಯಲ್ಲಿದ್ದ ನಾನು ಬೇರಾವುದರ ಕಡೆಗೂ ಗಮನ ಹರಿಸದಷ್ಟು ಮೊಂಡಾಗಿದ್ದೆ. ನನ್ನ ನೀರು ಕುಡಿಯುವ ಕೆಲಸ ಮುಗಿದ ನಂತರ ಮೂವರೂ ಹೆದ್ದಾರಿಯ ಮೇಲೆ ನಡೆದು ಹೊರಟೆವು. ಸಮಯ ಸುಮಾರು ಏಳು ಗಂಟೆಯಾಗಿರಬಹುದಾಗಿದ್ದು, ಮಬ್ಬು ಬೆಳಕಿತ್ತು. ಹಾಗೇ ಒಂದು ಕಿ.ಮೀ. ನಡೆದು ಹೋದವರನ್ನು ಸೈನಿಕನೊಬ್ಬ ತಡೆದ. ಪಕ್ಕದಲ್ಲೇ ಇದ್ದ ಆಶ್ರಮವೊಂದರಲ್ಲಿ ಅಂದು ರಾತ್ರಿ ಇರಬೇಕೆಂದೂ, ಅಲ್ಲಿ ಊಟ, ವಸತಿಯ ವ್ಯವಸ್ಥೆಯಾಗಿರುವುದೆಂದೂ ತಿಳಿಸಿದ ಸೈನಿಕರ ಮಾತಿಗೆ ಹೂಗುಟ್ಟಿ ಆಶ್ರಮದೊಳಗೆ ನಡೆದೆವು. ವಿಶಾಲವಾದ ಕೋಣೆಯೊಂದರಲ್ಲಿ ಚಾಪೆಗಳನ್ನು ಹಾಸಿದ್ದ ಆಶ್ರಮವಾಸಿಗಳು ನಮ್ಮನ್ನು ಬರಮಾಡಿಕೊಳ್ಳಲು ಸಜ್ಜಾಗಿದ್ದರು. ಸಮಯ ಎಂಟು ಗಂಟೆಯಾಗಿತ್ತು.

ಚಾಪೆಯ ಮೇಲೆ ಬಿದ್ದುಕೊಂಡ ನಮಗೆ ಮೈ-ಕೈ-ಕಾಲೆಲ್ಲಾ ತೀವ್ರವಾಗಿ ನೋಯುತ್ತಿದ್ದುದು ತಿಳಿದುಬಂತು. ಚಾರಣ ಮಾಡುವಾಗ ಇದ್ದ ಉತ್ಸಾಹವು ಎಲ್ಲವನ್ನೂ ಮರೆಮಾಚಿತ್ತು. ಆದರೀಗ ವಿಶ್ರಾಂತಿಯ ಸಮಯದಲ್ಲಿ ದೇಹದ ಪ್ರತಿಯೊಂದು ಭಾಗವೂ ಎಷ್ಟು ನೋವಾಗುತ್ತಿದೆಯೆಂಬ ಅರಿವಾಯಿತು. ಒಬ್ಬರಿಗೊಬ್ಬರು ಬೆನ್ನು ಒತ್ತಿಹಿಡಿದು ಕೊಂಚಮಟ್ಟಿಗೆ ನೋವು ನಿವಾರಿಸುವ ಯತ್ನ

ಮಾಡಿದೆವು. ಅಷ್ಟರಲ್ಲಿ ಆಶ್ರಮಕ್ಕೆ ಜನಸಾಗರವೇ ಹರಿದು ಬಂತು. ಸುಮಾರು ಐವತ್ತು ಯಾತ್ರಿಕರು ಒಬ್ಬರಾದ ನಂತರ ಮತ್ತೊಬ್ಬರಂತೆ ನಡೆದು ಬರುತ್ತಲೇ ಇದ್ದರು. ಕತ್ತಲಾದ ಮೇಲೂ ಬಂದವರು ಹಲವರಿದ್ದರು. ನಾಲ್ವರನ್ನು ಬಿಟ್ಟು ಮಿಕ್ಕವರೆಲ್ಲರೂ ಗೋವಿಂದಘಾಟ್‌ನತ್ತ ಹೋಗುತ್ತಿದ್ದವರೇ. ನಾಲ್ವರು ಮಾತ್ರ ಬದರಿನಾಥದೆಡೆಗೆ ಹೋಗುತ್ತಿದ್ದರು. ಅವರ ಪರಿವಾರಗಳು ಅಲ್ಲಿ ಸಿಲುಕಿದ್ದು, ಅವರನ್ನೆಲ್ಲ ಕರೆತರಲು ಈ ಹುಚ್ಚುಸಾಹಸ ಮಾಡುತ್ತಿದ್ದ ನಾಲ್ವರನ್ನೂ ಎಲ್ಲರೂ ಹುರಿದುಂಬಿಸಿ, ಅವರ ಮುಂದಿನ ರಸ್ತೆಯ ಕಠಿಣತೆಯ ಬಗ್ಗೆ ತಿಳಿಸಿಕೊಟ್ಟೆವು. ಅವರಿಂದ ನಮ್ಮೆಲ್ಲರಿಗೂ ನಾವು ಹೋಗಬೇಕಾದ ರಸ್ತೆಯ ಬಗ್ಗೆ ಗೊತ್ತಾಯಿತು. ಮೂರೇ ಮೂರು ಗುಡ್ಡ ನಮ್ಮನ್ನು ಮಿಕ್ಕ ಪ್ರಪಂಚದಿಂದ ಬೇರ್ಪಡಿಸಿತ್ತು.

ಆಶ್ರಮವಾಸಿಗಳು ೧೫೦ ಮಂದಿಗೆ ಅಡುಗೆ ತಯಾರಿಸಿದ್ದರಂತೆ. ಆದರೆ ಅಂದು ಅಲ್ಲಿಗೆ ಬಂದದ್ದು ಕೇವಲ ಐವತ್ತು ಜನ. ಹೀಗಾಗಿ ಅಡುಗೆ ಸಾಕಷ್ಟಿದ್ದು, ಹೊಟ್ಟೆಬಿರಿಯುವಷ್ಟು ಊಟ ಮಾಡಬಹುದಾಗಿತ್ತು. ಎಲ್ಲರೂ ಒತ್ತಾಯಪಡಿಸಿ ಹೆಚ್ಚೆಚ್ಚು ಬಡಿಸುತ್ತಿದ್ದರು. ದಾಲ್-ಚಾವಲ್ ಸೊಗಸಾಗಿದ್ದು, ಹಸಿದ ಹೊಟ್ಟೆಗೆ ಅಮೃತದಂತಿತ್ತು. ದಪ್ಪದ ಅಕ್ಕಿಯಾದ್ದರಿಂದ ಶ್ರೀಧರ್ ಮತ್ತು ಜಯರಾಮ್‌ರಿಗೆ ಊಟ ಅಷ್ಟಾಗಿ ಸೇರಲಿಲ್ಲ. ನಾನಂತೂ ವರ್ಷಗಳಿಂದ ಅನ್ನವನ್ನೇ ಕಂಡಿಲ್ಲವೇನೋ ಎಂಬಂತೆ ಉಂಡೆ. ಊಟ ಮುಗಿಸುವಷ್ಟರಲ್ಲಿ ಮಳೆ ಜೋರಾಗಿ ಬರುತ್ತಿತ್ತು. ಎಲ್ಲರಿಗೂ ಹೊದೆಯಲು ಹೊದಿಕೆಗಳನ್ನು ಕೊಟ್ಟ ಆಶ್ರಮವಾಸಿಗಳು ನಮ್ಮಷ್ಟಕ್ಕೆ ನಮ್ಮನ್ನು ಬಿಟ್ಟು ಹೊರಟುಹೋದರು. ಅಂದಿನ ಸಾಹಸದ ಬಗ್ಗೆ ಮೆಲುಕುಹಾಕುತ್ತ ನಿದ್ದೆಹೋದೆವು. ಒಂದು ದೊಡ್ಡ ನಿರಾಶ್ರಿತರ ಶಿಬಿರವಾಗಿತ್ತು ಆ ಆಶ್ರಮ. ನಮಗೆ ಆಶ್ರಯವಿತ್ತ ಆ ಜಾಗಕ್ಕೂ, ಅಲ್ಲಿನ ವಾಸಿಗಳಿಗೂ ಅನಂತಾನಂತ ಪ್ರಣಾಮಗಳು.

೨೭ ಜೂನ್ ೨೦೧೩, ಬೆಳಿಗ್ಗೆ ಆರು ಗಂಟೆ... ಹಿಂದಿನ ರಾತ್ರಿಯಿಡೀ ಮಳೆ ಸುರಿದಿತ್ತು. ಬೆಳಿಗ್ಗೆ ಎದ್ದಾಗಲೂ ಮೋಡ ಕವಿದಿತ್ತು. ಬೇಗಬೇಗ ತಯಾರಾಗಿ ಮಳೆಯಲ್ಲಿ ನೆನೆದು ಒದ್ದೆಯಾಗಿದ್ದ ಬೂಟುಗಳನ್ನೇ ಧರಿಸಿ ಮತ್ತೊಮ್ಮೆ ನಡೆಯುತ್ತ ಹೊರಟೆವು. ಮುಂದಿನ ಹಾದಿ ಸ್ಪಷ್ಟವಿತ್ತು. ಒಂದು ಕಿ.ಮೀ. ನಂತರ ರಸ್ತೆಯಿಲ್ಲದಿರುವುದರಿಂದ, ಅಲ್ಲೊಂದು ಗುಡ್ಡವನ್ನು ಹತ್ತಿಳಿದು, ಗೋವಿಂದಘಾಟ್ ತಲುಪಿ, ಅದನ್ನು ದಾಟಿದ ನಂತರ ಸಣ್ಣದಾಗಿದ್ದ ಒಂದು ಗುಡ್ಡವನ್ನು ಹಾದು, ನಂತರ ಸೇನೆಯವರ ಸಹಾಯದೊಂದಿಗೆ ಮತ್ತೊಂದು ಗುಡ್ಡವನ್ನು ಹತ್ತಿಳಿದರೆ ಅಲ್ಲಿಂದ ಮುಂದೆ ಹೆದ್ದಾರಿ ಸರಿಯಿದ್ದು ವಾಹನಗಳು ನಿಂತಿರುತ್ತವೆಯೆಂದು ಆಶ್ರಮದಲ್ಲಿ ಭೇಟಿಯಾಗಿದ್ದ ಜನ ಹೇಳಿದ್ದರು.

ಪಾಂಡುಕೇಶ್ವರವನ್ನು ದಾಟಿಹೋದ ನಂತರ ಮೊದಲನೆಯ ಗುಡ್ಡ ಸಿಕ್ಕಿತು. ಅದುವೇ ಚಾರಣದ ಮಾರ್ಗದ ಗುಡ್ಡವೆಂದು ಸೂಚಿಸಲು ಪ್ಲಾಸ್ಟಿಕ್ ಪಟ್ಟಿಗಳನ್ನು ಕಟ್ಟಿದ್ದರು. ಪ್ಲಾಸ್ಟಿಕ್ ಪಟ್ಟಿಗಳನ್ನೇ

ಅನುಸರಿಸಿ ಹೋದರೆ ಅದು ಒಳಹಾದಿಯ ಮೂಲಕ ಸಾಗಿ, ಕಿತ್ತುಹೋಗಿದ್ದ ರಸ್ತೆಯ ಮತ್ತೊಂದು ಬದಿಗೆ ನಮ್ಮನ್ನು ಸೇರಿಸುತ್ತಿತ್ತು. ಎತ್ತರದ ಗುಡ್ಡವದು. ಜೊತೆಗೆ ರಾತ್ರಿಯಿಡೀ ಮಳೆಯಾಗಿದ್ದರಿಂದ ಹಾದಿಯೆಲ್ಲ ಕೆಸರಿನಿಂದ ಕೂಡಿತ್ತು. ಮೊದಲು ಒಂದೇ ಸಮನೆ ಸುಮಾರು ನೂರು ಮೀಟರ್‌ಗಳಷ್ಟು ಎತ್ತರಕ್ಕೆ ಹತ್ತಬೇಕಾಯಿತು. ಇಂದು ಶ್ರೀಧರ್ ಮುಂದೆ ಹೋಗಿದ್ದರೂ, ಅವರ ಬೂಟಿನ ಗುರುತು ನೆಲದ ಮೇಲೆ ಸ್ಪಷ್ಟವಾಗಿ ಮೂಡಿ ನಮಗೆ ದಾರಿ ಅರಸುವ ಕೆಲಸ ತಪ್ಪಿತು. ಬೂಟಿನ ಗುರುತು ನಿರಂತರವಾಗಿ ಇದ್ದುದರಿಂದ ಅವರು ಯಾವ ತೊಂದರೆಯೂ ಇಲ್ಲದೆ ಸರಾಗವಾಗಿ ನಡೆದು ಹೋಗಿದ್ದಾರೆಂದು ಸಹ ತಿಳಿಯುತ್ತಿತ್ತು. ಅದನ್ನೇ ಗಮನಿಸುತ್ತ ಜಯರಾಮ್ ಮತ್ತು ನಾನು ಹಿಂದೆ ಹೆಜ್ಜೆಹಾಕುತ್ತಿದ್ದೆವು. ಬೆಟ್ಟವೇರಿದ ನಂತರ ಕೆಲದೂರ ಕಾಡಿನಲ್ಲಿ ಸಮತಟ್ಟಾದ ನೆಲವಿದ್ದು, ಅನಂತರ ಇಳಿಜಾರು ಪ್ರಾರಂಭವಾಯಿತು. ಜಾರಿಕೆಯಿಂದ ಕೂಡಿದ್ದ ಇಳಿಜಾರಿನಲ್ಲಿ ಇಳಿಯುವುದು ಸಾಹಸವಾಗಿತ್ತು. ಇಂದು ನನ್ನ ಬ್ಯಾಗನ್ನು ಕೈಯಲ್ಲಿ ಹಿಡಿಯದೆ ವಿಚಿತ್ರವಾದೊಂದು ರೀತಿಯಲ್ಲಿ ಬೆನ್ನಿಗೆ ಹಾಕಿಕೊಂಡಿದ್ದರಿಂದ ನಡೆಯಲು ಸುಲಭವಾಗಿತ್ತು. ಅಲ್ಲಲ್ಲಿ ಹಾರುತ್ತ, ನೆಗೆಯುತ್ತ, ಜಾರುತ್ತ ಮತ್ತೊಮ್ಮೆ ಹೆದ್ದಾರಿ ತಲುಪಿದೆವು. ಸುಮಾರು ಮುಕ್ಕಾಲು ಗಂಟೆಯಲ್ಲಿ ಮೊದಲ ಗುಡ್ಡವನ್ನು ಗೆದ್ದಾಗಿತ್ತು. ಗೆದ್ದ ಗುಡ್ಡದತ್ತ ಒಂದು ತಿರಸ್ಕಾರದ ನೋಟ ಬೀರಿ ಗೋವಿಂದಘಾಟ್‌ನತ್ತ ನಡೆದೆವು.

ಗೋವಿಂದಘಾಟ್ ಕಣ್ಣಿಗೆ ಬಿದ್ದೊಡನೆಯೇ ಮನಸ್ಸು ಕ್ಷೋಭೆಗೊಳಗಾಯಿತು. ಅಲ್ಲಿಯವರೆಗೂ ಏನೋ ಹರಟುತ್ತಿದ್ದ ನಾವು ಊರನ್ನು ನೋಡಿದ ತಕ್ಷಣ ಮೂಕರಾದೆವು. ಜೀವಕಳೆಯಿಲ್ಲದ ಊರೆಂದು ಕರೆಸಿಕೊಳ್ಳಲು ಅಂದು ಗೋವಿಂದಘಾಟ್ ಎಲ್ಲ ಅರ್ಹತೆ ಪಡೆದಿತ್ತು. ನದಿ ತನ್ನ ಪಾತ್ರವನ್ನು ಬದಲಿಸಿ, ಪಕ್ಕದಲ್ಲಿ ಹರಿಯುತ್ತಿತ್ತು. ಗುರುದ್ವಾರದ ಸುತ್ತಮುತ್ತ ಕಟ್ಟಡಗಳು ಇದ್ದವೇ ಎಂದು ಯಾರಾದರೂ ಕೇಳುವಂತಿತ್ತು. ಗುರುದ್ವಾರಕ್ಕೆ ಹೋಗುತ್ತಿದ್ದ ರಸ್ತೆ ಅರ್ಧಕ್ಕೇ ತುಂಡಾಗಿತ್ತು. ಅದೇ ರಸ್ತೆಗುಂಟ ನಾವು ದೂರವಾಣಿಯನ್ನು ಹುಡುಕುತ್ತ ಹನ್ನೆರಡು ದಿನಗಳ ಹಿಂದೆ ಅಲೆದಿದ್ದೆವು. ಘಾಂಘರಿಯಾಕ್ಕೆ ಹೋಗುವ ಸೇತುವೆ ಇರಲೇ ಇಲ್ಲ! ನದಿಯ ಪಕ್ಕದಲ್ಲೆಲ್ಲಾ ಕಟ್ಟಡಗಳ ಅವಶೇಷಗಳು ತುಂಬಿದ್ದವು. ವಾಹನ ನಿಲುಗಡೆಯ ಸ್ಥಳಗಳು ಮಾಯವಾಗಿದ್ದವು. ನದಿಯಲ್ಲಿ ವಾಹನಗಳಾಗಲೀ, ಅವುಗಳ ಭಾಗಗಳಾಗಲೀ ನಮಗೆ ಕಾಣಲಿಲ್ಲ. ನದಿಯ ನೀರಿನ ರಭಸಕ್ಕೆ ಅವೆಲ್ಲವೂ ತೇಲಿಕೊಂಡು ಹೊರಟುಹೋಗಿದ್ದವು.

ಒಂದು ಊರು ತನ್ನ ಉಚ್ಛ್ರಾಯ ಸ್ಥಿತಿಯಲ್ಲಿರುವುದನ್ನು, ಅಲ್ಲಿ ಜನ ಗಿಜಿಗುಡುತ್ತಿರುವುದನ್ನು ನೋಡಿ, ಹನ್ನೆರಡು ದಿನಗಳ ನಂತರ ಅದೇ ಊರು ಹಾಳು ಸುರಿಯುತ್ತಿರುವುದನ್ನು ಮತ್ತೊಮ್ಮೆ ಕಾಣುವುದು ಯಾರೂ ಅನುಭವಿಸಬಾರದ ಪರಿಸ್ಥಿತಿ. ಕೋಟ್ಯಂತರ ಭಾರತೀಯರಲ್ಲಿ ಬಹುಶಃ ಗೋವಿಂದಘಾಟ್‌ನ ಎರಡೂ ಮುಖಗಳನ್ನು ಕಣ್ಣಾರೆ ಕಂಡ ಕೆಲವೇ ನೂರು ಮಂದಿಯಲ್ಲಿ ನಾವು ಮೂವರು ಇರುವೆವು.

ಮತ್ತಾವ ಕನ್ನಡಿಗನೂ ನಾವು ಕಂಡ ಆ ದೃಶ್ಯವನ್ನು ನೋಡಿರಲಾರ (ಸೈನ್ಯದವರು ಯಾರಾದರೂ ಕನ್ನಡಿಗರನ್ನು ಹೊರತುಪಡಿಸಿ). ನಾವು ಎರಡು ಬಾರಿ ತಿಂಡಿ ತಿಂದಿದ್ದ ಹೋಟೆಲ್ ಇಂದು ಮುಚ್ಚಿತ್ತು. ತಿಂಡಿ ತಿನ್ನಬೇಕೆಂಬ ಬಯಕೆಯೇನಿರಲಿಲ್ಲ. ಜನಜಂಗುಳಿಯಿರುತ್ತಿದ್ದ ಹೆದ್ದಾರಿಯ ಮಾರ್ಗದಲ್ಲಿ ಕೆಲವೇ ಕೆಲವು ಕಾರುಗಳೂ, ಜನರೂ ಇದ್ದರು.

ಸಿಖ್ಖರೇ ಹೆಚ್ಚಾಗಿ ಇರುತ್ತಿದ್ದ ಗೋವಿಂದಘಾಟ್‌ನಲ್ಲಿ ಅತಿಹೆಚ್ಚು ನಷ್ಟವನ್ನು ಅನುಭವಿಸಿದವರೂ ಅವರುಗಳೇ. ಆದರೂ ಅವರ ಸಹಾಯಪರತೆಗೆ ವಂದನೆ ಸಲ್ಲಿಸಲೇಬೇಕು. ಅಂತಹ ಪ್ರಸಂಗದಲ್ಲೂ ಉಚಿತವಾಗಿ ಚಹಾ, ತಿಂಡಿ ಹಂಚುವ ವ್ಯವಸ್ಥೆ ಮಾಡಿಕೊಂಡಿದ್ದರು. ಹೋಗುವ ಯಾತ್ರಿಕರು ಯಾರೇ ಆಗಿದ್ದರೂ ಅವರನ್ನು ಆಹಾರ ಸ್ವೀಕರಿಸಲು ಆಹ್ವಾನಿಸುತ್ತಿದ್ದರು. ನಮಗೆ ಹಸಿವಿಗಿಂತ ಹೆಚ್ಚಾಗಿ ಕಾತರವೇ ಇದ್ದದ್ದರಿಂದ ಅವರ ಆಹ್ವಾನವನ್ನು ನಯವಾಗಿ ತಿರಸ್ಕರಿಸಿ, ಮುನ್ನಡೆದೆವು. ದಾರಿಯಲ್ಲಿ ಸೈನ್ಯದ ಅನೇಕ ತುಕಡಿಗಳು ಬದರಿನಾಥದೆಡೆಗೆ ನಡೆದು ಹೋಗುತ್ತಿದ್ದವು.

ಗೋವಿಂದಘಾಟ್ ದಾಟಿದ ನಂತರ ಸಿಗುವ ಮೊದಲ ಗುಡ್ಡವನ್ನು ಗುರುತು ಹಿಡಿಯಲು ಸಾಧ್ಯವಾಗದೆ, ಹೆದ್ದಾರಿ ತುಂಡಾಗಿದ್ದ ಜಾಗದವರೆಗೂ ನಡೆದುಹೋದೆವು. ದಾರಿಯ ಅಂಚಿನಲ್ಲಿ ನಿಂತು ಮತ್ತೊಂದು ಬದಿಯನ್ನು ತದೇಕಚಿತ್ತದಿಂದ ನೋಡುತ್ತಿದ್ದ ನಮ್ಮನ್ನು ಗಮನಿಸಿದ ಅಲ್ಲಿದ್ದವರು ನಾವು ಗುಡ್ಡದ ದಾರಿ ತಪ್ಪಿದ್ದೇವೆಂದು ತಿಳಿದು, ಸರಿದಾರಿ ತೋರಿಸಿದರು. ಈ ಗುಡ್ಡ ಅಷ್ಟೇನೂ ಕಷ್ಟವಾಗಿರಲಿಲ್ಲ. ನೂರಾರು ಬಂಡೆಗಳನ್ನು ಜಿಗಿದು ಮುನ್ನುಗ್ಗಬೇಕಿತ್ತಷ್ಟೇ. ಇಲ್ಲಿ ಹೆಚ್ಚು ಮಳೆ ಬಂದಿರಲಿಲ್ಲವೆಂದು ತೋರುತ್ತದೆ, ನೆಲ ಅಷ್ಟೇನೂ ಒದ್ದೆಯಾಗಿರಲಿಲ್ಲ. ಗುಡ್ಡದ ಮೇಲೊಂದು ಬೈಕ್ ನಿಂತಿದ್ದು, ಅದನ್ನು ಹೇಗೆ ಅಲ್ಲಿಯವರೆಗೂ ಸಾಗಿಸಿದರೆಂದು ಕುತೂಹಲದಿಂದ ಗಮನಿಸಿದರೂ, ಉತ್ತರ ಹೊಳೆಯಲಿಲ್ಲ. ಮಂಗಗಳಂತೆ ಹಾರುತ್ತ, ಬಹಳ ಬೇಗ ಹೆದ್ದಾರಿ ತಲುಪಿದೆವು.

ಮತ್ತೊಮ್ಮೆ ಮುಂದುವರಿದವರಿಗೆ ಅಂದಿನ ಮೂರನೆಯ ಗುಡ್ಡವನ್ನು ಕಂಡುಹಿಡಿಯಲು ಒಂದು ನಿಮಿಷವೂ ಬೇಕಾಗಲಿಲ್ಲ. ಹೆಜ್ಜೆಗೊಬ್ಬರಂತೆ ನಿಂತಿದ್ದ ಸೈನಿಕರು ಕಾರಣವಿಲ್ಲದೆ ಏಕೆ ಗುಡ್ಡವೊಂದರ ಮೇಲೆ ನಿಲ್ಲುವರು! ಆದರೆ ಅದರ ಎತ್ತರ, ಕಠಿಣತೆ ಭಯ ಹುಟ್ಟಿಸಿತು. ಸ್ವಾತಂತ್ರ್ಯದ ಆಸೆಯೊಂದಿಲ್ಲದೆ ಹೋಗಿದ್ದಲ್ಲಿ ಅದನ್ನು ಹತ್ತಲು ಅಪಾರ ಮನೋಬಲ ಬೇಕಾಗುತ್ತಿತ್ತು. ನಿಧಾನವಾಗಿ ಸೈನಿಕರ ನೆರವಿನಿಂದ ಈ ಅಂತಿಮ ಗುಡ್ಡವನ್ನೇರಲು ಪ್ರಾರಂಭಿಸಿದೆವು.

ಚಾರಣದ ಮಾರ್ಗದಲ್ಲಿ ಬಲವಾದ ಹಗ್ಗ ಕಟ್ಟಿದ್ದರು. ನಮ್ಮ ಕೋಲನ್ನು ಬ್ಯಾಗಿನ ಬದಿಗೆ ತುರುಕಿ, ಹಗ್ಗವನ್ನು ಹಿಡಿದು ಎಳೆಯುತ್ತ, ಭಾರವನ್ನೆಲ್ಲ ಅದರ ಮೇಲೆ ಬಿಟ್ಟು ಏರುತ್ತಾ ಸಾಗಿದೆವು. ಅಲ್ಲಲ್ಲಿ ನಿಂತಿದ್ದ ಸೈನಿಕರು ಅಗತ್ಯ ಬಿದ್ದಾಗಲೆಲ್ಲ ನಮ್ಮ ಕೈಹಿಡಿದು ಮೇಲಕ್ಕೆಳೆದುಕೊಂಡು ಸಹಾಯ ಮಾಡುತ್ತಿದ್ದರು. ಎಷ್ಟೋ ಜನ ವೃದ್ಧರೂ, ಮಹಿಳೆಯರೂ ಈ ಗುಡ್ಡವನ್ನು ದಾಟುವುದರಲ್ಲಿ ನಿರತರಾಗಿದ್ದರು. ಅವರುಗಳಿಗೆ ಯೋಧರ ನೆರವು ಅತ್ಯವಶ್ಯವಾಗಿತ್ತು. ಮೇಲೇರಿದ ನಂತರ ಮತ್ತೊಮ್ಮೆ ಸಮತಟ್ಟಾದ ಜಾಗಗಳನ್ನು ದಾಟಿ, ಕಡೆಯ ಇಳಿಜಾರಿನ ಬಳಿ ಹೋದೆವು. ಹೆದ್ದಾರಿ ನಮ್ಮಿಂದ ಸುಮಾರು ಐವತ್ತು-ಅರವತ್ತು ಮೀಟರ್‌ಗಳಷ್ಟು ಕೆಳಗಿತ್ತು. ಸ್ವಾತಂತ್ರ್ಯಕ್ಕಿನ್ನು ಇಪ್ಪತ್ತು ನಿಮಿಷವಷ್ಟೇ ಬಾಕಿ!

ಆದರೆ ಈ ಇಳಿಜಾರು ಅತ್ಯಂತ ಕಷ್ಟಕರವಾಗಿತ್ತು. ಬೆಳಿಗ್ಗೆಯಿಂದ ನಾವು ಮಾಡಿದ ಸಾಹಸಗಳಲ್ಲಿ ಇದೇ ಕಠಿಣತಮವಾದುದು. ಸೈನಿಕರಿಲ್ಲದೆ ಹೋಗಿದ್ದರೆ ಸಾಮಾನ್ಯ ನಾಗರಿಕರು ಇದನ್ನು ದಾಟಲು ಸಾಧ್ಯವೇ ಇರಲಿಲ್ಲ. ಬಲವಾದ ಹಗ್ಗಗಳನ್ನು ಹಿಡಿದು ನಿಧಾನವಾಗಿ ನಡೆಯಲು ಸೂಚಿಸಿದ ಅಧಿಕಾರಿಗಳು, ಯಾವುದೇ ಕಾರಣಕ್ಕೂ ಹಗ್ಗವನ್ನು ಬಿಡಬಾರದೆಂದು ಕಟ್ಟಪ್ಪಣೆ ಮಾಡಿದರು. ಅವರ ಮಾತಿನಿಂದಲ್ಲದಿದ್ದರೂ, ಹಗ್ಗವನ್ನು ಹಿಡಿಯದೆ ಜಾರಿಬಿದ್ದರೆ ಉಂಟಾಗುವ ಪರಿಣಾಮವೇ ಎಲ್ಲರನ್ನೂ ಹಗ್ಗ ಹಿಡಿದಿರಲು ಪ್ರೇರೇಪಿಸಿತ್ತು. ಏರುವಾಗ ಅಷ್ಟಾಗಿ ಅನುಭವಕ್ಕೆ ಬಂದಿರದ ಕಠಿಣತೆ ಈಗ ಗಮನಕ್ಕೆ ಬಂತು. ಹೆಜ್ಜೆಹೆಜ್ಜೆಗೂ ಸೈನಿಕರು ಕೈಹಿಡಿದು, ಅವರೆಡೆಗೆ ಎಳೆದುಕೊಳ್ಳುತ್ತ, ನಮ್ಮನ್ನು ಮುಂದಿನ ಸೈನಿಕರಿಗೆ ದಾಟಿಸುತ್ತ ಸಹಾಯ ಮಾಡಿದರು. ಕಡೆಯ ತಿರುವಿನ ನಂತರ ಇಡಬೇಕಿದ್ದ ಹತ್ತೇ ಹತ್ತು ಹೆಜ್ಜೆ ಚಾರಣದ ಕಠಿಣತೆಯ ಪರಾಕಾಷ್ಠೆ. ನಿಧಾನವಾಗಿ ಹೆಜ್ಜೆಯಿಡುತ್ತಾ ಬಂದು, ಕಡೆಗೊಮ್ಮೆ ಜಿಗಿದುಬಿಟ್ಟೆ!

ಅಷ್ಟೇ! ಹೆದ್ದಾರಿಯ ಬದಿಯಲ್ಲಿ ನಿಂತಿದ್ದೆ. ಚಾರಣ ಸಮಾಪ್ತಿಯಾಗಿತ್ತು. ಜೀವ ಉಳಿದಿತ್ತು. ಬದುಕುವ ಸಲುವಾಗಿ ಕೈಗೊಂಡ ಚಾರಣ ಯಶಸ್ವಿಯಾಗಿತ್ತು! ಅಲ್ಲಿದ್ದ ಸೇನಾಧಿಕಾರಿಗಳು ಬಂದು ನಮ್ಮ ಕೈಕುಲುಕಿ, ಒಂದಷ್ಟು ಬಿಸ್ಕತ್‌ಗಳನ್ನು ತೆಗೆದುಕೊಳ್ಳುವಂತೆ ಸೂಚಿಸಿದರು. ಮನಸಾರೆ ನೀರು ಕುಡಿದು, ಬಿಸ್ಕತ್ ತಿಂದು ಕಟ್ಟೆಯ ಮೇಲೆ ಕುಳಿತೆವು. ಶ್ರೀಧರ್ ತಮ್ಮ ಸಂಬಂಧಿಯೊಬ್ಬರಿಗೆ ಕರೆ ಮಾಡಿ ನಾವು ಪಾರಾದೆವೆಂದು ಹೇಳಿದುದು ಈಗಲೂ ಕಿವಿಯಲ್ಲಿ ಗುಯ್ಗುಡುತ್ತಿದೆ. "ಅಣ್ಣಾ, ಏನೂ ವರ್ಕ್ ಔಟ್ ಆಗಲಿಲ್ಲ. ಹಾಗೇ ನಡಕೊಂಡು ಬಂದುಬಿಟ್ಟೆ!". ನಮ್ಮ ಕಷ್ಟಗಳ ಸರಮಾಲೆಯನ್ನು ಅವರ ಮಾತು ಒಂದೇ ಎಳೆಯಲ್ಲಿ ಬಿಡಿಸಿಟ್ಟಿತ್ತು.

ನಾವಿನ್ನು ಸ್ವತಂತ್ರರು! ಬದರಿನಾಥದ ವಿಶಾಲ ಸೆರೆಮನೆಯಿಂದ ಪಾರಾಗಿ ಬಂದು ಈಗ ನಮ್ಮ ಪ್ರಪಂಚಕ್ಕೆ ಮರಳುತ್ತಿರುವವರು. ಕಡೆಯ ಗುಡ್ಡವನ್ನೊಮ್ಮೆ ಕಣ್ತುಂಬ ನೋಡಿದೆವು. ಹಾಗೇ ನೋಡುತ್ತ, ಈ ಚಾರಣ ಇಷ್ಟೊಂದು ಕಠಿಣವಾಗಿದೆಯೆಂದು ಯಾರಾದರೂ ನಮಗೆ ಹೊರಡುವ ಮುನ್ನ ಹೇಳಿದ್ದೇ ಆಗಿದ್ದಲ್ಲಿ ನಾವು ಖಂಡಿತ ಬರುತ್ತಿರಲಿಲ್ಲವೆಂದು ಅನಿಸಿತು. ಏನೇನೂ ಗೊತ್ತಿಲ್ಲದಿದ್ದರಿಂದಲೇ ನಾವು ನಡೆದು ಬರುವುದು ಸಾಧ್ಯವಾಯಿತು. ಕೆಲವೊಮ್ಮೆ ಮಾಹಿತಿಯಿರದಿರುವುದೇ ವರದಾನವಾಗಿರುತ್ತದೆ. ಸೈನಿಕರಿಗೆಲ್ಲರೂ ಧನ್ಯವಾದಗಳನ್ನು ತಿಳಿಸಿದೆವು. ಅವರಿಂದಲೇ ನಾವಿಂದು ಜೀವಸಹಿತ ಮರಳಿ ಬರಲು ಸಾಧ್ಯವಾಗಿತ್ತು. "ಯಾರಾದರೂ ನಮಗೆ ಈ ದಾರಿಯ ವೀಡಿಯೋ ತೋರಿಸಿ ಆಮೇಲೆ ಹೊರಡಿ ಎಂದಿದ್ದರೆ ನಾನು ಜಪ್ಪಯ್ಯ ಅಂದರೂ ಬದರಿನಾಥವನ್ನು ಬಿಟ್ಟು ಹೊರಬರುತ್ತಿರಲಿಲ್ಲ" ಎಂದು ಜಯರಾಮ್ ನುಡಿದ ನುಡಿಯಾದರೂ ಮೂವರಲ್ಲೂ ಆ ಆಲೋಚನೆ ಮನೆಮಾಡಿದ್ದು ಸತ್ಯ.

ಚಾರಣವನ್ನು ಹಿಂದಿನ ದಿನ ಮೂರು ಗಂಟೆಗೆ ಪ್ರಾರಂಭಿಸಿ ಎಂಟು ಗಂಟೆಗೆ ಮುಕ್ತಾಯಗೊಳಿಸಿದ್ದೆವು. ಇಂದು ಬೆಳಿಗ್ಗೆ ಆರು ಗಂಟೆಗೆ ಹೊರಟು, ಮೂರೂ ಗುಡ್ಡಗಳನ್ನು ದಾಟಿದಾಗ ಸಮಯ ಹತ್ತು ಗಂಟೆಯಾಗಿತ್ತು. ಕ್ರಮಿಸಿದ ಒಟ್ಟು ದೂರ ಸುಮಾರು ಇಪ್ಪತ್ತು ಕಿ.ಮೀ.ಗಳಷ್ಟು. ಅದರಲ್ಲಿ ಕಾಡಿನಲ್ಲಿ ನಡೆದದ್ದು ಹದಿನಾಲ್ಕು-ಹದಿನೈದು ಕಿ.ಮೀ.ಗಳಷ್ಟು ದೂರ. ಚಾರಣಕ್ಕೆಂದೇ ಬಂದಿದ್ದವರಿಗೆ ಪ್ರಕೃತಿಮಾತೆ ಮಹಾಚಾರಣವೊಂದನ್ನು ಮಾಡುವ ಸವಾಲನ್ನು ಎಸೆದಿದ್ದು, ನಾವದನ್ನು ಸಮರ್ಥವಾಗಿ ಎದುರಿಸಿದ್ದೆವು. ಬದುಕಲು ಅರ್ಹರೆಂಬ ಶಹಬ್ಬಾಸ್‌ಗಿರಿಯನ್ನು ಪಡೆದುಕೊಂಡಿದ್ದೆವು!

# ನೆಮ್ಮದಿಯ ನಿಟ್ಟುಸಿರು

ಮನೆಯವರಿಗೆ, ಮಿತ್ರರಿಗೆ, ನಾವು ನಡೆಯುತ್ತ ಕೆಳಗಿಳಿದುಬಿಟ್ಟೆವೆಂದು ತಿಳಿಸಿದಾಗ ಆದ ಸಂತೋಷ, ಅಚ್ಚರಿ ಅಷ್ಟಿಷ್ಟಲ್ಲ. ಎಲ್ಲರೂ ನಮ್ಮನ್ನು ಅಭಿನಂದಿಸುವವರೇ. ನಾವು ಬದರಿನಾಥದಿಂದ ಸುರಕ್ಷಿತವಾಗಿ ಹೊರಬಂದೆವೆಂದು ತಿಳಿಯುತ್ತಲೇ ನಮ್ಮನ್ನು ನೋಡಬೇಕೆನ್ನುವ ಅವರ ಹಂಬಲ ಹೆಚ್ಚಾಗಿಬಿಟ್ಟಿತು. ನಾವಿನ್ನೂ ಉತ್ತರಾಖಂಡದ ದೂರದ ತುದಿಯಲ್ಲೇ ಇದ್ದು, ಮನೆಗೆ ಬರಲು ಇನ್ನೂ ಬಹಳ ಸಮಯ ಬೇಕೆಂದು ಹೇಳಿದರೂ, ಅವರೆಲ್ಲರಲ್ಲಿದ್ದ ಅನಿಶ್ಚಿತತೆ ಮಾಯವಾಗಿ ಕಾತರಿಕೆ ಮನೆಮಾಡಿತ್ತು. ದಿನೇಶ್ ನಾವು ಕ್ಷೇಮವಾಗಿ ಹೆದ್ದಾರಿ ತಲುಪಿದ ಸುದ್ದಿ ತಿಳಿದು ಬಹಳ ಆನಂದಪಟ್ಟ.

ಕೊನೆಯ ಗುಡ್ಡದ ಅಂಚಿನಿಂದ ವಿಷ್ಣುಪ್ರಯಾಗಕ್ಕೆ ಸೇನೆಯ ಲಾರಿಗಳೂ, ಇತರೆ ಮಿನಿಬಸ್‌ಗಳೂ ನಮ್ಮನ್ನು ಕರೆದೊಯ್ಯಲು ಸಿದ್ಧವಾಗಿ ನಿಂತಿದ್ದವು. ಬಸ್‌ನಲ್ಲಿ ಕುಳಿತ ನಾವೆಲ್ಲರೂ ದೇವರಿಗೆ ವಂದಿಸುತ್ತ, ಘೋಷಣೆ ಕೂಗುತ್ತ ಸಾಗಿದೆವು. "ಬೋಲೇ ಸೋ ನಿಹಾಲ್, ಸತ್ ಶ್ರೀ ಅಕಾಲ್", "ಬೋಲೋ ಬದರಿ ವಿಶಾಲ್ ಮಹಾರಾಜ್ ಕೀ ಜೈ" – ತೇಲಿಬರುತ್ತಿದ್ದ ಈ ಘೋಷಣೆಗಳು ನಾವೆಲ್ಲರೂ ಎಷ್ಟು ನೆಮ್ಮದಿಯನ್ನು ಗಳಿಸಿದ್ದೆವು ಎಂಬುದರ ಸೂಚ್ಯಂಕವಾಗಿತ್ತು. ದಾರಿಯುದ್ದಕ್ಕೂ ಸಿಖ್ ಸಂತರೊಬ್ಬರು ಭಜನೆಯನ್ನು ಹಾಡುತ್ತಿದ್ದರು. ಎಲ್ಲರೂ ತಮ್ಮತಮ್ಮ ಅನುಭವಗಳನ್ನು ಮೆಲುಕುಹಾಕುವಲ್ಲಿ ನಿರತರಾಗಿದ್ದರು.

ರಸ್ತೆಯುದ್ದಕ್ಕೂ ಹಲವಾರು ಕಡೆ ಕಲ್ಲುಗಳನ್ನಿಟ್ಟಿದ್ದರು. ವಾಹನಗಳು ಅದರ ಮೇಲೆ ಸಂಚರಿಸಬಾರದೆಂದು ಸೂಚಿಸುವ ಗುರುತಿನ ಕಲ್ಲುಗಳವು. ಮೇಲಿನ ಡಾಂಬರು ಹಾಗೇ ಉಳಿದಿದ್ದರೂ ಕೆಳಗೆ ಮಣ್ಣು ಕೊಚ್ಚಿಕೊಂಡು ಹೋಗಿದ್ದು ತಿಳಿದುಬರುತ್ತಿತ್ತು. ಕೆಲವೆಡೆ ರಸ್ತೆಯ ಅರ್ಧಭಾಗ ತುಂಡಾಗಿದ್ದು, ಅಲ್ಲೆಲ್ಲ ವಾಹನಗಳು ಎಚ್ಚರಿಕೆಯಿಂದ ಹೋಗುತ್ತಿದ್ದವು. ನಾವು ಚಾರಣ ಮಾಡಿಕೊಂಡು ಬರುವಾಗಲೂ, ಕೇವಲ ಡಾಂಬರು ಉಳಿದು ಅಡಿಪಾಯ ಮಾಯವಾಗಿದ್ದ ಅನೇಕ ರಸ್ತೆಗಳನ್ನು ನೋಡಿದ್ದೆವು. ಅದರ ಮೇಲೆ ನಡೆದು ಸಹ ಹೋಗುವಂತಿರಲಿಲ್ಲ. ಅಂತಹ ರಸ್ತೆಗಳ ಮೇಲೆ ಮಾಡುವ ಒಂದೇ ಒಂದು ಸಣ್ಣ ತಪ್ಪು ಸಹ ದುಬಾರಿಯಾಗುವುದರಲ್ಲಿ ಸಂಶಯವಿರಲಿಲ್ಲ.

ವಿಷ್ಣುಪ್ರಯಾಗದಲ್ಲಿ ಮಿನಿಬಸ್‌ನಿಂದ ನಮ್ಮನ್ನಿಳಿಸಿ ಮತ್ತೊಂದು ಮಿನಿಬಸ್ಸನ್ನು ಹತ್ತಿಸಿದರು. ಅದು ನಮ್ಮನ್ನು ಜಿಲ್ಲಾಕೇಂದ್ರವಾದ ಚಮೋಲಿಯವರೆಗೂ ತಲುಪಿಸುತ್ತಿತ್ತು. ಚಮೋಲಿಯವರೆಗಿನ ರಸ್ತೆಗಳಾವುವೂ ಅಷ್ಟೊಂದು ಗಟ್ಟಿಯಾಗಿರದಿದ್ದರಿಂದ ಮತ್ತು ರಸ್ತೆ ಅಗಲವಾಗಿರದಿದ್ದ ಕಾರಣದಿಂದ,

ದೊಡ್ಡ ಬಸ್‌ಗಳ ಸಂಚಾರವನ್ನು ನಿಷೇಧಿಸಿದ್ದರು. ಎರಡು ತಾಸುಗಳ ಪ್ರಯಾಣದಲ್ಲಿ ಎರಡು ಬಾರಿ ಸೇನೆಯವರು ವಾಹನದೊಳಗೆ ಬಂದು ಯಾತ್ರಿಕರೆಲ್ಲರ ಹೆಸರು ಬರೆದುಕೊಂಡು ಹೋದರು. ಚಮೋಲಿ ತಲುಪಿದಾಗ ಮಧ್ಯಾಹ್ನ ಒಂದು ಗಂಟೆಯಾಗಿತ್ತು.

ಅಲ್ಲಿದ್ದ ಉತ್ತರಾಖಂಡ ಸಾರಿಗೆಯ ಬಸ್ಸು ಋಷಿಕೇಶದವರೆಗೂ ನಮ್ಮನ್ನು ಕರೆದೊಯ್ಯಲು ನಿಂತಿತ್ತು. ಈ ಹೊತ್ತಿಗೆ ನಮ್ಮ ಮೊಬೈಲ್‌ಗಳು ಸಂಪರ್ಕ ಸಿಗುವ ವಲಯಗಳಲ್ಲಿದ್ದು, ಕೆಲಸ ಮಾಡತೊಡಗಿದವು. ಬಸ್ ಹೊರಟ ನಂತರ ಮಿತ್ರರೊಬ್ಬರಿಗೆ ಕರೆಮಾಡಿ ನಮಗಾಗಿ ಮಾರನೆಯ ರಾತ್ರಿ ದೆಹಲಿಯಿಂದ ಬೆಂಗಳೂರಿಗೆ ವಿಮಾನದ ಟಿಕೆಟ್ ಕಾಯ್ದಿರಿಸುವಂತೆ ಕೇಳಿಕೊಂಡೆವು. ಅವರು, ನಾವು ಹರಿದ್ವಾರ ಸಮೀಪ ಬರುವವರೆಗೂ ಮಾಡುವುದೇ ಇಲ್ಲ, ಹಿಮಾಲಯದ ರಾಜ್ಯದಲ್ಲಿ ಭೂಕುಸಿತವಾಗಿ ನೀವು ಮತ್ತೊಮ್ಮೆ ಅಲ್ಲೇ ಇರಬೇಕಾಗಿ ಬಂದರೆ ಇನ್ನಷ್ಟು ಹಣ ಕಳೆದುಕೊಳ್ಳುವಿರಿ ಎಂದು ಎಚ್ಚರಿಸಿದರು. ಈಗಾಗಲೇ ನಾವು ೧೮ ಜೂನ್‌ಗೆ ಕಾಯ್ದಿರಿಸಿದ್ದ ವಿಮಾನದ ಟಿಕೆಟ್ ವ್ಯರ್ಥವಾಗಿತ್ತು. ಅದನ್ನು ರದ್ದುಗೊಳಿಸಲೂ ನಮ್ಮಿಂದ ಸಾಧ್ಯವಾಗಿರಲಿಲ್ಲ. ಟಿಕೆಟ್ ರದ್ದುಗೊಳಿಸುವ ಮಾತಿರಲಿ, ಆ ದಿನ ಹೊರಜಗತ್ತಿಗೆ ನಾವು ಬದುಕಿದ್ದೇವೆಂದು ತಿಳಿಸಲೂ ಸಾಧ್ಯವಾಗಿರಲಿಲ್ಲ. ಹಾಗೂ ಹೀಗೂ ಮಾಡಿ ಮಿತ್ರರನ್ನೊಪ್ಪಿಸಿ ಟಿಕೆಟ್ ಕಾಯ್ದಿರಿಸಿದೆವು.

ಆಗಿದ್ದ ಆಯಾಸ ಅಷ್ಟಿಷ್ಟಲ್ಲ. ಜೊತೆಗೆ ತಗ್ಗಿನ ಪ್ರದೇಶಕ್ಕೆ ಬಂದಿದ್ದರಿಂದ ಸೆಖೆ ಅಸಹನೀಯವಾಗಿತ್ತು. ಇನ್ನೂ ಪರ್ವತಪ್ರದೇಶದಲ್ಲೇ ಇದ್ದರೂ ಬಿಸಿಲಿನ ಧಗೆ ವಿಪರೀತವಿತ್ತು. ಇವೆಲ್ಲದರ ಪರಿಣಾಮ ತೂಕಡಿಕೆ. ಆದರೆ ಆರಾಮವಾಗಿ ತೂಕಡಿಸಲೂ ಸಾಧ್ಯವಿರಲಿಲ್ಲ. ನನ್ನ ಪಕ್ಕದಲ್ಲಿ ಭಯಂಕರವಾದ ನಾಯಿಯೊಂದು ಕುಳಿತಿತ್ತು! ಅದು ITBP ಯೋಧನೊಬ್ಬ ಕರೆದುಕೊಂಡು ಹೋಗುತ್ತಿದ್ದ ಸೇನೆಯ ನಾಯಿ. ಬಸ್ಸಿನುದ್ದಕ್ಕೂ ಹಾಯಾಗಿ ತಿರುಗಾಡಿಕೊಂಡು ಸುಖವಾಗಿದ್ದ ನಾಯಿ, ಅದಕ್ಕೆ ಸುಸ್ತಾದಾಗ ಬಂದು ನನ್ನ ಪಕ್ಕ ಕುಳಿತು ನಿದ್ದೆಹೋಯಿತು. ಭೀಕರವಾಗಿದ್ದ ಸೇನೆಯ ನಾಯಿಯ ಹಲ್ಲುಗಳು ನನ್ನನ್ನು ಸತತವಾಗಿ ಭಯಪಡಿಸುತ್ತಿದ್ದವು. ಏನಾದರೂ ಆಗಿ ಆ ನಾಯಿ ನನ್ನ ಮೇಲೆ ಎಗರಿದ್ದರೆ, ನಾನು ಹೃದಯಾಘಾತದಿಂದಲೇ ಸಾಯುತ್ತಿದ್ದೆ! ಶ್ವಾನಪ್ರಿಯರಾದ ನನ್ನ ಮಿತ್ರರು ನನ್ನ ಪರಿಸ್ಥಿತಿ ನೋಡಿ ನಗುತ್ತಿದ್ದರು. ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣಸಂಕಟ! ಗೌಚರ್ ಎಂಬ ಊರಿನಲ್ಲಿ ITBPಯ ಸೈನಿಕ ನಾಯಿಯ ಸಮೇತ ಇಳಿದುಹೋದ ನಂತರವೇ ನನಗೆ ಜೀವ ಬಂದಂತಾಗಿದ್ದು. ಆ ನಾಯಿಯನ್ನು ಚಮೋಲಿಯಿಂದ ಕೇದಾರನಾಥ ಕಣಿವೆಗೆ ಹೆಲಿಕಾಪ್ಟರ್‌ನಲ್ಲಿ ಕರೆದುಕೊಂಡು ಹೋಗಿ ಅಲ್ಲಿ ಅವಶೇಷಗಳ ಅಡಿ ಸಿಕ್ಕಿ ಬದುಕುಳಿದವರನ್ನು ಪತ್ತೆಹಚ್ಚುವ ಕಾರ್ಯಕ್ಕೆ ನಿಯೋಜಿಸುತ್ತಿದ್ದರಂತೆ.

ಪರ್ವತಗಳನ್ನು ನೋಡುತ್ತ, ನೆಮ್ಮದಿಯಿಂದ ತೂಕಡಿಸುತ್ತ ಕುಳಿತೆ. ಬೆಂಗಳೂರನ್ನು ತಲುಪುವ ಬಯಕೆ ಅತ್ಯಧಿಕವಾಗಿತ್ತು. ಮನದಲ್ಲಿ ನೂರಾರು ಆಲೋಚನೆಗಳು. ಅಪ್ಪ-ಅಮ್ಮ, ಗೆಳೆಯರನ್ನು ಯಾವಾಗ ನೋಡುವೆನೋ ಎಂಬ ಕಾತರ. ಹಾಗೆಯೇ ತೂಕಡಿಕೆ ಸಹ. ಆದರೆ ರುದ್ರಪ್ರಯಾಗದ ನಂತರ ತಿರುವೊಂದರಲ್ಲಿ ಒಮ್ಮೆಲೇ ನಿಂತ ಬಸ್ಸು ನನ್ನ ಆಲೋಚನೆಗಳೆಲ್ಲಕ್ಕೂ ತೂಕಡಿಕೆಗೂ ಕಡಿವಾಣ ಹಾಕಿ, ಕುತೂಹಲ ಮೂಡಿಸಿತು. ಕೆಳಗಿಳಿದು ನೋಡಿದರೆ ನಾವು ಕಂಡ ದೃಶ್ಯ ನಮ್ಮನ್ನು ಮತ್ತೊಮ್ಮೆ ಚಿಂತೆಗೀಡುಮಾಡಿತು. ಸುಮಾರು ಒಂದು ಕಿ.ಮೀ. ದೂರದಲ್ಲಿ ಭೂಕುಸಿತವೊಂದು ಸಂಭವಿಸಿದ್ದು, ಅಲ್ಲಿ ರಸ್ತೆ ರಿಪೇರಿ ಕೆಲಸ ಸಾಗುತ್ತಿತ್ತು. ವಾಹನಗಳ ಉದ್ದದ ಸಾಲು ಅಲ್ಲಿದ್ದು, ಕನಿಷ್ಠ ಇನ್ನೂರು ವಾಹನಗಳು ನಮ್ಮ ಮುಂದಿದ್ದವು. ಮತ್ತೊಮ್ಮೆ ನಮ್ಮ ವಿಮಾನದ ಟಿಕೆಟ್ ಹಣ ಹಾಳಾಯಿತಲ್ಲ ಎಂಬ ಯೋಚನೆ. ಈಗಾಗಲೇ ಅಪಾರ ಹಣ ಕೈಯಿಂದ ಹರಿದುಹೋಗಿತ್ತು. ನಮ್ಮ ಪುಣ್ಯ, ಒಂದು ಗಂಟೆಯ ನಂತರ ರಸ್ತೆಯನ್ನು ಸರಿಮಾಡಿ, ತೆರವುಗೊಳಿಸಿದರು. ಆಗ ಸಂಜೆಯಾಗಿದ್ದು, ಈ ವೇಗದಲ್ಲಿ ನಾವು ಋಷಿಕೇಶ ತಲುಪುವುದು ಕನಸು ಎಂದು ಅನ್ನಿಸಿತು.

ಕತ್ತಲಾಗುವವರೆಗೂ ಓಡಿದ ಬಸ್, ಕತ್ತಲಾಗುತ್ತಲೇ ಶ್ರೀನಗರ ಬಸ್ ನಿಲ್ದಾಣದಲ್ಲಿ ನಿಂತಿತು. "ಇಂದಿನ ಪ್ರಯಾಣವನ್ನು ಇಲ್ಲಿಗೇ ನಿಲ್ಲಿಸಿ, ನಾಳೆ ಬೆಳಿಗ್ಗೆ ಆರು ಗಂಟೆಗೆ ಋಷಿಕೇಶದ ಹಾದಿ ಹಿಡಿಯೋಣ. ಉಳಿದುಕೊಳ್ಳಲು ಸರ್ಕಾರಿ ಧರ್ಮಶಾಲೆಯಲ್ಲಿ ಉಚಿತ ವ್ಯವಸ್ಥೆಯಿದೆ" ಎಂದು ನಿರ್ವಾಹಕ ಪ್ರಯಾಣಿಕರೆಲ್ಲರಿಗೂ ಹೇಳಿದ. ಇನ್ನು ನಮ್ಮದೇ ದಾರಿ ಹಿಡಿಯೋಣವೆನ್ನಿಸಿ, ಮೊದಲು ಉತ್ತಮವಾದ ಹೋಟೆಲ್‌ವೊಂದನ್ನು ಹುಡುಕಿ ಕೊಠಡಿಯನ್ನು ಪಡೆದೆವು. ವಿಳಾಸ ನಮೂದಿಸುವಾಗ, ಎಲ್ಲಿಂದ ಬಂದಿದ್ದೆಂಬ ಜಾಗದಲ್ಲಿ ಬದರಿನಾಥ ಎಂದು ಬರೆದದ್ದನ್ನು ಕಂಡ ವ್ಯವಸ್ಥಾಪಕ ಅಚ್ಚರಿಗೊಂಡ. ಮತ್ತೊಮ್ಮೆ ಅವನು ಕೇಳಿದಾಗಲೂ ಅದೇ ಉತ್ತರ ಕೊಟ್ಟೆವು. ಸುತ್ತಮುತ್ತಲಿನ ಜನ ನಮ್ಮನ್ನು ಹೀರೋಗಳಂತೆ ನೋಡಿದರು! ಅಲ್ಲಿನ ಪರಿಸ್ಥಿತಿಯ ಬಗ್ಗೆ, ವ್ಯವಸ್ಥೆಗಳ ಬಗ್ಗೆ ಅವರ ಹಲವಾರು ಪ್ರಶ್ನೆಗಳಿಗೆ ಉತ್ತರಿಸಿ, ಕೊಠಡಿಗೆ ಹೋಗಿ ಬಿದ್ದುಕೊಂಡೆವು. ಸ್ವಚ್ಛವಾಗಿದ್ದ ಕೊಠಡಿ ನೋಡಿ ಹಾಯೆನಿಸಿತು. ಸ್ನಾನ ಮಾಡಿ ಮೂರು ದಿನಗಳಾಗಿತ್ತಾದ್ದರಿಂದ ಮನಸಾರೆ ನೀರನ್ನು ಮೈಮೇಲೆ ಸುರಿದುಕೊಂಡು, ಆಯಾಸ ಪರಿಹರಿಸಿಕೊಂಡೆವು. ಕೊಠಡಿಗೇ ಊಟವನ್ನು ತರಿಸಿಕೊಂಡು ತಿನ್ನುತ್ತ, ಮರುದಿನದ ಯೋಜನೆ ರೂಪಿಸಿದೆವು.

ನಾವು ಬಂದಿದ್ದ ಬಸ್ಸನ್ನು ನೆಚ್ಚಿಕೊಂಡಿದ್ದರೆ ಮಧ್ಯಾಹ್ನದವರೆಗೂ ಋಷಿಕೇಶವನ್ನು ಮುಟ್ಟುವ ಸಂಭವವಿರಲಿಲ್ಲ. ಅಲ್ಲಿಂದ ದೆಹಲಿಗೆ ಏಳೆಂಟು ಗಂಟೆಗಳ ದಾರಿ. ನಮ್ಮ ವಿಮಾನ ರಾತ್ರಿ ಎಂಟು ಗಂಟೆಗೆ ಹೊರಡುತ್ತಿತ್ತು. ನಾವು ಇಲ್ಲಿಂದಲೇ ಕಾರ್ ಮೂಲಕ ದೆಹಲಿಗೆ ಹೋಗದಿದ್ದರೆ ವಿಮಾನ

ಹಿಡಿಯಲು ಆಗುವುದಿಲ್ಲ ಎಂದೆನ್ನಿಸಿ, ವ್ಯವಸ್ಥಾಪಕನನ್ನು ದೆಹಲಿಗೆ ಕಾರ್ ಗೊತ್ತಿಮಾಡಿಕೊಡುವಂತೆ ಕೇಳಿಕೊಂಡೆವು. ಕೆಲಸಮಯದ ನಂತರ ವ್ಯವಸ್ಥಾಪಕ ಚಾಲಕನೊಬ್ಬನಿಗೆ ಕರೆಮಾಡಿ ಹೋಟೆಲ್‌ಗೇ ಕರೆಸಿದ. ಅವನ ಜೊತೆ ಮಾತನಾಡಿ, ಬೆಳಿಗ್ಗೆ ಮೂರು ಗಂಟೆಗೇ ಶ್ರೀನಗರದಿಂದ ಹೊರಡುವ ಸಿದ್ಧತೆ ನಡೆಸಿದೆವು. ವೆಚ್ಚ ಹೆಚ್ಚಾದರೂ ಮನೆಗೆ ಹೋಗುವ ಆಸೆಯೆದುರು ಅದು ಗೌಣವಾಗಿತ್ತು.

ರಾತ್ರಿ ಎರಡು ಗಂಟೆಗೇ ಎದ್ದು, ತಯಾರಾಗಿ ನಿಂತೆವು. ಹೇಳಿದ ಸಮಯಕ್ಕೆ ಸರಿಯಾಗಿ ಚಾಲಕ ವಾಹನದೊಂದಿಗೆ ಬಂದ. ವಾಹನವನ್ನೇರಿ ದೆಹಲಿಯೆಡೆಗೆ ಹೊರಟಾಗ ಸಮಯ ರಾತ್ರಿ ಮೂರು ಗಂಟೆ. ಆ ಸಮಯದಲ್ಲಿ ವಾಹನಗಳ ಸಂಚಾರ ನಿಷೇಧಿತವಾಗಿದ್ದರೂ, ಚಾಲಕ ಸ್ಥಳೀಯ ಪೊಲೀಸರನ್ನು ಬಲ್ಲವನಾಗಿದ್ದರಿಂದ ಯಾರೂ ನಮ್ಮನ್ನು ಅಡ್ಡತಡೆಯಲಿಲ್ಲ. ಶ್ರೀನಗರ ಊರನ್ನು ದಾಟಿದ ನಂತರ ಜಾಗವೊಂದನ್ನು ತೋರಿಸಿದ ಚಾಲಕ, ಪ್ರವಾಹ ಶ್ರೀನಗರದಲ್ಲಿ ಮಾಡಿದ ರಾದ್ಧಾಂತಗಳ ಬಗ್ಗೆ ಹೇಳಿದ. ಅವನು ತೋರಿಸಿದ ಜಾಗದಿಂದ ನದಿ ಸುಮಾರು ಇನ್ನೂರು ಮೀಟರ್ ದೂರದಲ್ಲಿ ಹರಿಯುತ್ತಿತ್ತಂತೆ. ಆದರೆ ಮಳೆಯಿಂದಾಗಿ ನೀರು ಹೆಚ್ಚಾಗಿ ಹರಿದುಬಂದಾಗ, ನದಿ ಉಕ್ಕಿ, ತನ್ನೊಳಗಿನ ಮಣ್ಣನ್ನೆಲ್ಲ ರಸ್ತೆಯ ಮೇಲೆ ಸುರಿದು ಹೋಗಿತ್ತು. ಹಾಗೆ ಸುರಿದ ಮಣ್ಣು ರಸ್ತೆಯುದ್ದಕ್ಕೂ ಹಾಗೇ ನಿಂತಿತ್ತು. ಪುಣ್ಯಕ್ಕೆ ಶ್ರೀನಗರದಲ್ಲಿ ಸಾವು-ನೋವುಗಳೇನೂ ಸಂಭವಿಸಿರಲಿಲ್ಲ. ಬದರಿನಾಥದಿಂದ ನಾವು ಬಂದೆವೆಂದು ಅರಿತಿದ್ದ ಚಾಲಕ ಅಲ್ಲಿನ ವಿಚಾರಗಳನ್ನೆಲ್ಲ ನಮ್ಮಿಂದ ತಿಳಿದುಕೊಂಡ. ದಾರಿಯುದ್ದಕ್ಕೂ ಅವನೊಂದಿಗೆ ಹರಟೆ ಹೊಡೆದೆ. ಚಹಾಗಾಗಿ ಒಂದೆಡೆ ನಿಲ್ಲಿಸಿದಾಗ, "ಅದೆಷ್ಟು ಮಾತಾಡುತ್ತೀಯ ಮಹರಾಯ! ನಾವು ನಿದ್ದೆ ಮಾಡಲು ಸಾಧ್ಯವೇ ಆಗುತ್ತಿಲ್ಲ!" ಎಂದು ಛೇಡಿಸಿದರೂ, ಮಿತ್ರರಿಬ್ಬರಿಗೂ ನನ್ನ ಮಾತಿನ ಚಪಲವನ್ನು ತಡೆಹಿಡಿಯಲು ಆಗುವುದಿಲ್ಲವೆಂದು ಮನದಟ್ಟಾಗಿತ್ತು.

ಈಗ ಟ್ರಾಫಿಕ್ ಗುಮ್ಮ ಇರಲೇ ಇಲ್ಲ. ಬ್ಯಾಸೀ, ಕೌಡಿಯಾಲಾ, ಶಿವಪುರಿಗಳನ್ನೆಲ್ಲ ಸುಖವಾಗಿ ದಾಟಿ, ಎಂಟು ಗಂಟೆಗೆ ಋಷಿಕೇಶವನ್ನು ಮುಟ್ಟಿದೆವು. ಅಲ್ಲಿಂದ ಮುಂದೆ ಇದೇ ಚಾಲಕನೇ ದೆಹಲಿಗೆ ಹೋಗಲು ಬೇರೊಂದು ಕಾರನ್ನು ಮೊದಲೇ ಗೊತ್ತುಮಾಡಿಕೊಟ್ಟಿದ್ದ. ದೆಹಲಿಗೆ ಹೋಗಲು ಬೇಕಾದ ರಹದಾರಿಯಾಗಲೀ, ಸಮವಸ್ತ್ರವಾಗಲೀ ಅವನಲ್ಲಿರಲಿಲ್ಲವಂತೆ.

ಕಾರ್ ಬದಲಿಸಿ ಕುಳಿತ ನಮಗೆ ಮತ್ತದೇ ಪ್ರಶ್ನೆಗಳು ಎದುರಾದವು. ಎಷ್ಟು ದಿನಗಳ ಕಾಲ ಬದರಿನಾಥದಲ್ಲಿದ್ದಿರಿ, ಹೇಗೆ ಬಂದಿರಿ ಎಂಬೆಲ್ಲ ಪ್ರಶ್ನೆಗಳಿಗೂ ಉತ್ತರಿಸಿದೆವು. ಈ ಎರಡನೆಯ ಕಾರಿನ ಚಾಲಕ ಉತ್ತರಕಾಶಿಯಲ್ಲಿ ಎಂಟು ದಿನಗಳ ಕಾಲ ಸಿಲುಕಿಕೊಂಡಿದ್ದನಂತೆ. ಅವನೂ ನಮ್ಮಂತೆಯೇ ಪ್ರವಾಹಪೀಡಿತನೇ ಆಗಿದ್ದ.

ಈ ಚಾಲಕ ಮೌನಿ. ಹೆಚ್ಚು ಮಾತಿಲ್ಲದೆ ರೂರ್ಕಿಯನ್ನು ದಾಟಿ, ಉತ್ತರಪ್ರದೇಶದೊಳಗೆ ಕಾಲಿಟ್ಟೆವು. ಬಿಸಿಲಿನ ಝಳ ನಮ್ಮನ್ನು ಕೊಲ್ಲುತ್ತಿತ್ತು. ಎಷ್ಟೋ ದಿನಗಳ ನಂತರ ಮತ್ತೊಮ್ಮೆ ಟ್ರಾಫಿಕ್ ಗುಮ್ಮ ನಮ್ಮನ್ನು ಕಾಡುತ್ತಿತ್ತು. ಮುಜಫ್ಫರನಗರ, ಮೀರತ್ ನಗರಗಳನ್ನು ದಾಟುವಷ್ಟರಲ್ಲಿ ಮಧ್ಯಾಹ್ನವಾಗಿತ್ತು. ದೆಹಲಿಯಲ್ಲಿ ಏನಾದರೂ ಖರೀದಿಸಬೇಕು, ಒಂದೊಳ್ಳೆಯ ಜಾಗವನ್ನು ಸೂಚಿಸೆಂದು ಅವನಿಗೆ ತಿಳಿಸಿದೆವು. ವಿಮಾನ ನಿಲ್ದಾಣಕ್ಕೆ ಹೋಗುವ ಮಾರ್ಗದಲ್ಲಿ ಸರೋಜಿನಿನಗರ ಮಾರುಕಟ್ಟೆಯಿದೆಯೆಂದೂ, ಅಲ್ಲೇ ಹೋಗೋಣವೆಂದೂ ಹೇಳಿದ ಅವನ ಮಾತಿಗೆ ಸಮ್ಮತಿಸಿದೆವು. ದೆಹಲಿ ಸಮೀಪಿಸುವಷ್ಟರಲ್ಲಿ ರಸ್ತೆಯಲ್ಲಿ ವಾಹನದಟ್ಟಣೆ ಅಪಾರವಾಗಿತ್ತು. ನೂರಾರು ಸಿಗ್ನಲ್‌ಗಳನ್ನು ದಾಟಿ ಸರೋಜಿನಿನಗರವನ್ನು ತಲುಪುವ ವೇಳೆಗಾಗಲೇ ದೆಹಲಿ ಬೇಸರವಾಗಿತ್ತು!

ಊಟ ಮುಗಿಸಿ, ಪ್ರೀತಿಪಾತ್ರರಿಗಾಗಿ ಒಂದಷ್ಟು ವಸ್ತುಗಳ ಖರೀದಿಗೆ ಇಳಿದೆವು. ದೆಹಲಿಯ ಆ ಥಳುಕುಬಳುಕಿನ ಮಾರುಕಟ್ಟೆಯ ಪ್ರದೇಶದಲ್ಲಿ ನಾವು ಕಾಡುಪ್ರಾಣಿಗಳಂತೆ ಯಾರಿಗಾದರೂ ಕಂಡುಬಂದಿದ್ದಲ್ಲಿ ಆಶ್ಚರ್ಯವೇನಿಲ್ಲ. ಗಡ್ಡ ಬೋಳಿಸಿ ಇಪ್ಪತ್ತು ದಿನಗಳಾಗಿದ್ದವು. ಸದಾ ಚಿಂತೆಯಲ್ಲಿ ಮುಳುಗಿದ್ದ ನಮ್ಮ ಮುಖಗಳು ಬಾಡಿಹೋಗಿದ್ದವು. ಅದೃಷ್ಟವಶಾತ್ ನಮ್ಮ ಬಟ್ಟೆಗಳು ಸರಿಯಾಗಿದ್ದುದರಿಂದ ಯಾರೂ ನಮ್ಮನ್ನು ಭಿಕ್ಷುಕರೆಂದು ಪರಿಗಣಿಸಲಿಲ್ಲ.

ಖರೀದಿ ಮುಗಿಸಿದ ನಂತರ ವಿಮಾನ ನಿಲ್ದಾಣದ ಹಾದಿ ಹಿಡಿದೆವು. ದೆಹಲಿಯ ಸೆಖೆಯನ್ನೂ, ಬಿಸಿಲನ್ನೂ, ಜನದಟ್ಟಣೆಯನ್ನೂ ನಮ್ಮಿಂದ ಇನ್ನು ತಡೆದುಕೊಳ್ಳಲು ಸಾಧ್ಯವೇ ಇರಲಿಲ್ಲ. ವಿಮಾನನಿಲ್ದಾಣದ ಹವಾನಿಯಂತ್ರಿತ ವಾತಾವರಣವೇ ಲೇಸು ಎಂದೆನ್ನಿಸಿ ದೆಹಲಿ ಬಿಟ್ಟು ಓಡಿದೆವು.

ಸಂಜೆ ನಾಲ್ಕು ಗಂಟೆಗೇ ವಿಮಾನನಿಲ್ದಾಣದಲ್ಲಿದ್ದೆವು. ಬೋರ್ಡಿಂಗ್ ಪಾಸ್ ಪಡೆದು ಪ್ರಯಾಣಿಕರ ಲೌಂಜ್‌ನಲ್ಲಿ ಕುಳಿತು, ವಿಮಾನಗಳು ಹಾರಾಡುವುದನ್ನು ನೋಡುತ್ತಿದ್ದಾಗ ಮನೆಗಿನ್ನು ಮೂರೇ ತಾಸು ಎಂಬ ಆನಂದ ಮೂಡಿತು. ದುಬಾರಿಯಾದ ಕಾಫಿ ಹೀರುತ್ತಿದ್ದರೂ, ಅದರಲ್ಲಿ ಪವನ್‌ನ ಚಹಾದ ಪ್ರೀತಿಯ ಸ್ವಾದ ಸಿಗಲಿಲ್ಲ. ಇಷ್ಟೆಲ್ಲ ಅನಾಹುತಗಳನ್ನು ನೋಡಿದ್ದರೂ ನಮಗಾರಿಗೂ ಹಿಮಾಲಯದ ವಿಷಯದಲ್ಲಿ ಕೊಂಚವೂ ಬೇಸರ ಮೂಡಿರಲಿಲ್ಲ.

ಅಧಿಕಾರಿಗಳು ವಿಮಾನವನ್ನೇರಲು ಧ್ವನಿವರ್ಧಕದಲ್ಲಿ ಸೂಚಿಸಿದರು. ರಾತ್ರಿ ಎಂಟು ಗಂಟೆಗೆ ಹೊರಟ ವಿಮಾನ ಹನ್ನೊಂದು ಗಂಟೆಗೆ ಸರಿಯಾಗಿ ಬೆಂಗಳೂರು ಅಂತಾರಾಷ್ಟ್ರೀಯ ವಿಮಾನನಿಲ್ದಾಣದಲ್ಲಿ ನಮ್ಮನ್ನಿಳಿಸಿತು. ನಮ್ಮನ್ನು ಎದುರುಗೊಳ್ಳಲು ಬಂದಿದ್ದ ಮಿತ್ರ ಪರಮೇಶ್ ಕಣ್ಣಿಗೆ ಬಿದ್ದ ಮೇಲಂತೂ

ನಾವಿನ್ನು ಭಯಪಡಬೇಕಾದ ಅವಶ್ಯಕತೆಯೇ ಇರಲಿಲ್ಲ. ಅವರು ಕೊಟ್ಟ ಹಸ್ತಲಾಘವ ಯುದ್ಧವನ್ನು ಗೆದ್ದು ಬಂದವರಿಗೆ ಕೊಡುವ ವೀರಪುರಸ್ಕಾರದಂತಿತ್ತು. ಮನೆಯತ್ತ ಹೊರಟೆವು.

ಶ್ರೀಧರ್‌ರನ್ನು ಅವರ ಮನೆಯೆದುರು ಇಳಿಸಿ, ಜಯರಾಮನ ಮನೆಯತ್ತ ಹೊರಟೆವು. ಜಯರಾಮನ ಎಲ್ಲ ಅಣ್ಣಂದಿರೂ, ಜೊತೆಗೆ ನನ್ನ ತಂದೆ–ತಾಯಿ, ಎಲ್ಲರೂ ಅಲ್ಲಿ ನೆರೆದಿದ್ದರು. ಕಾರಿನಿಂದಿಳಿದ ನನಗೆ ಅಪ್ಪನಿಂದ ಬೆಚ್ಚಗಿನ ಅಪ್ಪುಗೆಯೂ, ಅಮ್ಮನಿಂದ ಪ್ರೀತಿಯ ಮುತ್ತುಗಳೂ ಬದುಕಿ ಬಂದದ್ದಕ್ಕಾಗಿ ಸಿಕ್ಕ ಕೊಡುಗೆಗಳು! ಕಲ್ಲಿನ ಇಡ್ಲಿ, ನಾಯಿ ಬನ್, ನೀರು ಟೀ, ಕೆಟ್ಟ ಪರೋಟಾ ತಿಂದು ಕಾಲಕಳೆದಿದ್ದ ನಮಗೆ ಅತ್ತಿಗೆ ಮಾಡಿ ಬಡಿಸಿದ ಅಡುಗೆ ಅಮೃತದಂತಿತ್ತು. ಎಲ್ಲರಿಗೂ ಆಗಲೇ ಕಥೆ ಕೇಳುವ ಧಾವಂತ. ಎಲ್ಲರಿಗೂ ಕಥೆ ಹೇಳಿ ಮಲಗುವಷ್ಟರಲ್ಲಿ ಗಂಟೆ ಎರಡಾಗಿತ್ತು. ಇಪ್ಪತ್ತನಾಲ್ಕು ಗಂಟೆಗಳ ಕಾಲ ನಿದ್ದೆಯಿಲ್ಲದೆ ಕಳೆದಿದ್ದೆವು. ಕಥೆ ಹೇಳುವ ಕೆಲಸವನ್ನು ಮರುದಿನಕ್ಕೆ ಮುಂದೂಡಿ ನಿದ್ದೆ ಮಾಡುವ ಪ್ರಯತ್ನ ಮಾಡಿದೆವು. ಕಣ್ಣೆದುರು ಅದೇ ಹಿಮಾಲಯ, ಪುಷ್ಪಗಳ ಕಣಿವೆ, ಹೇಮಕುಂಡದ ಹಿಮ, ಕೇದಾರನಾಥದ ದೇವಾಲಯ, ಅದೇ ಬದರಿನಾಥ, ಜಲಪಾತದ ರಸ್ತೆ, ಪಾಳುಬಿದ್ದ ಗೋವಿಂದಘಾಟ್, ದಿನೇಶ್–ಪವನ್, ನರ–ನಾರಾಯಣ ಪರ್ವತ!

# ಮುಗಿದ ನಂತರ

ಹಿಮಾಲಯವು ಹಠಹಿಡಿದು ಕುಳಿತ ವೊಂಡು ಪ್ರೇಯಸಿಯಂತೆ! ನಾವು ಅದರ ಜೊತೆಗಿದ್ದಾಗ ಆನಂದ ತುಂಬಿತ್ತಾದರೂ, ನಾವು ಹೊರಟಾಗ ಅತ್ತು-ಕರೆದು ರಂಪ ಮಾಡಿ, ನಾವು ಇನ್ನೂ ಹಲವಾರು ದಿನ ಅಲ್ಲೇ ಉಳಿದುಕೊಳ್ಳುವಂತೆ ಮಾಡಿತ್ತು. ಆದರೆ ಕೆಳಗಿಳಿದು ಬಂದ ಮರುಕ್ಷಣದಿಂದಲೇ ಮತ್ತೊಮ್ಮೆ ನಮ್ಮನ್ನು ಸೆಳೆದ ಹಿಮಾಲಯದ ಮಾಯೆಯಿಂದ ತಪ್ಪಿಸಿಕೊಳ್ಳಲು ಎಂದೆಂದಿಗೂ ಸಾಧ್ಯವಿಲ್ಲ! ಋಷಿಕೇಶದ ಬಳಿ ಗುಡ್ಡಗಾಡು ರಸ್ತೆಯ ಮುಕ್ತಾಯವಾದಂತೆಯೇ ಹಿಮಾಲಯದ ವಿರಹ ತೀವ್ರವಾಗಿ ಬಾಧಿಸಿತ್ತು. ಆ ಕ್ಷಣವೇ ಮರಳಿ ಮತ್ತೊಮ್ಮೆ ಹೋಗಬೇಕೆಂದು ಆಸೆಯಾಗಿತ್ತು. ಬೆಂಗಳೂರನ್ನು ತಲುಪಿದಾಗಲಂತೂ, ಮನೆ ಮುಟ್ಟಿದ್ದ ಸಂತಸವೂ, ಹಿಮಾಲಯ ಬಿಟ್ಟು ಬಂದ ವೇದನೆಯೂ ಒಟ್ಟೊಟ್ಟಿಗೆ ಅನುಭವಕ್ಕೆ ಬಂದಿತ್ತು.

ನಾನಲ್ಲಿ ಸಿಲುಕಿ ನಿಂತಿದ್ದಾಗ, ಭಾರತೀಯ ವಿಜ್ಞಾನ ಸಂಸ್ಥೆಯ ನನ್ನ ಗೆಳೆಯರೆಲ್ಲರೂ ಒಂದೆಡೆ ಸೇರಿ, ನನ್ನ ವಿಚಾರದಲ್ಲಿ ತಮಾಷೆ ಮಾಡಿಕೊಂಡು ನಕ್ಕಿದ್ದರಂತೆ. ನನ್ನ ಮೇಲೆ ಅವರುಗಳು ಇಟ್ಟಿದ್ದ ನಂಬಿಕೆಯನ್ನು ಸೂಚಿಸುವ ನಡೆಯದು. ನಾನು ಬದುಕಿ ಬರುವೆನೆಂದು ಬಲವಾದ ನಂಬಿಕೆಯಿಲ್ಲದೆ ಹೋಗಿದ್ದಲ್ಲಿ ಯಾರೊಬ್ಬರೂ ಹಾಗೆ ಮಾಡುತ್ತಿರಲಿಲ್ಲವೆಂಬುದು ನೂರಕ್ಕೆ ನೂರರಷ್ಟು ಸತ್ಯ. ನನ್ನನ್ನು ನೋಡಿದ್ದ ಮಿತ್ರರನೇಕರ ತಂದೆ-ತಾಯಿಯರೂ ಸಹ ನಾನು ಬಂದೇ ಬರುವೆನೆಂದು ಖಾತರಿಯಿಂದಿದ್ದರು. ನನ್ನ ಅಪ್ಪ-ಅಮ್ಮ, ಜಯರಾಮನ ಅಣ್ಣಂದಿರು, ಶ್ರೀಧರ್‌ರ ಪತ್ನಿ – ಇವರೆಲ್ಲರೂ ನಮಗಾಗಿ ಯುದ್ಧವನ್ನೇ ಮಾಡಿದ್ದರು. ಅವರು ಮಾಡದ ಪ್ರಯತ್ನಗಳಿಲ್ಲ! ಇವರೆಲ್ಲರ ನಂಬಿಕೆ-ಹಾರೈಕೆಗಳೇ ನಾವು ಏನೇನೂ ಅಡ್ಡಿ-ಆತಂಕಗಳಿಲ್ಲದೆ ಸುಖವಾಗಿ ಮರಳಿ ಬರುವಷ್ಟು ಶಕ್ತಿ-ಸಾಮರ್ಥ್ಯ ಕೊಟ್ಟಿದ್ದು.

ನೂರಾರು ಜನರಿಗೆ ನಮ್ಮ ಕಥೆ ಹೇಳಿದರೂ ಎಂದೂ ಬೇಸರವಾಗಲಿಲ್ಲ. ಕಡೆಗೊಮ್ಮೆ ಬರವಣಿಗೆಯ ಮೂಲಕ ನಾವು ಕಂಡ ಸುಖ-ದುಃಖಗಳನ್ನೆಲ್ಲ ತಿಳಿಸುವುದೇ ಸುಲಭಮಾರ್ಗ ಎಂದೆನಿಸಿದಾಗ ಈ ಹೊತ್ತಿಗೆಯ ರಚನೆಗೆ ಕೈಹಾಕಿದೆ. ಇದರ ಮೂಲಕ ಅಲ್ಲಿ ಅನುಭವಿಸಿದ ಅಸಂಖ್ಯಾತ ನೋವು-ನಲಿವುಗಳನ್ನು ಮತ್ತೊಮ್ಮೆ ಮನದಲ್ಲಿ ಜೀವಿಸಿದೆ.

ಬದರಿನಾಥದಲ್ಲಿ ನಾನು ಕಳೆದ ಆ ಹನ್ನೆರಡು ದಿನಗಳ ಕಾಲ ನಾನು ಕಲಿತ ಪಾಠಗಳು ಅಷ್ಟಿಷ್ಟಲ್ಲ. ಬದುಕನ್ನೇ ಬದಲಾಯಿಸಿದ ದಿನಗಳವು. ನನ್ನ ಜೀವನದ ಬಗೆಯನ್ನು, ರೀತಿ-ನೀತಿಗಳನ್ನು, ಸರಿ-

ತಪ್ಪುಗಳನ್ನು ವಿಮರ್ಶಿಸಿಕೊಳ್ಳಲು ದೇವರು ನನಗಿತ್ತ ಒಂದು ಅದ್ಭುತ ಅಪೂರ್ವ ಅವಕಾಶವದು. ನಾನು ನೋಯಿಸಿದ ಎಷ್ಟೋ ಮಿತ್ರರನ್ನು ನೆನೆದು ಕೊರಗಿದ್ದೇನೆ. ಕಳೆದುಕೊಂಡ ಗೆಳೆಯ–ಗೆಳತಿಯರನ್ನು ನೆನೆದು ಅತ್ತಿದ್ದೇನೆ. ಸೇನೆಯವರ ನಿಃಸ್ವಾರ್ಥತೆಯನ್ನು ನೋಡಿ ಬೆರಗಾಗಿದ್ದೇನೆ. ಕಷ್ಟಕಾಲದಲ್ಲಿ ಜನರ ನಡವಳಿಕೆಗಳು ಹೇಗಿರುತ್ತವೆ ಎಂಬುದರ ಪ್ರತ್ಯಕ್ಷ ಅನುಭವವನ್ನು ಬದರಿನಾಥ ಕಲಿಸಿತು. ನನ್ನ ಬದುಕಿನ ಯಾನದಲ್ಲಿ ಪ್ರವೇಶಿಸಿ ಪ್ರೇರಣೆ ನೀಡಿದ, ಜೀವಕ್ಕೆ ಜೀವ ಕೊಡುವ ಮಿತ್ರರು ಯಾರುಯಾರು ಎಂದು ಸ್ಪಷ್ಟ ಚಿತ್ರಣ ಮೂಡಿಸಿದ್ದು ಉತ್ತರಾಖಂಡದ ಈ ಮಹಾಪ್ರವಾಹವೇ. ಜೀವಂತವಾಗಿರುವುದರ ಬೆಲೆಯೇನು ಎಂಬುದನ್ನು ಸಾವಿಗೆ ಅಷ್ಟು ಸನಿಹ ಹೋದ ನಂತರವೇ ಅರಿತದ್ದು.

ಬದರಿನಾಥದಲ್ಲೊಬ್ಬ ಸಿಖ್ ವ್ಯಕ್ತಿಯ ಜೊತೆಗೆ ಮಾತನಾಡುವಾಗ ಅವನು ಹೀಗೆ ಹೇಳಿದ್ದ. "ಏನು ನಡೆಯಿತೋ ಎಲ್ಲವೂ ಘೋರವೆಂಬುದು ನಿಜ. ಆದರೆ ಜನರ ನಂಬಿಕೆ ಇದರಿಂದ ಕೊನೆಯಾಗುವುದಿಲ್ಲ. ಮುಂದಿನ ವರ್ಷ ಮತ್ತೊಮ್ಮೆ ಜನರು ತೀರ್ಥಯಾತ್ರೆಗೆ ಬಂದೇ ಬರುತ್ತಾರೆ. ವಾಹೇ ಗುರುವಿನ ಮೇಲಿನ ಭಕ್ತಿ ಅವರನ್ನು ಇಲ್ಲಿಗೆ ಕರೆದು ತರುವುದು ಖಂಡಿತ." ಅಂತೆಯೇ ಸೆಪ್ಟೆಂಬರ್ ೨೦೧೩ರಲ್ಲಿ ಹೇಮಕುಂಡದ ಯಾತ್ರೆ ಪುನರಾರಂಭಗೊಂಡಿದೆ. ಅಕ್ಟೋಬರ್ ಮೊದಲ ವಾರದಲ್ಲಿ ಕೇದಾರನಾಥದಕ್ಕೂ ಯಾತ್ರೆ ಶುರುವಾಗಿದೆ. ಬದರಿನಾಥದವರೆಗಿನ ರಸ್ತೆ ಇದೀಗ ರಿಪೇರಿಯಾಗಿದೆ. ಅಕ್ಟೋಬರ್ ಮೊದಲ ವಾರದಲ್ಲಿ ಪುಷ್ಪಗಳ ಕಣಿವೆ ಹೋಗಿದ್ದ ವ್ಯಕ್ತಿಯೊಬ್ಬ ಅಲ್ಲಿನ ಪರಿಸರಕ್ಕೆ ಏನೊಂದೂ ಧಕ್ಕೆಯಾಗಿಲ್ಲವೆಂದು ಛಾಯಾಚಿತ್ರಗಳ ಸಮೇತ ವರದಿ ಮಾಡಿ, ಅಂತರ್ಜಾಲದಲ್ಲಿ ಬರೆದಿದ್ದಾನೆ. ಜನಜೀವನ ಮರಳಿ ಸಹಜಸ್ಥಿತಿಗೆ ಬಂದಿದೆ. ಇದೀಗ ಚಳಿಗಾಲ ಪ್ರಾರಂಭವಾಗಿರುವುದರಿಂದ ಕೇದಾರ–ಬದರಿನಾಥಗಳಿಗೂ, ಪುಷ್ಪಗಳ ಕಣಿವೆ – ಹೇಮಕುಂಡ ಸಾಹಿಬ್‌ಗಳಿಗೂ ನಡೆಯುವ ಯಾತ್ರೆ ಸ್ಥಗಿತಗೊಂಡಿದೆಯಾದರೂ ಮುಂದಿನ ಮೇ ಮಾಸದಲ್ಲಿ ಮತ್ತೆ ಅಪಾರ ಸಂಖ್ಯೆಯ ಜನ ಅಲ್ಲಿಗೆ ಭೇಟಿ ನೀಡುವುದರಲ್ಲಿ ಸಂಶಯವಿಲ್ಲ. ಬದರಿನಾಥದ ಸರ್ದಾರ್ಜಿ ಹೇಳಿದ್ದು ನಿಜವಾಗುತ್ತದೆ.

ನವೆಂಬರ್ ೨೦೧೩ರಲ್ಲಿ ಜಯರಾಮ್ ಮತ್ತು ಶ್ರೀಧರ್ ಮತ್ತೊಮ್ಮೆ ಹಿಮಾಲಯ ಪ್ರವಾಸವನ್ನು ಯಶಸ್ವಿಯಾಗಿ ಮುಗಿಸಿದರು. ಈ ಬಾರಿ ಅವರು ಹೋದದ್ದು ಹಿಮಾಚಲ ಪ್ರದೇಶ ಮತ್ತು ಕಾಶ್ಮೀರಗಳಿಗೆ. ನನ್ನ ಸಂಶೋಧನೆಯ ಕಾರ್ಯ ಮುಗಿಯುವವರೆಗೂ ಮತ್ತೊಮ್ಮೆ ಹಿಮಾಲಯ ಪ್ರವಾಸ ಕೈಗೊಳ್ಳುವುದಿಲ್ಲವೆಂದು ನಿರ್ಧರಿಸಿಕೊಂಡಿದ್ದೇನೆ. ಅಪಘಾತದ ಭಯದಿಂದಲ್ಲ, ಪ್ರಾಧ್ಯಾಪಕರ ಕೆಂಗಣ್ಣಿಗೆ ಗುರಿಯಾಗುತ್ತೇನೆ ಎಂಬ ಭೀತಿಯಿಂದ!

"ಕಾಕ್ ಭುಸಂಡಿ" ಕಣಿವೆ ಕರೆಯುತ್ತಿದೆ. ನನ್ನ ಡಿಗ್ರಿ ದೊರೆತ ವರ್ಷವೇ ಎರಡು–ಮೂರು ವಾರ ಘಾಂಘರಿಯಾ ಸುತ್ತಮುತ್ತಲಿನ ಹಿಮಾಲಯದ ಆ ಅತ್ಯಂತ ರಮಣೀಯ ಪರಿಸರದಲ್ಲಿ ದಿನಗಳನ್ನು ಕಳೆಯಬೇಕೆಂಬ ಬಯಕೆ ಮೂಡಿಯಾಗಿದೆ.

ಇವೆಲ್ಲವನ್ನೂ ಕೇಳಿ ನಗುವ ಜನರು ಹಲವಾರು. "ಇಷ್ಟೆಲ್ಲಾ ಆದರೂ ನಿಮಗಿನ್ನೂ ಹಿಮಾಲಯದ ಹುಚ್ಚು ಬಿಟ್ಟಿಲ್ಲವೇನು?" ಎಂದು ಅವರು ಕೇಳುವ ಪ್ರಶ್ನೆಗೆ ಮಂದಹಾಸ ಮಾತ್ರ ನಮ್ಮ ಉತ್ತರ. ನಮ್ಮ ಮೇಲೆ ಪರ್ವತಗಳು ಮಾಡಿರುವ ಮೋಡಿಯನ್ನು ಯಾರಿಗೂ ವಿವರಿಸಲು ನಾವು ಶಕ್ತರಲ್ಲ. ಅವನ್ನೆಲ್ಲ ಅನುಭವಿಸಿಯೇ ತೀರಬೇಕು.

ಹಿಮಾಲಯ... ಅದೊಂದು ಗೀಳು! Himalayas is the ultimate obsession! ಒಮ್ಮೆ ಅದರ ತೆಕ್ಕೆಗೆ ಜಾರಿದರೆ ಮುಗಿಯಿತು, ಅದರಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ತಪ್ಪಿಸಿಕೊಳ್ಳಲು ಮನಸ್ಸು ಬಯಸುವುದೂ ಇಲ್ಲ. ಯಾಂತ್ರಿಕ ಬದುಕಿನಲ್ಲಿ ಸ್ಫೂರ್ತಿ ತುಂಬುವ ಹಿಮಾಲಯದ ರಮಣೀಯ ದೃಶ್ಯಗಳ ನೆನಪುಗಳು, ಅನುಭವಗಳು ನಮ್ಮನ್ನು ಬೇರೊಂದು ಲೋಕಕ್ಕೆ ಒಯ್ದುಬಿಡುತ್ತವೆ. ಅವೆಲ್ಲ ನೆನಪಾದಾಗ ಮನಸ್ಸು ಹಾಡಿಕೊಳ್ಳುವುದಿಷ್ಟೇ... ಯೇ ಕೌನ್ ಚಿತ್ರಕಾರ್ ಹೈ, ಯೇ ಕೌನ್ ಚಿತ್ರಕಾರ್...

# ಆಕರಗಳು

ಬಹುತೇಕ ನೆನಪಿನಶಕ್ತಿಯೊಂದನ್ನೇ ಆಧಾರವಾಗಿಟ್ಟುಕೊಂಡು ಈ ಪುಸ್ತಕವನ್ನು ಬರೆದಿರುವೆನಾದರೂ ಅನೇಕ ಲೇಖನಗಳೂ, ಪುಸ್ತಕಗಳೂ ಕೆಲವು ವಿಷಯಗಳನ್ನು ನನ್ನ ಗಮನಕ್ಕೆ ತರಲು ಸಹಕಾರಿಯಾಗಿವೆ. ಜೊತೆಗೆ, ಈ ವಿಚಾರದಲ್ಲಿ ಇರುವ ಕೆಲವು ಉತ್ತಮ ಆಕರಗಳನ್ನೂ ಇಲ್ಲಿ ಪಟ್ಟಿಮಾಡಿದ್ದೇನೆ.


1. [Book] "The Bhyundar Valley", Chandrashekhar S Chauhan. Vasundhara Arts Publication, July 2011
2. [Website] http://www.valleyofflowers.info
3. ಅಸಂಖ್ಯಾತ ವಿಕಿಪೀಡಿಯಾ ಲೇಖನಗಳು
4. [Book] "Floral Gallery of Himalayan Valley of Flowers and Adjacent Places", K R Keshava Murthy, 2011
5. ಅಂತರ್ಜಾಲದಲ್ಲಿನ ಹಲವಾರು ಜಾಲತಾಣಗಳು
6. "ಕನ್ನಡಪ್ರಭ" ದಿನಪತ್ರಿಕೆಯಲ್ಲಿ ಪ್ರಕಟವಾದ ರಾಧಾಕೃಷ್ಣ ಭಡ್ತಿಯವರ "ದೇವ ನೆಲದಲ್ಲಿ ರುದ್ರಭೂಮಿ" ಅಂಕಣದ ಲೇಖನಗಳು ಮತ್ತು ಅದೇ ಹೆಸರನ್ನು ಹೊತ್ತ ಪುಸ್ತಕ.
7. [Website] http://defencelover.in/2013/10/22/unseen-images-of-uttrakhandh-flood-relief-work-by-indian-armed-forces-saluting-our-soldiers/
8. [Website] http://defencelover.in/2013/10/27/some-more-unseen-pics-of-flood-relief-work-in-uttrakhand-by-our-armed-forcesmust-see/


(ಕಡೆಯ ಎರಡು ಜಾಲತಾಣಗಳೂ ಸೇನೆಯವರು ಯಾತ್ರಿಕರ ರಕ್ಷಣೆಗಾಗಿ ಕೈಗೊಂಡ ಕಾರ್ಯಾಚರಣೆಯ ಛಾಯಾಚಿತ್ರಗಳನ್ನು ಒಳಗೊಂಡಿವೆ.)